ಲೂಯಿ ಫಿಷರ್

---

# ಮಹಾತ್ಮ ಗಾಂಧಿ

## ಜಗತ್ತಿಗೆ ಅವರ ಸಂದೇಶ

ಅನುವಾದಕರು

**ಎಚ್. ವಿ. ಸಾವಿತ್ರಮ್ಮ**



ಮೈಸೂರು

**ಕಾವ್ಯಾಲಯ : : ಪ್ರಕಾಶಕರು**

# ವಿಷಯ ಸೂಚಿಕೆ

## ಭಾಗ ೧ : ಜನ್ಮ, ಮಾಹಾತ್ಮ್ಯ



## ಭಾಗ ೨ : ಇಂಡಿಯಾದಲ್ಲಿ ಗಾಂಧಿ

(೧೯೧೫ ಜನವರಿ ೯ ರಿಂದ ೧೯೪೬ ರ ಮಾರ್ಚಿ ೨೩)

## ಭಾಗ ೩ : ವಿಜಯ ಮತ್ತು ದುರಂತ

(ಮಾರ್ಚ್ ೨೪, ೧೯೪೬ ಜನವರಿ ೩೦, ೧೯೪೮)

# ಜನ್ಮ, ಮಾಹಾತ್ಮ್ಯ

## ೧. ಲೋಕದ ಶೋಕ

ಹೊಸ ದೆಹಲಿಯ ಬಳಿ, ಯಮುನೆಯ ಪವಿತ್ರ ಜಲದ ಹತ್ತಿರ ಅಂತಿಮಯಾತ್ರೆ ದಹನ ಭೂಮಿ ಸೇರುವುದನ್ನು ನಿರೀಕ್ಷಿಸುತ್ತಾ ಲಕ್ಷಾಂತರ ಜನ ಬಿಸಿಲಿನಲ್ಲಿ ಕಾದು ನಿಂತಿದ್ದರು. ಎಲ್ಲೆಲ್ಲೂ ಬಿಳಿಯ ಬಣ್ಣ ತುಂಬಿತ್ತು; ಹೆಂಗಸರ ಬಿಳೀ ನೂಲಿನ ಸೀರೆಗಳು, ಗಂಡಸರ ಬಟ್ಟೆ ಟೋಪಿ, ರುಮಾಲು ಗಳು.

ನದಿಯಿಂದ ನೂರಡಿಗಳ ದೂರ, ರಾಜಘಾಟಿನಲ್ಲಿ, ಕಲ್ಲು, ಇಟ್ಟಿಗೆ ಮಣ್ಣುಗಳಿಂದ ಹೊಸ ಚಿತೆ ಸಿದ್ಧವಾಗಿತ್ತು; ಎಂಟಡಿ ಚದರ, ಎರಡಡಿ ಎತ್ತರ. ತೆಳುವಾದ, ಉದ್ದವಾದ, ಸುಗಂಧ ದ್ರವ್ಯಗಳಿಂದ ಲೇಪಿತವಾದ, ಶ್ರೀಗಂಧದ ಕೊರಡುಗಳು ಪೇರಿಸಲ್ಪಟ್ಟಿದ್ದವು. ಉತ್ತರದ ಕಡೆ ತಲೆಮಾಡಿ ಮಹಾತ್ಮ ಗಾಂಧಿಯ ದೇಹ ಚಿತೆಯ ಮೇಲಿಡಲ್ಪಟ್ಟಿತು. ಬುದ್ಧ ಕೊನೆ ಗಂಡದ್ದೂ ಆ ರೀತಿಯಲ್ಲಿಯೇ.

ಸಂಜೆ ನಾಲ್ಕು ಮುಕ್ಕಾಲು ಘಂಟೆಗೆ ಮಹಾತ್ಮನ ಮೂರನೆಯ ಮಗ ರಾಮದಾಸ್ ಚಿತೆಗೆ ಬೆಂಕಿ ಹಚ್ಚಿದನು. ಕೊರಡುಗಳು ಉರಿಯಲಾರಂಭಿಸಿದವು. ಸೇರಿದ್ದ ಜನ ನರಳಿದರು. ಹೆಂಗಸರು ರೋದಿಸಿದರು. ಗಂಡಸರು ಅತ್ತರು. ಮರ ಸಿಡಿದು, ಉರಿ ಭಗ್ಗನೆ ಹತ್ತಿಕೊಂಡಿತು.

ನಿಶ್ಶಬ್ದವಾಗಿತ್ತು. ಗಾಂಧಿಯ ದೇಹ ಬೂದಿಯಾಗುತ್ತಿತ್ತು. ಒಂದು ದಿನ ಮುಂಚೆ ೧೯೪೮ ರ ಜನವರಿ ೩೦ ನೇ ತಾರೀಖು, ಒಬ್ಬ ಯುವಕ, ಇಂಡಿಯದ ನಾಯಕ ಮೋಹನ್‌ದಾಸ್ ಕರಮ್‌ಚಂದ್ ಗಾಂಧಿಯನ್ನು ಗುಂಡಿಟ್ಟು ಕೊಂದಿದ್ದನು.

ಫ್ರೆಂಚರ ಮುಖ್ಯಮಂತ್ರಿಯಾಗಿದ್ದ ಲೆಯಾನ್ ಬ್ಲಂ–"ನಾನು ಗಾಂಧಿಯನ್ನು ಕಂಡಿಲ್ಲ. ಆತನ ಭಾಷೆ ನನಗೆ ತಿಳಿದಿಲ್ಲ. ಆತನ ದೇಶದಲ್ಲಿ ನಾನು ಕಾಲಿಟ್ಟಿಲ್ಲ; ಆದರೂ ಯಾರೋ ಹತ್ತಿರದ ಪ್ರೀತಿಯ ಬಂಧುವನ್ನು ಕಳೆದು ಕೊಂಡಷ್ಟು ದುಃಖವನ್ನನುಭವಿಸುತ್ತಿದ್ದೇನೆ. ಈ ಅಸಾಧಾರಣ ಮನುಷ್ಯನ

ಸಾವಿನಿಂದ ಜಗತ್ತೆಲ್ಲಾ ದುಃಖದಲ್ಲಿ ಮುಳುಗಿದೆ" ಎಂದು ಬರೆದನು. ಸತ್ತಾಗಲೂ, ಗಾಂಧಿ ಎಂದಿನಂತೆಯೇ ಆಸ್ತಿ, ಸಂಪತ್ತು ಬಿರುದು, ಅಧಿಕಾರ, ವೈಜ್ಞಾನಿಕ ಸಾಧನೆ, ವಿದ್ಯಾಪ್ರಶಸ್ತಿಗಳೊಂದೂ ಇಲ್ಲದ ಸಾಧಾರಣ ಪ್ರಜೆಯಾಗಿದ್ದನು. ಆದರೆ ಎಲ್ಲಾ ಸರ್ಕಾರದ ಮುಖ್ಯಾಧಿಕಾರಿಗಳೂ, ಮತಗಳ ಗುರುಗಳೂ, ಈ ಎಪ್ಪತ್ತೆಂಟು ವರ್ಷದ, ತುಂಡು ಬಟ್ಟೆಯ ಮುದುಕನಿಗೆ ಸನ್ಮಾನವನ್ನು ನೀಡಿದರು. ಪ್ರೆಸಿಡೆಂಟ್ ಟ್ರೂಮನ್, ಬ್ರಿಟನ್ನಿನ ರಾಜ, ಫ್ರಾನ್ಸಿನ ರಾಷ್ಟ್ರಾಧ್ಯಕ್ಷ, ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್, ಪೋಪ್ ಪಿಯಸ್, ಲಂಡನ್ನಿನ ಮುಖ್ಯ ರಬ್ಬಿ (Rabbi), ಟಿಬೆಟ್ಟಿನ ದಲೈಲಾಮ, ಮೂರು ಸಾವಿರಕ್ಕೂ ಹೆಚ್ಚು ಜನ ವಿದೇಶೀಯರು, ಇಂಡಿಯಾಕ್ಕೆ ಅಯಾಚಿತವಾಗಿ ಅನುತಾಪ ಸಂದೇಶಗಳನ್ನು ಕಳುಹಿಸಿದರು. ಅಂತರರಾಷ್ಟ್ರೀಯ ಸಂಸ್ಥೆಯ ಭದ್ರತಾ ಸಭೆ ಕಾರ್ಯ ಕಲಾಪಗಳನ್ನು ನಿಲ್ಲಿಸಿ ಗಾಂಧಿಗೆ ಗೌರವವನ್ನು ಸಲ್ಲಿಸಿತು. ಬ್ರಿಟನ್ನಿನ ಪ್ರತಿನಿಧಿ ಫಿಲಿಪ್ ನೋಯಲ್ ಬೇಕರ್ ಗಾಂಧಿಯನ್ನು, "ಬಡವರ, ಅನಾಥರ, ದಿಕ್ಕಿಲ್ಲದವರ ಬಂಧು" ಎಂದು ಹೊಗಳಿದನು. "ಗಾಂಧಿಯ ಮಹತ್ಕಾರ್ಯಗಳು ಮುಂದೆ ಕಾಣ ಬರುತ್ತವೆ," ಎಂದು ಹೇಳಿದನು. ಭದ್ರತಾ ಸಂಸ್ಥೆಯ ಬೇರೆ ಸದಸ್ಯರು ಆತನ ಶಾಂತಿ ಶ್ರದ್ಧೆಯನ್ನೂ ಆಧ್ಯಾತ್ಮಿಕ ಗುಣಗಳನ್ನೂ ಹೊಗಳಿದರು. ಅಂತರರಾಷ್ಟ್ರೀಯ ಸಂಸ್ಥೆ ಧ್ವಜವನ್ನರ್ಧಕ್ಕಿಳಿಸಿತು.

## ಮಾನವರ ಧ್ವಜವಿಳಿಯಿತು

ಮಹಾತ್ಮನ ಗುಣಗಳಲ್ಲಿ ಕೆಲವು ಆ ದುಃಖಿತರಿಗೆ ತಿಳಿದಿತ್ತು. ಗಾಂಧಿ "ಚಕ್ರಾಧಿಪತ್ಯಗಳ ಶಕ್ತಿಗಿಂತ, ವಿನಯ ಸತ್ಯಗಳನ್ನು ಬಲಯುತವಾಗಿ ಮಾಡಿದನು" ಎಂದು ಸಂಯುಕ್ತ ಸಂಸ್ಥಾನದ ಸಚಿವ ಆರ್ಥರ್ ಹೆಚ್. ವಾಂಡೆನ್‌ಬರ್ಗ್ ಹೇಳಿದನು. ಬ್ರಿಟಿಷ್ ರಾಜಕಾರಣಿ ಸರ್ ಸ್ಟಾಫರ್ಡ್ ಕ್ರಿಪ್ಸ್ "ಭೌತಿಕ ಶಕ್ತಿಯ ಮೇಲೆ ಆತ್ಮಶಕ್ತಿಯ ಪರಿಣಾಮವನ್ನು ಇಷ್ಟು ಒತ್ತಿ ನಂಬುವಂತೆ ತೋರಿಸಿಕೊಟ್ಟವರು ಚರಿತ್ರೆಯಲ್ಲೇ ಇಲ್ಲ" ಎಂದನು. ಸಂಯುಕ್ತ ಸಂಸ್ಥಾನದ ಕಾರ್ಯದರ್ಶಿ ಜನರಲ್ ಜಾರ್ಜ್ ಸಿ. ಮಾರ್ಷಲ್ ಜಗತ್ತಿಗಾದ ನಷ್ಟವನ್ನು ವಿವರಿಸಲು ತಡವರಿಸುತ್ತಾ, "ಮಹಾತ್ಮಾ ಗಾಂಧಿ ಮಾನವರ ಅಂತರಾತ್ಮನ ಪ್ರತಿನಿಧಿ" ಎಂದನು.

ಕೊಲೆಪಾತಕನ ಮೂರು ಗುಂಡುಗಳಿಂದ ಗಾಂಧಿ ಬಿದ್ದಾಗ ಜಗತ್ತಿನ ಅಂತರಾತ್ಮನ ವಾಕ್ಶಕ್ತಿ ಇಲ್ಲವಾಯಿತೆಂದು ಗಂಡಸರು, ಹೆಂಗಸರು, ಮಕ್ಕಳಿಗೂ ತಿಳಿಯಿತು. ಈ ಬಡವನ ಸಾವಿನಿಂದ ಜಗತ್ತು ಸಂಪತ್ತನ್ನು ಕಳೆದುಕೊಂಡಿತು. ಉಳಿದವರು ಯಾರೂ ದಯೆ, ಪ್ರಾಮಾಣಿಕತೆ, ವಿನಯ, ಅಹಿಂಸೆ ಮುಂತಾದ ಅಸ್ತ್ರಗಳಿಂದಲೇ ಬಲಶಾಲಿಗಳಾದ ಶತ್ರುಗಳನ್ನು ಎದುರಿಸಿ ಹೀಗೆ ವಿಜಯಿಗಳಾಗಿರಲಿಲ್ಲ. ಅಪರೂಪ ಸಲಕರಣೆಗಳಿಂದ ಗಳಿಸಿದ ಅಪರೂಪ ವಿಜಯದ ಕತೆ ಈತನದು.

## ೨. ಮುಗ್ಗರಿಸುವ ಹುಡುಗ

ಮೂರು ಸಾವಿರ ವರ್ಷಗಳ ಕೆಳಗೆ ಗಾಂಧಿ ಇಂಡಿಯಾದಲ್ಲಿ ಜೀವಿಸಿದ್ದರೆ, ಆತನ ಜನನ, ಬಾಲ್ಯಗಳು ದಂತಕಥೆಗಳಿಂದ ಸುತ್ತುವರಿಯಲ್ಪಡುತ್ತಿದ್ದುವು. ಆದರೆ ಹತ್ತೊಂಬತ್ತನೆಯ ಶತಮಾನದ ವಾತಾವರಣ ಆತನ ಜನ್ಮ ಸಾಧಾರಣವಾದುದೆಂದೂ, ಬಾಲ್ಯ ಸಾಮಾನ್ಯವಾದುದೆಂದೂ, ವಿದ್ಯಾರ್ಥಿದೆಸೆಯಲ್ಲಿ ವಿಶೇಷವೇನೂ ನಡೆಯಲಿಲ್ಲವೆಂದೂ, ವೃತ್ತಿಜೀವನ ಮೊದಲಿನಲ್ಲಿ ವಿಫಲವಾಯಿತೆಂದೂ ತೋರಿಸುತ್ತದೆ. "ಮಗು ಮನುಷ್ಯನ ತಂದೆ". ವಿದ್ಯಾರ್ಥಿ ಮೋಹನದಾಸ ಮಹಾತ್ಮನ ತಂದೆಯಾಗಿದ್ದಿರಬಹುದಾದರೂ ಹಾಗಾಗಬಹುದೆಂದು ಯಾರೂ ಭವಿಷ್ಯ ನುಡಿಯುವಂತಿರಲಿಲ್ಲ. ಆತನಿಗೆ ಸಾಧಾರಣ ಶಕ್ತಿಯೂ, ಕಡಿಮೆ ಪ್ರತಿಭೆಯೂ ಇದ್ದಂತಿತ್ತು.

ಬೊಂಬಾಯಿ ಕರಾಚಿಗಳ ನಡುವೆ ಪಶ್ಚಿಮ ಇಂಡಿಯಾದ ಕಾಥೇವಾಡ ಪರ್ಯಾಯ ದ್ವೀಪದ ಸಣ್ಣ ಪಟ್ಟಣ ಪೋರ್‌ಬಂದರಿನಲ್ಲಿ ೧೮೬೯ ನೇ ಇಸವಿ ಅಕ್ಟೋಬರ್ ೨ನೇ ತಾರೀಖು ಮೋಹನ್‌ದಾಸ್ ಕರಮಚಂದ್ ಗಾಂಧಿ ಜನಿಸಿದನು. ಕಾಥೆವಾಡ ಯುರೋಪಿಯನ್ನರ ಪ್ರಭಾವದಿಂದ ದೂರವಾಗಿತ್ತು; ಸಣ್ಣ ಸಣ್ಣ ರಾಜ್ಯಗಳಾಗಿ ವಿಭಾಗಿಸಲ್ಪಟ್ಟು ರಾಜರಿಂದ ಆಳಲ್ಪಡುತ್ತಿತ್ತು. ಆ ರಾಜರು ಪ್ರಜೆಗಳ ಮೇಲೆ ದಬ್ಬಾಳಿಕೆ ನಡಸುತ್ತಾ, ಬ್ರಿಟಿಷರಿಗೆ ಹೆದರಿ ನಡೆಯುತ್ತಾ ರಾಜ್ಯಭಾರ ಮಾಡುತ್ತಿದ್ದರು. ಇಂತಹ ಸಣ್ಣ ರಾಜ್ಯಗಳಲ್ಲಿ ಪೋರ್‌ಬಂದರ್ (೧೮೭೨ ನೇ ಜನಗಣನೆಯ ಪ್ರಕಾರ ೭೨,೦೭೨ ಜನಸಂಖ್ಯೆ) ರಾಜಕೋಟೆ (೩೬,೭೭೦) ವಂಕನೇರ್ (೨೮,೭೫೦) ಮೂರು. ಮಹಾತ್ಮನ ತಂದೆ ಕರಮಚಂದ್ ಗಾಂಧಿ ತನ್ನ ಜೀವನದ

ಬೇರೆ ಬೇರೆ ಅವಧಿಗಳಲ್ಲಿ ಈ ಮೂರು ಸಂಸ್ಥಾನಗಳ ರಾಜರ ಬಳಿಯೂ ಮುಖ್ಯಮಂತ್ರಿಯಾಗಿ ಕೆಲಸ ಮಾಡಿದನು.

ಮೋಹನದಾಸ್ ಅನಂತರ, ತನ್ನ ತಂದೆಗೆ ಅನುಭವವೊಂದೇ ವಿದ್ಯಾ ಪ್ರಶಸ್ತಿಯೆಂದೂ, ಚರಿತ್ರೆ ಭೂಗೋಳವೂ ತಿಳಿದಿರಲಿಲ್ಲವೆಂದೂ, ಆದರೆ ಸಂಸಾರದಲ್ಲೂ ಹೊರಗೂ ನಿಷ್ಪಕ್ಷಪಾತಕ್ಕೂ ಪ್ರಾಮಾಣಿಕತೆಗೂ ಹೆಸರು ಗಳಿಸಿದ್ದರೆಂದೂ ಬರೆದಿದ್ದಾರೆ. ತನ್ನವರಲ್ಲಿ ವಿಶೇಷ ಮಮತೆಯಿತ್ತೆಂದೂ, ಧೈರ್ಯ, ಔದಾರ್ಯವುಳ್ಳವರಾಗಿದ್ದರೂ ಶೀಘ್ರಕೋಪಿಯಾಗಿದ್ದರೆಂದೂ ಬರೆದಿದ್ದಾರೆ.

ಈ ರಾಜಕಾರಣಿ ಕರಮುಚಂದ್, ಸಂಪ್ರದಾಯಸ್ಥಳೂ, ಅನಕ್ಷರಸ್ಥಳೂ ಆದ ಪುತಲೀಬಾಯಿಯೆಂಬ ಹಿಂದೂ ಕನ್ಯೆಯನ್ನು ಮದುವೆಯಾದನು. ನಾಲ್ಕನೇ ಮತ್ತು ಕಿರಿಯ ಮಗನಾದ ಮೋಹನದಾಸ್ ತಾಯಿಯ ಸದಾಚಾರ ನಿಷ್ಠೆಯನ್ನೂ, ಧರ್ಮಾಸಕ್ತಿಯನ್ನೂ ನೆನೆಯುತ್ತಿದ್ದನು. ಪುತಲೀಬಾಯಿ ಪ್ರತಿ ದಿನವೂ ದೇವಸ್ಥಾನಕ್ಕೆ ಪೂಜೆಗಾಗಿ ಹೋಗುತ್ತಿದ್ದಳು; ಪೂಜೆ ಮುಗಿಯದೆ ಊಟಮಾಡುತ್ತಿರಲಿಲ್ಲ. ಉಪವಾಸಗಳೆಂದರೆ ಆಕೆಗೆ ಲಕ್ಷ್ಯವಿರಲಿಲ್ಲ. ನಾಲ್ಕು ತಿಂಗಳ ವರ್ಷಾಕಾಲದ ಚಾತುರ್ಮಾಸದಲ್ಲಿ ಒಂದೇ ಹೊತ್ತು ಊಟಮಾಡುತ್ತಿದ್ದಳು. ಒಂದು ವರ್ಷ ದಿನಬಿಟ್ಟು ದಿನ ಉಪವಾಸವನ್ನೂ ಮಾಡಿದಳು.

ಗಾಂಧಿಯದು ಶ್ರೀಮಂತ ಮನೆತನ. ಕರಮುಚಂದರಿಗೆ ಪೋರ್ ಬಂದರ್, ರಾಜಕೋಟೆ, ಕುಟಿಯಾನಗಳಲ್ಲಿ ಮನೆಗಳಿದ್ದುವು. ಆತನು ಚಿನ್ನದ ಸರವನ್ನು ಧರಿಸುತ್ತಿದ್ದನು. ಮೋಹನದಾಸನಿಗೇ ಒಬ್ಬ ದಾದಿಯೂ, ಒಂದು ರಾಗಮಾಲಿಕೆಯೂ ಇದ್ದವು.

ಪೋರ್ ಬಂದರಿನ ಶಾಲೆಯಲ್ಲಿ ಗಾಂಧಿಗೆ ಮಗ್ಗಿ ಕಲಿಯುವುದು ಕಷ್ಟವಾಯಿತು. "ನನ್ನ ಬುದ್ಧಿ ಜಡ, ನೆನಪು ಮಂದ" ಎಂದು ಆಗ ಮಹಾತ್ಮ ತನ್ನ ವಿಚಾರವಾಗಿ ಬರೆದಿದ್ದಾರೆ. ಸಂಸಾರ ಒಂದು ವರ್ಷದ ನಂತರ ರಾಜಕೋಟೆಯಲ್ಲಿ ನೆಲೆಸಿದಾಗ ಆತನು ಸಾಧಾರಣ ವಿದ್ಯಾರ್ಥಿಯಾಗಿದ್ದರೂ ಬಹಳ ನಿಷ್ಠೆಯಿಂದ ಶಾಲೆಗೆ ಹೋಗುತ್ತಿದ್ದನು.

ಹುಡುಗ ಮೋಹನದಾಸ್ ಬಹಳ ಸಂಕೋಚ ಸ್ವಭಾವದವನು.

ದೊಡ್ಡವನಾದ ಮೇಲೆ "ನನ್ನ ಪುಸ್ತಕ, ಪಾಠಗಳೇ ನನ್ನ ಸಂಗಾತಿಗಳಾಗಿದ್ದವು", ಎಂದು ನೆನೆಸಿಕೊಂಡಿದ್ದಾನೆ. ಶಾಲೆ ಮುಗಿಯುತ್ತಲೇ ಮನೆಗೆ ಓಡುತ್ತಿದ್ದನು. ಯಾರೊಡನೆಯೂ ಮಾತನಾಡುವ ಧೈರ್ಯವಾಗಲೀ, ಆತ್ಮವಿಶ್ವಾಸವಾಗಲೀ ಇರಲಿಲ್ಲ. "ಯಾರಾದರೂ ಹಾಸ್ಯ ಮಾಡಿಯಾರೆಂಬ ಹೆದರಿಕೆಯೂ ಇತ್ತು".

ಸ್ವಲ್ಪ ಬೆಳೆದ ಮೇಲೆ ಸ್ನೇಹಿತರೊಡನೆ ರಸ್ತೆಗಳಲ್ಲೂ, ಸಮುದ್ರದ ಬಳಿಯೂ ಆಟವಾಡುತ್ತಿದ್ದನು. ಬುಗರಿ, ಚೆಂಡುಗಳನ್ನಾಡುತ್ತಿದ್ದನು. ಚೇಷ್ಟೆ ಮಾಡುತ್ತಿರಲಿಲ್ಲ; ಮಾತಿಗೆ ಎದುರಾಡುತ್ತಿರಲಿಲ್ಲ. "ನಾನರಿತಿದ್ದುದು ಹಿರಿಯರ ಅಪ್ಪಣೆ ನಡೆಸುವುದು; ಅವರ ನಡತೆ ಪರೀಕ್ಷಿಸುವುದಲ್ಲ". ಆದರೂ ಹನ್ನೆರಡನೆಯ ವಯಸ್ಸಿನಲ್ಲಿ ಗುಟ್ಟಾಗಿ ಬೀಡಿ ಸೇದಲು ಪ್ರಾರಂಭಿಸಿ, ತಂದೆಯಿಂದಲೂ ಅಣ್ಣಂದಿರಿಂದಲೂ ಸಿಗರೇಟುಗಳಿಗಾಗಿ ಹಣ ಕದ್ದನು.

ಒಂದು ಸಲ ಆತನೂ, ಚಿಕ್ಕಬಂಧುವೊಬ್ಬನೂ ಧಾತೂರ ಗಿಡದ ಬೀಜ ವಿಷವೆಂದು ಕೇಳಿದರು. ತಂದೆ ತಾಯಿಗಳ ಕೈಯಿಂದ ತಪ್ಪಿಸಿಕೊಳ್ಳಲು ಇಬ್ಬರೂ ಆತ್ಮಹತ್ಯೆಮಾಡಿಕೊಳ್ಳಬೇಕೆಂದು ನಿಶ್ಚಯಿಸಿದರು. ಅದನ್ನು ನಾಟಕೀಯವಾಗಿ ಮಾಡಲು ದೇವಾಲಯದಲ್ಲಿ ಸಾಯಲು ನಿರ್ಧರಿಸಿದರು. ಜೇಬಿನಲ್ಲಿ ಬೀಜಗಳನ್ನು ತುಂಬಿಕೊಂಡು ದೇವಸ್ಥಾನಕ್ಕೆ ಹೋದರು. ಆದರೆ ಕೊನೆಯ ಕ್ಷಣದಲ್ಲಿ ಧೈರ್ಯಸಾಲದೆ ಹೋಗಿ, ಆತ್ಮಾಭಿಮಾನವನ್ನುಳಿಸಿಕೊಳ್ಳಲು ಎರಡು ಮೂರು ಬೀಜಗಳನ್ನು ನುಂಗಿ ಮನೆಗೆ ಹೋದರು.

ಸ್ವಲ್ಪ ಕಾಲದಲ್ಲೇ ಮಗುವಿನ ಜೀವನದಲ್ಲಿ ಗಂಭೀರ ವಿಚಾರಗಳು ತಲೆದೋರಿದುವು. ಪ್ರೌಢಶಾಲೆಯಲ್ಲಿ ಇದ್ದಾಗ, ಹದಿಮೂರನೆಯ ವಯಸ್ಸಿನಲ್ಲಿ ಮೋಹನದಾಸ್ ಕರಮಚಂದ್ ಗಾಂಧಿಗೆ ಮದುವೆಯಾಯಿತು. ವಧು ಕಸ್ತೂರಿಬಾಯಿಗೂ ಹದಿಮೂರು ವರ್ಷ. ತಂದೆತಾಯಿಗಳೇ ಮದುವೆಯನ್ನು ನಿಷ್ಕರ್ಷಿಸಿ ಮದುವೆಯ ಸಿದ್ಧತೆಗಳೆಲ್ಲಾ ಮುಗಿಯುವವರೆಗೂ ಅವರಿಗೆ ಹೇಳಲೇ ಇಲ್ಲ. ನಾಲ್ವತ್ತು ವರ್ಷಗಳನಂತರ ಗಾಂಧಿ, "ನನ್ನ ನಡತೆ ಹೇಗಿರಬೇಕೆಂಬುದು ಅತ್ತಿಗೆ ಹೇಳಿಕೊಟ್ಟಳು. ನನ್ನ

ಹೆಂಡತಿಗೆ ಯಾರು ಹೇಳಿಕೊಟ್ಟರೋ ತಿಳಿಯದು" ಎಂದು ಬರೆದರು. ಇಬ್ಬರಿಗೂ ಗಾಬರಿ. "ಇಂಥಾ ವಿಚಾರಗಳಲ್ಲಿ ಪಾಠ ಅನಾವಶ್ಯಕ. ಪೂರ್ವ ಜನ್ಮದ ತಿಳಿವು ಸಹಕಾರಿಯಾಗುತ್ತದೆ" ಎಂದು ಬರೆದಿದ್ದಾರೆ.

"ಇಬ್ಬರು ಅರಿಯದ ಮಕ್ಕಳು ಸಂಸಾರ ಸಾಗರದಲ್ಲಿ ಬಿದ್ದರು". ಅವರಿಗಿದ್ದ ಮಾರ್ಗದರ್ಶಕ ಪೂರ್ವ ಜನ್ಮದ ಅನುಭವ ಮಾತ್ರ. ಹೀಗೆ ಗಾಂಧಿ, "ಬಾಲ್ಯವಿವಾಹದ ಕ್ರೂರ ಪದ್ಧತಿ" ಯನ್ನು ವರ್ಣಿಸಿದ್ದಾರೆ. ಇದು ಸಾಧ್ಯವಾದುದು, ತಂದೆ, ತಾಯಿ, ಮಕ್ಕಳು, ಸೊಸೆಯರು, ಮೊಮ್ಮಕ್ಕಳು, ಮೂವತ್ತು, ನಲವತ್ತು ಜನ ಕೂಡುಸಂಸಾರದಲ್ಲಿದ್ದುದರಿಂದ ಮಾತ್ರ. ಹೊಸದಾಗಿ ಮದುವೆಯಾದ ಚಿಕ್ಕ ಹುಡುಗ ಹುಡುಗಿಯರು ಮನೆ, ಸಾಮಾನುಗಳ ವಿಚಾರ ತಾಪತ್ರಯ ಪಡಬೇಕಾಗಿರಲಿಲ್ಲ. (ಮುಂದೆ ಬ್ರಿಟಿಷ್ ಸರ್ಕಾರ ಮದುವೆಯ ವಯಸ್ಸನ್ನು ಹೆಚ್ಚಿಸಿತು.)

"ನಾನು ಗಂಡನ ಅಧಿಕಾರ ಸ್ಥಾಪಿಸಲು ನಿಧಾನಿಸಲಿಲ್ಲ; ಕಸ್ತೂರಿ ಬಾಯಿ ನನ್ನ ಅಪ್ಪಣೆಯಿಲ್ಲದೆ ಹೊರಗೆ ಹೋಗಲು ಸಾಧ್ಯವಿರಲಿಲ್ಲ" ಎಂದು ಗಾಂಧಿ ನೆನೆಸಿಕೊಂಡಿದ್ದಾರೆ. ಹದಿಮೂರು ವರ್ಷದ ಕಸ್ತೂರಿಬಾಯಿ ಹೊರಗೆ ಆಟವಾಡಲು ಹದಿಮೂರು ವರ್ಷದ ಗಂಡನ ಅಪ್ಪಣೆ ಪಡೆಯ ಬೇಕಾಗಿತ್ತು. ಆತ ಅನೇಕ ಸಲ ಅಸೂಯೆಯಿಂದ ಆಕೆಯ ಕೇಳಿಕೆ ಯನ್ನು ನಿರಾಕರಿಸುತ್ತಿದ್ದನು. ಆದರೆ ಆಕೆ ಹಠದಿಂದ, ಯಾವಾಗಲೂ ಎಲ್ಲಿಗೆ ಬೇಕಾದರೂ ಹೋಗಿಯೇ ತೀರುತ್ತಿದ್ದಳು. ಆತನಿಗೆ ಕೋಪ ಹೆಚ್ಚುತ್ತಾ ಹೋಗಿ ಇಬ್ಬರೂ ಎಷ್ಟೋ ದಿನ ಒಬ್ಬರೊಡನೊಬ್ಬರು ಮಾತೇ ಆಡುತ್ತಿರಲಿಲ್ಲ.

"ಆ ದಿನಗಳಲ್ಲಿ ನನಗೆ ಕಳ್ಳರ, ದೆವ್ವಗಳ, ಹಾವುಗಳ ಭಯ ವಿಪ ರೀತವಾಗಿತ್ತು. ರಾತ್ರಿ ಮನೆಬಿಟ್ಟು ಕದಲುತ್ತಿರಲಿಲ್ಲ" ಎಂದು ಆತ ಹೇಳಿ ಕೊಂಡಿದ್ದಾರೆ. ಆತನ ಪುಟ್ಟ ಹೆಂಡತಿಗೆ ಈ ಹೆದರಿಕೆಗಳೇನೂ ಇರಲಿಲ್ಲ. "ನನಗೆ ನಾಚಿಕೆಯಾಗುತ್ತಿತ್ತು" ಎಂದು ಬರೆದಿದ್ದಾರೆ. ಆತ ಕುಳ್ಳಾಗಿ ಸಣ್ಣಗಿದ್ದರು; ವ್ಯಾಯಾಮದಲ್ಲಿ ಆಸಕ್ತಿ ಇರಲಿಲ್ಲ. ಆದರೆ ಗಾಳಿಯಲ್ಲಿ ನಡೆ ದಾಡುವುದು ಆರೋಗ್ಯಕರವೆಂದು ಓದಿದ್ದುದರಿಂದ ಆ ಪದ್ಧತಿಯನ್ನು ಇಟ್ಟು ಕೊಂಡಿದ್ದರು. "ಈ ನಡತೆಯಿಂದ ನನಗೆ ದೇಹ ದಾರ್ಢ್ಯವುಂಟಾಯಿತು".

ಆದರೂ ಬಲಶಾಲಿಗಳಾದ ದೊಡ್ಡ ಹುಡುಗರನ್ನು ಕಂಡರೆ ಆತನಿಗೆ ಅಸೂಯೆ. ಷೇಕ್ ಮೆಹ್ತಾಬ್ ಎಂಬ ಮುಸ್ಲಿಂ ಸ್ನೇಹಿತ ಓಡುವುದರಲ್ಲೂ, ಹಾರುವುದರಲ್ಲೂ ಗಟ್ಟಿಗ. ತಾನು ಜೀವಂತ ಹಾವುಗಳನ್ನು ಕೈಯ್ಯಲ್ಲಿ ಹಿಡಿಯುವುದಾಗಿಯೂ, ತನಗೆ ಕಳ್ಳರ ಭಯವಾಗಲೀ, ದೆವ್ವಗಳ ಭೀತಿಯಾಗಲೀ ಇಲ್ಲವೆಂದೂ ಅವನು ಜಂಭಕೊಚ್ಚಿದರೆ ಗಾಂಧಿಗೆ ವಿಸ್ಮಯ. ಇಷ್ಟು ಶೌರ್ಯಕ್ಕೇನು ಕಾರಣ? ಅವನು ಮಾಂಸಾಹಾರಿ. ಗಾಂಧಿಯ ಜಾತಿಯಲ್ಲಿ ಮಾಂಸಾಹರ ನಿಷಿದ್ಧ; ಆತ ಆದನ್ನೆಂದೂ ಮುಟ್ಟಿರಲಿಲ್ಲ.

ಕಾಥೇವಾಡದಲ್ಲಿ ಬ್ರಿಟಿಷ್ ಆಡಳಿತದ ನೇರವಾದ ಪ್ರಭಾವವಿರದಿದ್ದರೂ, ಗಾಂಧಿಯ ಶಾಲೆಯ ಹುಡುಗರು ಬ್ರಿಟಿಷರಲ್ಲಿ ಗೌರವ ತೋರಿಸುವುದು, ಅವರನ್ನೆದುರಿಸುವುದು ಪ್ರಾರಂಭಿಸಿದ್ದರು. ಅವರು ಹೇಳುತ್ತಿದ್ದ ಒಂದು ಪದ್ಯದ ಅರ್ಥ ಹೀಗಿತ್ತು :— ಶೂರ ಇಂಗ್ಲಿಷರವನನ್ನು ನೋಡಿ; ಅವನು ಸಣ್ಣ ಇಂಡಿಯಾದವರನ್ನಾಳುತ್ತಾನೆ. ಏಕೆಂದರೆ ಅವನು ಮಾಂಸ ತಿಂದು ಐದು ಮೊಳದುದ್ದವಿದ್ದಾನೆ ”.

ಬ್ರಿಟಿಷರನ್ನು ಹೊಡೆದೋಡಿಸಲೆಂದೋ, ಅಥವಾ ತನ್ನ ದೇಹ, ಮನೋದಾರ್ಢ್ಯಗಳನ್ನು ಹೆಚ್ಚಿಸಿಕೊಳ್ಳಬೇಕೆಂದೋ ಅಂತೂ ಗಾಂಧಿ ಮೆಹ್ತಾಬನ ಮಾತಿಗೆ ಮರುಳಾಗಿ ನದಿಯ ದಡದ ಒಂದು ರಹಸ್ಯ ಪ್ರದೇಶದಲ್ಲಿ ಅವನು ತಂದಿದ್ದ ಮೇಕೆಯ ಮಾಂಸವನ್ನು ಅಗಿದಗಿದು ನುಂಗಿದನು. ಆದರೆ ತಕ್ಷಣ ವಾಂತಿಯಾಯಿತು. ರಾತ್ರಿಯೆಲ್ಲಾ ಹೊಟ್ಟೆಯಲ್ಲಿ ಒಂದು ಜೀವಂತ ಮೇಕೆ ಕೂಗುತ್ತಿರುವಂತೆ ಕನಸಾಯಿತು. ಆದರೂ ಅದು ಕರ್ತವ್ಯವೆಂದು ಬಗೆದು ಒಂದು ವರ್ಷ ಕಾಲ ಮೆಹ್ತಾಬನೊಡನೆ ಗುಟ್ಟಾಗಿ ಮಾಂಸ ತಿಂದನು. ಕಡೆಗೆ ಆ ಮೋಸ ಬೇಸರವಾಗಿ ಅದನ್ನು ಬಿಟ್ಟನು. ಪುನಃ ತಂದೆ ತಾಯಿಗಳು ಮರಣ ಹೊಂದುವವರೆಗೂ ತಿನ್ನಲಿಲ್ಲ.

ಗಾಂಧಿ ಮಾಂಸ ತಿಂದುದು ಜಾತಿ ಪದ್ಧತಿಯ ವಿಚಾರದಲ್ಲಿ ತನಗಿದ್ದ ಅಸಮಾಧಾನ ತೋರಲು. ಹಿಂದೂ ದೇವಾಲಯಗಳ ಆಡಂಬರ ಆತನಿಗೆ ರುಚಿಸಲಿಲ್ಲ. ತನಗೆ ದೇವರಲ್ಲಿ ಜೀವಂತ ಆಸಕ್ತಿಯಿರಲಿಲ್ಲವೆಂದು ಹೇಳಿಕೊಂಡಿದ್ದಾರೆ. “ಜಗತ್ತನ್ನು ಸೃಷ್ಟಿಸಿದವನು ಯಾರು? ಅದನ್ನು ನಡೆಸುವವರು ಯಾರು? ” ಯಾರೂ ಆತನಿಗೆ ಸರಿಯಾದ ಉತ್ತರ ಕೊಡಲಿಲ್ಲ;

ಮತಗ್ರಂಥಗಳಲ್ಲಿ ಆತನಿಗೆ ಸರಿಯಾದ ಉತ್ತರ ದೊರಕಲಿಲ್ಲ. ಆದುದರಿಂದ ಆತನ ಮನಸ್ಸು ನಾಸ್ತಿಕತೆಯ ಕಡೆ ಬಾಗಿತು. ಆದರೆ ಮುಸ್ಲಿಂ, ಪಾರ್ಸಿ, ಜೈನ ಸ್ನೇಹಿತರೊಡನೆ ತಂದೆ ನಡೆಸುತ್ತಿದ್ದ ಮತವಿಚಾರಗಳ ಚರ್ಚೆಯನ್ನು ಕೇಳುತ್ತಿದ್ದನು. ಜೈನಮತ ಪ್ರಾಣಿ ವಧೆಯನ್ನು ಬಹಿಷ್ಕರಿಸುತ್ತದೆ. ಜೈನರು ಉಸಿರಾಡುವಾಗ ಕ್ರಿಮಿಗಳಿಗೆ ತೊಂದರೆಯಾಗಬಾರದೆಂದು ಬಾಯಿಯನ್ನು ಬಟ್ಟೆಯಿಂದ ಮರೆಸುತ್ತಾರೆ; ಹುಳುಗಳನ್ನು ತುಳಿಯಬಹುದೆಂದು ಹೆದರಿ ರಾತ್ರಿ ಓಡಾಡುವುದಿಲ್ಲ. ಕಾಥೇವಾಡದಲ್ಲಿ ಜೈನರ ಪ್ರಭಾವ ಹೆಚ್ಚಾಗಿತ್ತು. ಗಾಂಧಿ ಹಿಂದೂ ಧರ್ಮದಲ್ಲಿ ನಂಬಿಕೆ ಕಳೆದುಕೊಂಡಿದ್ದ ಅಲ್ಪ ಕಾಲದಲ್ಲಿ ಜೈನ ಬೌದ್ಧ ತತ್ವಗಳನ್ನು ಅವಲಂಬಿಸಿದನು.

೧೮೮೫ ರಲ್ಲಿ ಅನೇಕ ವರ್ಷ ಖಾಯಿಲೆಯಿಂದ ನರಳಿ ಗಾಂಧಿಯ ತಂದೆ ಸತ್ತರು. ಸಂಸಾರದ ಆಸ್ತಿಯೂ ಕಡಿಮೆಯಾಗಿತ್ತು. ಮೋಹನದಾಸನ ಉಚ್ಚವಿದ್ಯಾಭ್ಯಾಸದ ಪ್ರಶ್ನೆ ತಲೆದೋರಿತು. ಗಾಂಧಿಗೆ ವೈದ್ಯದಲ್ಲಿ ಆಸಕ್ತಿಯಿತ್ತು. ಆದರೆ ತಮ್ಮ ತಂದೆಗೆ ಹೆಣಕುಯ್ಯುವುದು ಇಷ್ಟವಿರಲಿಲ್ಲವೆಂದು ಅವರ ಅಣ್ಣ ಜ್ಞಾಪಕಕ್ಕೆ ತಂದನು. ನ್ಯಾಯಶಾಸ್ತ್ರ ಓದುವುದು ಒಳ್ಳೆಯದಲ್ಲವೆ? ಗಾಂಧಿಯ ತಾತ ಉತ್ತಮಚಂದರು ಪೋರ್‌ಬಂದರಿನ ಮುಖ್ಯಮಂತ್ರಿಗಳಾಗಿದ್ದು ಮಗನಾದ ಕರಮಚಂದನಿಗೆ ಆ ಪದವಿಯನ್ನು ಕೊಟ್ಟಿದ್ದರು. ಆತನು ತನ್ನ ತಮ್ಮ ತುಲಸೀದಾಸನಿಗೆ ಅದನ್ನು ವಹಿಸಿದ್ದನು. ಆ ಕೆಲಸ ಸಂಸಾರದ ಹಕ್ಕಾಗಿ ಬಿಟ್ಟಿತ್ತು. ಮೋಹನದಾಸ ವಕೀಲನಾಗಿ ಬಂದರೆ ಅವನಿಗೂ ಆ ಕೆಲಸ ಖಂಡಿತವಾಗಿ ಸಿಕ್ಕುವುದು. ಆದರೆ ಗಾಂಧಿಗೆ ನ್ಯಾಯಶಾಸ್ತ್ರ ಕಲಿಯುವ ಧೈರ್ಯವಿರಲಿಲ್ಲ. ಪರೀಕ್ಷೆಯಲ್ಲಿ ತೇರ್ಗಡೆಯಾಗಬಹುದೆ? ಈ ಸಮಯದಲ್ಲಿ ಒಬ್ಬ ಸ್ನೇಹಿತ, ಮೂರು ವರ್ಷ ಇಂಗ್ಲೆಂಡಿಗೆ ಹೋಗಿ ಬಂದರೆ ಭವಿಷ್ಯಜ್ಜೀವನ ಸುಗಮವಾಗುವುದರಲ್ಲಿ ಸಂದೇಹವಿಲ್ಲವೆಂದು ಸೂಚಿಸಿದನು. ಗಾಂಧಿಗೂ ವಿದೇಶಯಾತ್ರೆ ಇಷ್ಟವಾಗಿತ್ತು. ಮನೆಯ ಯಜಮಾನನಾಗಿದ್ದ ಒಬ್ಬ ಚಿಕ್ಕಪ್ಪ, ಯೂರೋಪಿಗೆ ಹೋಗಿ ಬಂದ ಲಾಯರುಗಳು ಅವರಂತೆ ನಾಚಿಕೆ ಗೆಟ್ಟ ಉಡುಪು ಧರಿಸಿ, ಹಿಂದೂ ಪದ್ಧತಿಗಳನ್ನು ಬಿಡುವರೆಂದೂ ಅಭಿಪ್ರಾಯ ಪಟ್ಟನು. ಆದರೆ ಪುತಲೀಬಾಯಿ ಒಪ್ಪಿದರೆ ತನಗೂ ಒಪ್ಪಿಗೆಯೆಂದು ಹೇಳಿದನು. ಆಕೆಗೂ ಇಂಗ್ಲೆಂಡಿನ ಯುವಕರ ನಡತೆಯಲ್ಲಿ

ಸಂದೇಹವಿತ್ತು. ಆದರೆ ಬೇಚರ್ಜಿಸ್ವಾಮಿ ಎಂಬ ಒಬ್ಬ ಜೈನ ಸಾಧು ಗಾಂಧಿಯಿಂದ ಸಾರಾಯಿ, ಹೆಂಗಸರು, ಮಾಂಸದ ತಂಟೆಗೆ ಹೋಗುವುದಿಲ್ಲವೆಂದು ಶಪಥ ಮಾಡಿ, ಬಿಕ್ಕಟ್ಟನ್ನು ಪರಿಹರಿಸಿದನು.

ಹಣದ ವಿಚಾರದಲ್ಲೂ ತೊಂದರೆಯಿತ್ತು; ಮೋಹನದಾಸನ ಅಣ್ಣ ಲಾಯರ್ ಲಕ್ಷ್ಮೀದಾಸ ಹಣಕೊಡಲು ಒಪ್ಪಿದನು. ಇಬ್ಬರೂ ಬೊಂಬಾಯಿಗೆ ಹೋದರು. ಅಲ್ಲಿಂದ ಗಾಂಧಿ ಹಡಗು ಹತ್ತಬೇಕಾಗಿತ್ತು. ಹೊಸ ತೊಂದರೆಗಳು ಹುಟ್ಟಿಕೊಂಡವು. ಗಾಂಧಿ ಮೋಢ ಬನಿಯರ ಗುಂಪಿಗೆ ಸೇರಿದವನು. ಬೊಂಬಾಯಿಯ ಮೋಢ ಬನಿಯರು ಅವನ ಪ್ರಯಾಣವನ್ನು ನಿಷೇಧಿಸಿದರು. ಅವರ ಪಂಗಡದಲ್ಲಿ ಯಾರೂ ವಿದೇಶಕ್ಕೆ ಹೋಗಿರಲಿಲ್ಲ; ಅಲ್ಲಿ ಹಿಂದೂಮತ ಪದ್ಧತಿಗಳನ್ನಾಚರಿಸಲು ಸಾಧ್ಯವಿಲ್ಲ. ಆದರೆ ಗಾಂಧಿ ಹೆದರದೆ ಒಂದು ಕೂಟದಲ್ಲಿ ತಾನು ಹೋಗಲೇಬೇಕೆಂದು ಹೇಳಿದನು. ಯಜಮಾನ ಅವನನ್ನು ಜಾತಿಯಿಂದ ಬಹಿಷ್ಕರಿಸಿದನು.

ಭಯಪಡದೆ ಗಾಂಧಿ ಹಡಗಿನ ಟಿಕೆಟ್ಟನ್ನೂ, ಇಂಗ್ಲಿಷರು ಧರಿಸುವಂತಹ ಅಂಗಿಯನ್ನೂ, ಕತ್ತುಪಟ್ಟಿಯನ್ನೂ, ದಾರಿಗೆ ಸಾಕಾಗುವಷ್ಟು ಹಣ್ಣುಹಂಪಲುಗಳನ್ನೂ ಕೊಂಡುಕೊಂಡನು. ೧೮೮೮ ರ ಸೆಪ್ಟೆಂಬರ್ ೪ ನೇ ತಾರೀಖು ಹತ್ತೊಂಬತ್ತು ವರ್ಷಗಳಾಗಲು ಇನ್ನೂ ಒಂದು ತಿಂಗಳಿದ್ದಾಗ, ಗಾಂಧಿ ಹಡಗಿನಲ್ಲಿ ಹೊರಟನು. ಕೆಲವು ತಿಂಗಳ ಕೆಳಗೆ ಕಸ್ತೂರಿಬಾಯಿ ಹರಿಲಾಲನೆಂಬ ಗಂಡುಶಿಶುವನ್ನು ಹೆತ್ತಿದ್ದಳು.

## ೩. ಲಂಡನ್ನಿನಲ್ಲಿ ಗಾಂಧಿ

ಗಾಂಧಿ ಲಂಡನ್ನಿಗೆ ಬರುತ್ತಲೇ ಅವನ ಫೋಟೋ ತೆಗೆದರು. ಕಪ್ಪಗೆ ದಪ್ಪವಾಗಿದ್ದ ಕೂದಲನ್ನು ಬಲಗಡೆ ಬೈತಲೆ ತೆಗೆದಿದ್ದನು. ದೊಡ್ಡ ಕಿವಿಗಳು, ಮೊನಚಾದ ದೊಡ್ಡ ಮೂಗು; ತುಟಿ ಕಣ್ಣು ನೋಡತಕ್ಕುವಂತಹವು; ಕಣ್ಣುಗಳಲ್ಲಿ ಗಾಬರಿ, ಏನೋ ಆಸೆ; ಏನನ್ನೋ ಹುಡುಕುವಂತಿವೆ. ತುಟಿಗಳಲ್ಲಿ ಏನೋ ವ್ಯಸನ, ಆತಂಕ. ಗುರಿಯಿಲ್ಲದ ಮನುಷ್ಯನಂತೆ ಕಾಣುತ್ತಾನೆ. ನೊಂದಿದ್ದಾನೆ ಅಥವಾ ನೋವಾಗುವುದೆಂದು ಹೆದರಿದ್ದಾನೆ. ತನ್ನೊಳಗೂ, ಜಗತ್ತಿನೊಡನೆಯೂ ಹೋರಾಟವಾಗುವುದೆಂದು ಹೆದರಿದಂತಿದೆ ಮುಖ. ಆಸೆಗಳನ್ನು ಹತ್ತಿಕ್ಕಿ ಜಯಶಾಲಿಯಾಗುವೆನೋ ಎಂದು

ಸಂದೇಹ ಪಡುವಂತಿದೆ.

ಯುವಕನಾದ ಗಾಂಧಿಗೆ ಬ್ರಿಟಿಷ್ ಜೀವನದ ಪರಿಚಯವಿರಲಿಲ್ಲ. ಅದಕ್ಕೆ ಹೊಂದಿಕೊಳ್ಳಲು ತನ್ನ ಪ್ರಯತ್ನ, ಸೋಲುಗಳನ್ನು ಆತ ಆತ್ಮಕಥೆಯಲ್ಲಿ ವಿವರಿಸಿದ್ದಾರೆ. ಅಲ್ಲಿಯವರಂತೆ ಬಟ್ಟೆಗಳನ್ನು ಕೊಂಡುಕೊಂಡನು. ಹತ್ತು ಪೌಂಡು ಖರ್ಚುಮಾಡಿ ಸಂಜೆಯ ವಸ್ತ್ರಗಳನ್ನು ಹೊಲಿಸಿದನು; ನೃತ್ಯ ಕಲಿಯಲು ಮೂರು ಪೌಂಡು ವೆಚ್ಚಮಾಡಿದನು. "ನನಗೆ ಆ ಪಿಯಾನೋ ಅನುಸರಿಸಿ, ಚಲನ ಕಲಿಯಲು ಸಾಧ್ಯವಾಗಲಿಲ್ಲ"ಎಂದು ಒಪ್ಪಿಕೊಂಡಿದ್ದಾನೆ. ಸಂಗೀತದಲ್ಲಿ ಅಭಿರುಚಿ ಹುಟ್ಟಿಸಿಕೊಳ್ಳಲು ಒಂದು ಪಿಟೀಲು ಕೊಂಡುಕೊಂಡು ಉಪಾಧ್ಯಾಯರನ್ನು ಗೊತ್ತುಮಾಡಿಕೊಂಡನು. ಆದರೆ ಬೇಗ ಅದನ್ನು ಮಾರಿಬಿಟ್ಟನು. ವಾಕ್ಪಟುತ್ವ ಕಲಿಯಲು ಮಾಡಿದ ಪ್ರಯತ್ನವೂ ಹೀಗೆಯೇ ಕೊನೆಗೊಂಡಿತು.

ಗಾಂಧಿಗೆ ವಾತಾವರಣದೊಡನೆ ಹೊಂದಿಕೊಳ್ಳುವುದು ಅಗತ್ಯವಾಗಿತ್ತು. ಅದರಿಂದಲೇ, ಅನೇಕ ವರ್ಷಗಳ ನಂತರ, ಆತನು ತುಂಡು ದಟ್ಟಿಯನ್ನೇ ವಸ್ತ್ರವಾಗಿ ಅಂಗೀಕರಿಸಿದುದು. ಲಕ್ಷಾಂತರ ಜನ ಭಾರತೀಯ ರೈತರು ಮತ್ತೇನನ್ನೂ ಉಡುವುದಿಲ್ಲ. ಲಂಡನ್ನಿನಲ್ಲಿ ಗಾಂಧಿ ಬ್ರಿಟಿಷ್ ದೊಡ್ಡ ಮನುಷ್ಯರನ್ನು ಅನುಕರಿಸುತ್ತಿದ್ದುದು ಅದರಿಂದ ತನ್ನ ಅಂತಸ್ತು ಹೆಚ್ಚಿ ಬ್ರಿಟಿಷ್ ಜೀವನದ ಶ್ರುತಿಗೆ ತಾನು ಸೇರಬಹುದೆಂಬ ಭಾವನೆಯಿಂದ.

ಆದರೆ ಆತ ಅನುಸರಣೆಯನ್ನು ಖಂಡಿತವಾಗಿ ಎದುರಿಸುವ ಶಕ್ತಿಯನ್ನೂ ಹೊಂದಿದ್ದನು. ಇಂಗ್ಲೀಷ್ ಸ್ನೇಹಿತರು ಮಾಂಸ ತಿನ್ನಲು ಬಲವಂತ ಪಡಿಸಿದರೂ ತಾಯಿಗೆ ಕೊಟ್ಟ ಭಾಷೆ ಮುರಿಯಲು ಆತನೊಪ್ಪಲಿಲ್ಲ. ಸಸ್ಯಾಹಾರದಲ್ಲಿ ಶ್ರದ್ಧಾವಂತನಾಗಿ ಮೊಟ್ಟೆಗಳನ್ನೂ, ಅದರಿಂದ ತಯಾರಿಸಿದ ತಿಂಡಿಗಳನ್ನೂ ಬಿಟ್ಟುಬಿಟ್ಟನು. ಅವು ಮುಂದೆ ಜೀವಂತ ಪ್ರಾಣಿಗಳಾಗುವುದರಿಂದ ಅವೂ ಮಾಂಸಾಹಾರಕ್ಕೇ ಸೇರಿದುವೆಂದು ಆತನ ಭಾವನೆ. ಈ ಕೊರತೆಯ ಫಲವಾಗಿ ಊಟದಲ್ಲಿ ವೈವಿಧ್ಯವಿಲ್ಲದಿದ್ದರೂ, ಮಾತನ್ನುಳಿಸಿಕೊಂಡ ಸಂತೋಷ ಅದನ್ನು ಮರೆಸಿತು.

ಅಡಿಗೆ ಮಾಡುವುದನ್ನು ಕಲಿತನು; ಕೆಂಪು ಮೂಲಂಗಿ ಹುಳಿ ಬಹಳ ರುಚಿಯಾಗಿ ಮಾಡುತ್ತಿದ್ದನು. ಇಂಡಿಯಾದಿಂದ ಸಿಹಿತಿಂಡಿ

ಗಳನ್ನೂ ಸಂಬಾರ ಪದಾರ್ಥಗಳನ್ನೂ ಕಳುಹಿಸುತ್ತಿದ್ದರು. ಅದನ್ನು ನಿಲ್ಲಿಸಿ ಸೊಪ್ಪು ಮುಂತಾದುವನ್ನು ಕಾರ ಪದಾರ್ಥಗಳಿಲ್ಲದೆ ಸಂತೋಷವಾಗಿ ತಿನ್ನಲು ಪ್ರಾರಂಭಿಸಿದನು. "ಈ ಪ್ರಯೋಗಗಳಿಂದ ರುಚಿಯ ಮೂಲ ಮನಸ್ಸಿನಲ್ಲಿದೆಯೇ ಹೊರತು, ನಾಲಿಗೆಯಲ್ಲಿಲ್ಲವೆಂದು ಅರಿತೆ" ಎಂದರು. ಗಾಂಧಿ ಮನಸ್ಸನ್ನು ಸರಿಪಡಿಸಿಕೊಳ್ಳುವ ಮಹಾಪ್ರಯತ್ನಕ್ಕೆ ತೊಡಗಿದರು.

ಬೇರೆ ಬದಲಾವಣೆಗಳೂ ಉಂಟಾಗುತ್ತಿದ್ದವು. ನಾಸ್ತಿಕತೆಯ ಮರುಭೂಮಿಯನ್ನು ದಾಟಿ ಮತಶ್ರದ್ಧೆಗಾಗಿ ಹಾತೊರೆಯುತ್ತಿದ್ದರು. ಮ್ಯಾಡಂ ಹೆಚ್. ಪಿ. ಬ್ಲಾವಟ್‌ಸ್ಕಿ ಮತ್ತು ಆನಿಬೆಸೆಂಟರನ್ನು ಕಂಡು, ಅತೀಂದ್ರಿಯ ಯೋಗದ ಮೇಲೆ ಅವರು ಬರೆದ ಪುಸ್ತಕಗಳನ್ನೋದಿದನು. ಇದರಿಂದ ಆತನ ಮನಸ್ಸು ನೆಮ್ಮದಿ ಪಡೆಯಲಿಲ್ಲ; ಆತನಿಗೆ ಹಿಂದೂ ಧರ್ಮವೇ ಮೇಲಾಗಿ ತೋರಿತು. ಒಬ್ಬಾತ ಬೈಬಲ್ಲನ್ನು ಓದುವಂತೆ ಪ್ರೇರಿಸಿದನು. ಮೊದಲಲ್ಲೇ ಬೇಸರವಾಯಿತು. ಮಹಾತ್ಮನಾದ ಮೇಲೆ ಅದರಲ್ಲಿಯ ಸ್ತೋತ್ರ ಶ್ಲೋಕಗಳನ್ನು ಸಂತೋಷದಿಂದ ಓದಿದನು. ಹೊಸ ಒಡಂಬಡಿಕೆ ಹೆಚ್ಚು ಸ್ವಾರಸ್ಯವಾಗಿ ತೋರಿತು. ಬೆಟ್ಟದ ಮೇಲಿನ ಧರ್ಮ ಬೋಧ "ನನ್ನ ಹೃದಯವನ್ನು ನೇರವಾಗಿ ತಾಗಿತು"........ಕೆಡುಕನ್ನು ಎದುರಿಸಬೇಡ, ನಿನ್ನ ಬಲಕೆನ್ನೆಗೆ ಯಾರಾದರೂ ಹೊಡೆದರೆ, ಎಡಕೆನ್ನೆ ತೋರಿಸು........ವಿನೀತರು ಧನ್ಯರು........ನಿನ್ನನ್ನು ಜನ ದೂಷಿಸಿದರೆ, ಹಿಂಸಿಸಿದರೆ ನೀನು ಧನ್ಯ.......ನಿನ್ನ ಎದುರಾಳಿಯೊಡನೆ ಒಪ್ಪಂದ ಮಾಡಿಕೋ........ಮನುಷ್ಯರ ತಪ್ಪುಗಳನ್ನು ಕ್ಷಮಿಸು........ಲೋಕದ ಆಸ್ತಿಯನ್ನು ಕೂಡಿಡಬೇಡ........ಏಕೆಂದರೆ ಆಸ್ತಿಯಿದ್ದ ಕಡೆ ನಿನ್ನ ಹೃದಯ ವಿರುತ್ತೆ........ಕ್ರಿಸ್ತನ ಈ ಮಾತುಗಳು, ಮುಂದೆ ಮಹಾತ್ಮನಾಗುವ ಈತನನ್ನು ಆನಂದಗೊಳಿಸಿದುವು. ಆತನಿಗೆ ಹಿಂದೂಗಳ ಪವಿತ್ರಗ್ರಂಥ ಭಗವದ್ಗೀತೆಯನ್ನು ನೆನಪಿಗೆ ತಂದುವು. ಅದನ್ನು ಲಂಡನ್ನಿನ ನ್ಯಾಯ ಶಾಸ್ತ್ರದ ಶಾಲೆಯ ಎರಡನೆಯ ತರಗತಿ ಸೇರುವವರೆಗೂ ತಾವು ಓದಿರಲಿಲ್ಲ ವೆಂದು ಸಂಕೋಚದಿಂದ ಹೇಳಿದ್ದಾರೆ. ಅದರ ಮಹತ್ಪರಿಣಾಮ ಜೀವ ಮಾನವೆಲ್ಲಾ ಕಾಣಬಂದಿತು.

"ನನ್ನನ್ನು ಸಂಶಯಗಳು ಬಾಧಿಸಿದಾಗ, ನಿರಾಸೆ ನಿಂತು ಎದುರಿಸಿ

ದಾಗ, ದಿಗಂತದಲ್ಲಿ ಎಲ್ಲೂ ಒಂದು ಆಶಾಕಿರಣ ಕಾಣದೆ ಹೋದಾಗ, ನಾನು ಭಗವದ್ಗೀತೆಗೆ ಮರೆಹೊಕ್ಕು ಸಮಾಧಾನ ಪಡಿಸುವ ಒಂದು ಪದ್ಯ ಕಾಣು ತ್ತೇನೆ; ಮುಳುಗಿಸುವ ದುಃಖದ ನಡುವೆ ನಗಲು ಆರಂಭಿಸುತ್ತೇನೆ", ಎಂದು ತಮ್ಮ ಯಂಗ್ ಇಂಡಿಯಾ ವಾರಪತ್ರಿಕೆಯ ೧೯೨೫ ನೇ ಆಗಸ್ಟ್ ೬ ನೇ ತಾರೀಖಿನ ಪ್ರತಿಯಲ್ಲಿ ಬರೆದಿದ್ದಾರೆ. ಮಹಾತ್ಮರ ಕಾರ್ಯದರ್ಶಿಯಾಗಿ ಅನೇಕ ವರ್ಷ ಕೆಲಸಮಾಡಿದ ಮಹದೇವ ದೇಸಾಯಿ, "ಗಾಂಧಿಯ ಜೀವ ನದ ಪ್ರತಿಕ್ಷಣವೂ ಗೀತೆಯ ಸಂದೇಶದಂತೆ ಬದುಕುವ ಪ್ರಯತ್ನವೇ" ಎಂದು ಹೇಳಿದ್ದಾರೆ. ಗಾಂಧಿ ಅದನ್ನು "ಆತ್ಮ ಪರಾಮರ್ಶೆಯ ಗ್ರಂಥ" ವೆನ್ನುತ್ತಿದ್ದರು.

ಭಗವದ್ಗೀತೆ ಸುಮಾರು ಏಳುನೂರು ಶ್ಲೋಕಗಳ ಯೋಗಶಾಸ್ತ್ರ, ಯೋಗಾಭ್ಯಾಸದ ಸೊಗಸಾದ ಗೀತೆ. ಪಂಡಿತರ ಪ್ರಕಾರ ಕ್ರಿ. ಪೂ. ಐದು ಆರನೆಯ ಶತಮಾನಗಳಲ್ಲಿ ಬರೆಯಲ್ಪಟ್ಟ ಗೀತೆ. ಭಾರತದಲ್ಲಿ ದೇವರೆಂದು ಪೂಜಿಸಲ್ಪಡುವ ಕೃಷ್ಣನಿಗೂ, ಅರ್ಜುನನಿಗೂ ನಡೆದ ಸಂವಾದ. ಹಿಂದೂ ವೇದಾಂತಿ ಸರ್ವಪಲ್ಲಿ ರಾಧಾಕೃಷ್ಣನ್, "ಕೃಷ್ಣ, ವಿಷ್ಣುವಿನ ಮಾನವ ಅವ ತಾರ", ಎನ್ನುತ್ತಾರೆ.

ಭೂಲೋಕದಲ್ಲಿ ಕೃಷ್ಣನ ಜೀವನ ದಂತ ಕಥೆ, ಇತಿಹಾಸಗಳನ್ನು ಒಳಗೊಂಡಿದೆ. ದೇವರು ದೊರೆಯ ತಂಗಿಯ ಗರ್ಭದಲ್ಲಿ ಜನಿಸಿದನೆಂದು ಹೇಳುತ್ತಾರೆ. ರಾಜ ಮಕ್ಕಳನ್ನೆಲ್ಲಾ ಕೊಲ್ಲಿಸುತ್ತಿದ್ದುದರಿಂದ ಕೃಷ್ಣನನ್ನು ಗೋಪಾಲಕರಲ್ಲಿಗೆ ಸಾಗಿಸಿದರು. ಕೃಷ್ಣ ರಾಕ್ಷಸರನ್ನೆಲ್ಲಾ ಕೊಂದನು. ಒಂದು ಪ್ರವಾಹ ಕಾಲದಲ್ಲಿ ಬೆರಳಿನಿಂದ ಪರ್ವತವನ್ನೆತ್ತಿ ಏಳು ದಿವಾರಾತ್ರಿ ಗಳು ಹಿಡಿದಿದ್ದು ಗೋಪಾಲಕರನ್ನೂ, ಪ್ರಾಣಿಗಳನ್ನೂ ಸಂರಕ್ಷಿಸಿದನು. ಅವನು ದೇವರೆಂದರಿಯದೆ ಗೋಪಿಯರೆಲ್ಲಾ ಅವನನ್ನು ಪ್ರೀತಿಸಿ ನಾಟ್ಯ ವಾಡುತ್ತಿದ್ದರು. ಬೆಳೆದ ಮೇಲೆ ಮಾವನನ್ನು ಕೊಂದನು. ಕಡೆಗೆ ಕಾಡಿನಲ್ಲಿದ್ದಾಗ ಒಬ್ಬ ಬೇಟೆಗಾರ ತಪ್ಪಿ ಕಾಲಿಗೆ ಬಾಣಹೊಡೆದನು. ಹತ್ತಿರ ಬಂದು ಕೃಷ್ಣನನ್ನು ಗುರುತಿಸಿ ಅವನು ವ್ಯಸನ ಪಡಲು ಕೃಷ್ಣ ಅವನನ್ನಾಶೀರ್ವದಿಸಿ, ನಕ್ಕು ಸತ್ತುಹೋದನು.

ಕೃಷ್ಣ ಅರ್ಜುನನ ನಿರಾಯುಧ ಸಾರಥಿ. ಎದುರಿಗೆ ಅರ್ಜುನನ

ದಾಯಾದಿಗಳು ಭ್ರಾತೃ ಸಂಹಾರಕ್ಕೆ ಸಿದ್ಧರಾಗಿ ನಿಂತಿದ್ದಾರೆ. ಅರ್ಜುನನಿಗೆ ಯುದ್ಧಮಾಡುವ ಮನಸ್ಸಿಲ್ಲ. ಅವನು ಕೃಷ್ಣನೊಡನೆ

ಕೇಶವಾ, ನನಗೆ ದುಶ್ಶಕುನಗಳಾಗುತ್ತಿವೆ. ಬಂಧುಗಳನ್ನು ಯುದ್ಧದಲ್ಲಿ ಕೊಂದರೆ ಒಳ್ಳೆಯದಾಗಲಾರದು. ನನಗೆ ಈ ವಿಜಯ, ಈ ಸಾರ್ವಭೌಮತ್ವ, ಈ ಪ್ರಾಪಂಚಿಕ ಸುಖ ಬೇಡ. ಅವುಗಳಿಂದ ನಮಗೇನು ಪ್ರಯೋಜನ, ಗೋವಿಂದ ?

ಕೇಶವ, ಗೋವಿಂದ ಎಂಬಿವು ಕೃಷ್ಣನ ಹೆಸರುಗಳು.

ಬಂಧುಗಳನ್ನು ಕೊಲ್ಲಲು ಇಚ್ಛೆಯಿಲ್ಲದೆ ಅರ್ಜುನ ಯುದ್ಧಮಾಡುವುದಿಲ್ಲವೆನ್ನುತ್ತಾನೆ.

ಕೃಷ್ಣ ವಾದಿಸುತ್ತಾ, "ಅಳಬಾರದವರಿಗೋಸ್ಕರ ಅಳುತ್ತೀ, ಅರ್ಥವಿಲ್ಲದ ಮಾತುಗಳನ್ನಾಡುತ್ತೀ. ತಿಳಿದವರು ಬದುಕಿರುವವರಿಗಾಗಲಿ, ಸತ್ತವರಿಗಾಗಲಿ ಶೋಕಿಸುವುದಿಲ್ಲ. ನಾನು, ನೀನು, ಈ ರಾಜರು ಹಿಂದೆಯೂ ಇದ್ದೆವು. ಮುಂದೆಯೂ ಇರದಿರುವುದಿಲ್ಲ.

ಸಾವು ಮುಖ್ಯವಲ್ಲ. ಕೃಷ್ಣ ವಿವರಿಸುತ್ತಾನೆ, "ಆತ್ಮಕ್ಕೆ ಸಾವಿಲ್ಲ. ಮನುಷ್ಯನಿಂದ ನಾಶವಾಗಲಾರದು. ಆತ್ಮದ ವಿಚಾರವಾಗಿ ಕೃಷ್ಣ :— ಇದು ಹುಟ್ಟಿಲ್ಲ. ಎಂದು ಇಲ್ಲದಿದ್ದ ಇದು ಎಂದೂ ಇರದೆ ಹೋಗುವುದಿಲ್ಲ. ಹುಟ್ಟಿಲ್ಲ, ಶಾಶ್ವತ, ಪುರಾತನ, ದೇಹ ಸತ್ತಾಗ ಆತ್ಮ ಸಾಯುವುದಿಲ್ಲ. ಹಳೆಯ ಬಟ್ಟೆಗಳನ್ನು ಬಿಸುಟು ಹೊಸಬಟ್ಟೆಯನ್ನುಟ್ಟಂತೆ ಆತ್ಮ ಹಳೆಯ ದೇಹವನ್ನು ಬಿಟ್ಟು ಹೊಸದೇಹಕ್ಕೆ ಹೋಗುತ್ತದೆ.

ಇದೇ ಹಿಂದೂ ಧರ್ಮದ ಪುನರ್ಜನ್ಮ ಸಿದ್ಧಾಂತ.

ಕೃಷ್ಣ—ಇದನ್ನು ಶಸ್ತ್ರಗಳು ಛೇದಿಸಲಾರವು. ಅಗ್ನಿ ಸುಡಲಾರದು ನೀರು ನೆನೆಸಲಾರದು; ಗಾಳಿ ಒಣಗಿಸಲಾರದು ........ಹುಟ್ಟಿದವರಿಗೆ ಸಾವೂ, ಸತ್ತವರಿಗೆ ಹುಟ್ಟೂ ಸಿದ್ಧ; ಅಪರಿಹಾರ್ಯವಾದುದಕ್ಕಾಗಿ ನೀನು ಶೋಕಿಸುವುದು ಸರಿಯಲ್ಲ.

ಅರ್ಜುನ ಕ್ಷತ್ರಿಯ; ಯುದ್ಧ ಅವನ ಕರ್ತವ್ಯವೆಂದು ಕೃಷ್ಣ ಒತ್ತಿ ಹೇಳುತ್ತಾನೆ.

ಯುದ್ಧವನ್ನು ಅವಶ್ಯಕರ್ಮವೆಂದು ಗೀತೆ ಹೇಳುವುದು ಗಾಂಧಿಗೆ

ಇಷ್ಟವಾಗಲಿಲ್ಲ. ಲಂಡನ್ನಿನಲ್ಲಿ ೧೮೮೮–೮೯ ರಲ್ಲಿ ಗಾಂಧಿ ಅದನ್ನು ಓದಿದಾಗಲೂ ಆ ಯುದ್ಧಭೂಮಿ ಅರ್ಜುನನ ಉತ್ತಮ ಮತ್ತು ಅಧಮ ಪ್ರವೃತ್ತಿಗಳ ಹೊಡೆದಾಟವೆಂದು ಹೇಳುತ್ತಿದ್ದರು. ಕೃಷ್ಣ, ದೇಹದ ಸಾವು ಸಾವಲ್ಲದುದರಿಂದ ಯುದ್ಧ ಮಾಡಲು ಹಿಂದೆಗೆಯಬೇಕಾಗಿಲ್ಲವೆಂದು ಹೇಳಿದರೂ ಅರ್ಜುನನಿಗೆ ತೃಪ್ತಿಯಾಗಲಿಲ್ಲ. ಅದರಿಂದಾಗುವ ಲಾಭವೇನು?

ಕೃಷ್ಣ ಉತ್ತರ ಕೊಡುತ್ತಾನೆ, "ನನಗೆ ತ್ರಿಲೋಕಗಳಲ್ಲೂ ಮಾಡತಕ್ಕ ಕರ್ಮವಿಲ್ಲ; ಪಡೆಯಬೇಕಾದ ಲಾಭವಿಲ್ಲ; ಆದರೂ ನಾನೂ ಕರ್ಮದಲ್ಲಿ ನಿರತನಾಗಿದ್ದೇನೆ."

ಫಲಾಪೇಕ್ಷೆಯಿಲ್ಲದೆ ನ್ಯಾಯಕ್ಕಾಗಿ ಕೆಲಸಮಾಡುವುದೇ ಜೀವನ ಧ್ಯೇಯ. ಕೃಷ್ಣ "ಸುಖದುಃಖಗಳನ್ನು, ಲಾಭ, ನಷ್ಟ, ಜಯಾಪಜಯುಗಳನ್ನು ಸಮಾನವಾಗಿ ಎಣಿಸಿ ಯುದ್ಧಮಾಡು; ಹಾಗೆ ಮಾಡಿದರೆ ನಿನಗೆ ಯಾವ ಪಾಪವೂ ತಟ್ಟಲಾರದು", ಎಂದು ಬೋಧಿಸಿದನು.

ಇದು ಯೋಗದ ಒಂದು ಮುಖ, ನಿಃಸ್ವಾರ್ಥ ಸೇವೆ ;

ಕೃಷ್ಣ, "ಧನಂಜಯನೇ, ಮೋಹವಿಲ್ಲದೆ, ಯೋಗದಲ್ಲಿ ನಂಬಿ, ಜಯಾಪಜಯಗಳಲ್ಲಿ ಸಮಾನ ಭಾವವಿಟ್ಟುಕೊಂಡು ಕೆಲಸಮಾಡು. ಅದೇ ಯೋಗ".

ಯೋಗಿ ಯಾರೆಂದು ವಿವರಿಸುತ್ತಾ, "ಯಾರ ಮನಸ್ಸು ದುಃಖದಿಂದ ಕ್ಲೇಶಗೊಳ್ಳುವುದಿಲ್ಲವೋ, ಸುಖಕ್ಕೆ ಆಸೆಪಡುವುದಿಲ್ಲವೋ, ಯಾರು ಭಯ, ಕಾಮ, ಕ್ರೋಧಗಳನ್ನು ಜಯಿಸಿದ್ದಾರೋ ಅವರು ಜ್ಞಾನಿ ಎನಿಸಿಕೊಳ್ಳುವರು. ಆಸೆಗಳನ್ನು ತ್ಯಜಿಸಿ, ನಿರಾತಂಕವಾಗಿ ಚಲಿಸುವವನು, "ನಾನು", "ನನ್ನದು", ಎಂಬ ಅಹಂಭಾವವನ್ನು ಬಿಟ್ಟವನು ಶಾಂತಿಯನ್ನು ಪಡೆಯುವನು.

ಧ್ಯಾನಿಸುವ ಯೋಗಿಗಳಿದ್ದಾರೆ; ಕೆಲಸಮಾಡುವ ಯೋಗಿಗಳಿದ್ದಾರೆ. ಕೆಲಸಮಾಡುವ ಯೋಗಿ ಕರ್ಮಯೋಗಿ. ಮಹಾತ್ಮಗಾಂಧಿ ಕರ್ಮಯೋಗಿ. ಗೀತೆಯ ವಿಚಾರವಾಗಿ ಮಾತನಾಡುತ್ತಾ ಗಾಂಧಿ, ಯೋಗಿಯ ಸ್ವರೂಪವನ್ನು ವಿವರಿಸುತ್ತಾರೆ. "ಅಸೂಯೆಯಿಲ್ಲದೆ, ಕರುಣಾಳುವಾಗಿ, ದುರಹಂಕಾರವಿಲ್ಲದೆ, ಸುಖದುಃಖಗಳನ್ನು ಒಂದೇ ರೀತಿ

ಯಲ್ಲಿ ಅನುಭವಿಸುತ್ತಾ, ಕ್ಷಮಾಶೀಲನಾಗಿ ಸದಾ ತೃಪ್ತನಾಗಿ, ಖಂಡಿತವಾದಿಯಾಗಿ, ದೇಹ ಮನಸ್ಸುಗಳೆರಡನ್ನೂ ದೇವರಿಗೆ ಅರ್ಪಿಸಿ, ಯಾರನ್ನೂ ಹೆದರಿಸದೆ, ಯಾರಿಗೂ ಹೆದರದೆ, ಶುದ್ಧನಾಗಿ, ಕರ್ಮದಲ್ಲಿ ನಿರತನಾಗಿದ್ದರೂ ಅದನ್ನು ಅಂಟಿಸಿಕೊಳ್ಳದೆ. ಫಲಾಪೇಕ್ಷೆಯಲ್ಲಿ ಆಸೆಯಿಲ್ಲದೆ, ಶತ್ರುಗಳನ್ನೂ, ಮಿತ್ರರನ್ನೂ ಸಮಭಾವದಿಂದ ಕಾಣುತ್ತಾ, ಮಾನಾವಮಾನಗಳ ಲಕ್ಷ್ಯವಿಲ್ಲದೆ, ಸನ್ಮಾನದಿಂದ ಹಿಗ್ಗದೆ, ಅವಮಾನದಿಂದ ಕುಗ್ಗದೆ, ಏಕಾಂತವನ್ನೂ, ಮೌನವನ್ನೂ ಪ್ರೀತಿಸಿ, ಆತ್ಮಸಂಯಮವಿರುವವನು ಯೋಗಿ. ಅಂತಹ ಭಕ್ತಿಯಲ್ಲಿ ಮೋಹಕ್ಕೆ ಎಡೆಯಿಲ್ಲ". ಗಾಂಧಿ ಇಷ್ಟು ಗುಣಗಳ ತಾತ್ಪರ್ಯವನ್ನೂ ಎರಡೇ ಮಾತಿನಲ್ಲಿ ಹೇಳಿದನು. "ಆಸೆಯನ್ನು ತ್ಯಜಿಸುವುದು".

ಆಸೆ ಬಿಡುವುದು, ಅಥವಾ ಹಿಂದೂ ವೈರಾಗ್ಯ, ನಿರಾಸಕ್ತಿಗೂ, ಬಡತನ ಜಡತೆಗಳಿಗೂ ಕಾರಣವಾಗುವುದೆಂದು ವಾದಿಸುತ್ತಾರೆ. ಆದರೆ ಫಲಾಪೇಕ್ಷೆಯಿಲ್ಲದ ಕರ್ಮ ವಿಜಯದ ಹಾದಿಯೆನ್ನುತ್ತಾರೆ. "ಫಲದ ವಿಚಾರವಾಗಿ ಸದಾ ಚಿಂತಿಸುತ್ತಿರುವವನು, ಕರ್ತವ್ಯಪಾಲನೆಯಲ್ಲಿ ಧೈರ್ಯಗೆಡುತ್ತಾನೆ. ತಾಳ್ಮೆ ಕಳೆದುಕೊಂಡು, ಕೋಪಗ್ರಸ್ತನಾಗಿ ಮಾಡಬಾರದ ಕಾರ್ಯಗಳನ್ನು ಮಾಡುತ್ತಾನೆ. ಯಾವ ಕೆಲಸವನ್ನೂ ಏಕಾಗ್ರಚಿತ್ತನಾಗಿ ಮಾಡುವುದಿಲ್ಲ. ಫಲಾಪೇಕ್ಷೆಯುಳ್ಳವನು ಅರಿಷಡ್ವರ್ಗಗಳ ದಾಸನು. ಅವನ ಮನಸ್ಸು ಹಿಡಿತದಲ್ಲಿರುವುದಿಲ್ಲ; ಯುಕ್ತಾಯುಕ್ತ ವಿವೇಚನೆಯಿರುವುದಿಲ್ಲ. ನ್ಯಾಯಾನ್ಯಾಯ ಜ್ಞಾನವಿಲ್ಲದೆ ಕೆಲಸ ಸಾಧಿಸುತ್ತಾನೆ". ತ್ಯಾಗ, ಮನಶ್ಶಾಂತಿಯನ್ನು ಕೊಟ್ಟು ಸತ್ಪಥದಲ್ಲಿ ಒಳ್ಳೆಯ ಫಲ ಪಡೆಯಲು ಸಾಧ್ಯಮಾಡುತ್ತದೆ. ಸ್ವಾರ್ಥವನ್ನು ಸಂಪೂರ್ಣವಾಗಿ ತ್ಯಜಿಸಿದವನಿಗೆ, "ಫಲವಿದೆ; ಮಹಾಯೋಗಿಗಳು, ಮಹಾತ್ಮರು ನನ್ನನ್ನು ಶರಣುಹೋಗಿ ಸಂಪೂರ್ಣತೆ ಪಡೆಯುತ್ತಾರೆ; ಪೂರ್ವ ಜನ್ಮದ ಮಹಾದುಃಖಕ್ಕೆ ಒಳಗಾಗುವುದಿಲ್ಲ". ಎಂದು ಕೃಷ್ಣ ಹೇಳುತ್ತಾನೆ.

ಯೋಗಿಯ ಪರಮ ಫಲ ದೇವನಲ್ಲಿ ಐಕ್ಯನಾಗಿ ಜನ್ಮಗಳ ಕೋಟಲೆಯನ್ನು ತಪ್ಪಿಸಿಕೊಳ್ಳುವುದು. ಗಾಂಧಿಗೂ ಈ ಆಸೆಯಿತ್ತು.

ಮಹಾತ್ಮರು ಅಪರೂಪ; ನಿಷ್ಕಾಮ ಮನೋಭಾವ, ಇಂಡಿಯಾ

ದಲ್ಲಾಗಲೀ, ಬೇರೆಲ್ಲಿಯಾಗಲೀ ಅನೇಕರಿಗೆ ಸಾಧ್ಯವೂ ಇಲ್ಲ, ಬೇಕಾಗಿಯೂ ಇಲ್ಲ; ಆದರೆ ಹಿಂದೂ, ಭಗವದ್ಗೀತೆಯನ್ನು ಪುನಃ ಪುನಃ ಮನೆಯಲ್ಲೂ, ದೇವಾಲಯಗಳಲ್ಲೂ ಪಠಿಸುತ್ತಾ, ಅದರ ಮಹತ್ವವನ್ನು ಗ್ರಹಿಸಿ, ಯೌವ್ವನ ವಲ್ಲಿ ಜೀವನದ ಗುರಿಯ ವಿಚಾರವಾಗಿ ಆಲೋಚಿಸತೊಡಗುವನು. ಗಾಂಧಿ ಯಂತೂ ಹಾಗೆ ಮಾಡಿದನು; ಅದರಿಂದ ಆತನ ಜೀವನದ ಮೇಲೆ ಪರಿಣಾಮವೂ ಉಂಟಾಯಿತು.

ಭಗವದ್ಗೀತೆಯಲ್ಲಿ ಆತನಿಗಿದ್ದ ಭಕ್ತಿಯೂ, ಸಸ್ಯಾಹಾರದಲ್ಲಿದ್ದ ಅನನ್ಯ ನಂಬಿಕೆಯೂ, ಇಂಡಿಯಾದಲ್ಲಿ ಗಾಂಧಿಗಿದ್ದ ಮೋಹವನ್ನು ತೋರಿ ಸುತ್ತಿದ್ದವು. ಆತನಿಗೆ ವಾತಾವರಣದೊಡನೆ ಹೊಂದಿಕೊಳ್ಳುವುದು ಅಗ ತ್ಯವಾಗಿತ್ತು. ಆದರೆ ಇಂಗ್ಲೆಂಡಿನಲ್ಲಿ ಆತನಿಗೆ ಸಲಿಗೆಯಿದ್ದುದು ಕೆಲವು ಜನ ಮುದಿಸಸ್ಯಾಹಾರಿಗಳೊಡನೆ ಮಾತ್ರ. ಅವರು ಆಹಾರ ಮತ್ತು ರೋಗಗಳ ವಿಚಾರ ಬಿಟ್ಟು ಏನೂ ಮಾತನಾಡುತ್ತಿರಲಿಲ್ಲವೆಂದು ಕೆಲವು ಕಾಲದ ಮೇಲೆ ಗಾಂಧಿ ಹೇಳಿದನು. ವಿದ್ಯಾಭ್ಯಾಸ, ಸಂಪಾದನೆಗೆ ಮಾರ್ಗ ಮಾತ್ರ. ಆತ್ಮಕಥೆಯಲ್ಲಿ ಆ ವಿಚಾರ ಗಾಂಧಿ ಹೆಚ್ಚಾಗಿ ಹೇಳಿಲ್ಲ. ಇನ್ನರ್ ಟೆಂಪಲ್ ಮತ್ತು ಲಂಡನ್ ಯೂನಿವರ್ಸಿಟಿಗಳಿಗೆ ಸೇರಿ, ಫ್ರೆಂಚ್, ಲ್ಯಾಟಿನ್, ಭೌತ ಮತ್ತು ರಸಾಯನ ಶಾಸ್ತ್ರಗಳನ್ನು ಕಲಿತು, ಇಂಗ್ಲಿಷನ್ನು ಹದಗೊಳಿಸಿಕೊಂಡು, ಸಾಧಾರಣ ಮತ್ತು ರೋಮನ್ ನ್ಯಾಯಶಾಸ್ತ್ರ ಗಳನ್ನು ಓದಿದರು. ೧೮೯೧ ನೇ ಜೂನ್‌ನಲ್ಲಿ ತೇರ್ಗಡೆ ಹೊಂದಿ, ಹೈಕೋರ್ಟಿ ನಲ್ಲಿ ಜೂನ್ ೧೧ ರಲ್ಲಿ ವಕೀಲರಾಗಿ ಇಂಗ್ಲೆಂಡಿನಲ್ಲಿ ಒಂದು ದಿನವನ್ನೂ ಹೆಚ್ಚಾಗಿ ಕಳೆಯದೆ ಜೂನ್ ೧೨ ರಲ್ಲಿ ಬೊಂಬಾಯಿಗಾಗಿ ಹಡಗಿನಲ್ಲಿ ಹೊರಟರು.

ಕಾಲೇಜು ಮುಗಿದ ಮೇಲೆ ಗಾಂಧಿಯ ಜೀವನ ಆರಂಭವಾಯಿತು. ೧೯೨೪, ಸೆಪ್ಟೆಂಬರ್ ೪ ರ ಯಂಗ್ ಇಂಡಿಯಾ ವಾರಪತ್ರಿಕೆಯಲ್ಲಿ, "ನನ್ನ ಕಾಲೇಜು ದಿನಗಳು, ನಾನು ಜೀವನ ಪ್ರಾರಂಭಿಸುವ ಮೊದಲಿನ ಕಾಲ" ಎಂದು ಬರೆದಿದ್ದಾರೆ. ಇಂಗ್ಲೆಂಡಿನಲ್ಲಿದ್ದ ಎರಡು ವರ್ಷ ಎಂಟು ತಿಂಗಳು ಆತನ ಜೀವನದ ಮೇಲೆ ಪರಿಣಾಮವನ್ನುಂಟುಮಾಡಿಯೇ ಇರಬೇಕು. ಆದರೆ ಅದು ಹೆಚ್ಚಾಗಿರಲಾರದು. ಗಾಂಧಿಗೆ ವಿದ್ಯಾರ್ಥಿ ಮನೋಭಾವ

ವಿರಲಿಲ್ಲ. ಆತ ಕರ್ಮಯೋಗಿ; ಕರ್ಮದಿಂದಲೇ ಜ್ಞಾನ, ಧೈರ್ಯ, ಮಹತ್ವಗಳನ್ನು ಪಡೆದನು. ಜನರೂ, ಪುಸ್ತಕಗಳೂ ಆತನ ಮೇಲೆ ಪ್ರಭಾವ ಬೀರುತ್ತಿದ್ದುವು. ಆದರೆ ನಿಜವಾದ ಗಾಂಧಿ, ಚರಿತ್ರೆಯ ಗಾಂಧಿ, ಶಾಲೆಯ ದಿನಗಳಲ್ಲಿ ಕಾಣಿಸಲಿಲ್ಲ. ಕಾಣಿಸುವ ಚಿಹ್ನೆಯನ್ನೂ ತೋರಲಿಲ್ಲ. ಹತ್ತೊಂಬತ್ತು ವರುಷದ ಹಳ್ಳಿಯ ಹುಡುಗನನ್ನು ದೊಡ್ಡ ಪಟ್ಟಣವಾದ ಲಂಡನ್ನಿಗೆ ಸಾಗಿಸಿದಾಗ ಯಾರೂ ಮಹತ್ವಾಕ್ಷಾಂಕ್ಷೆ ಇಟ್ಟುಕೊಳ್ಳುವ ಹಾಗಿರಲಿಲ್ಲ. ಆದರೆ ೧೮೯೧ ರಲ್ಲಿ ಇಂಗ್ಲೆಂಡನ್ನು ಬಿಟ್ಟ ಸಂಕೋಚ ಸ್ವಭಾವದ, ಸಾಧಾರಣ, ಆತ್ಮ ವಿಶ್ವಾಸವಿಲ್ಲದ ಬ್ಯಾರಿಸ್ಟರ್-ಎಟ್-ಲಾ ಗಾಂಧಿಗೂ, ಇಪ್ಪತ್ತನೆಯ ಶತಮಾದಲ್ಲಿ ಲಕ್ಷಾಂತರ ಜನರ ನಾಯಕನಾದ ಮಹಾತ್ಮನಿಗೂ ಇರುವ ಮಹದಂತರವನ್ನು ನೋಡಿದರೆ, ಜನಸೇವೆ ಆತನ ಮನಶ್ಶಕ್ತಿ, ನಿಶ್ಚಯ, ಆತ್ಮಾವಲಂಬನೆಗಳನ್ನೆಚ್ಚರಿಸುವ ವರೆಗೂ ಆತನ ನೈಜವ್ಯಕ್ತಿತ್ವ ಸುಪ್ತವಾಗಿದ್ದಿತೆನ್ನಬಹುದು.

## ೪. ಭವಿಷ್ಯತ್ತನ್ನು ರೂಪಿಸಿದ ಎರಡು ಘಟನೆಗಳು

ಗಾಂಧಿ ಇಂಡಿಯಾಕ್ಕೆ ಹಿಂದಿರುಗಿದಾಗ ಆತನ ಮಗ ಹರಿಲಾಲನಿಗೆ ನಾಲ್ಕುವರ್ಷ. ತಾಯಿ ಸತ್ತುಹೋಗಿದ್ದಳು. ಆಕೆಯ ಮೇಲೆ ಆತನಿಗೆಷ್ಟು ಪ್ರೀತಿಯಿದ್ದಿತೆಂದು ತಿಳಿದಿದ್ದುದರಿಂದ ಯಾರೂ ಈ ದುಃಖವಾರ್ತೆಯನ್ನು ತಿಳಿಸಿರಲಿಲ್ಲ. ಆತನ ಪತ್ನಿ ಸುಂದರಿಯಾದ ಯುವತಿಯಾಗಿದ್ದಳು. ಆಕೆಯ ವಿಚಾರದಲ್ಲಿ ಸಂಶಯ ಹೆಚ್ಚುತ್ತಾ ಹೋಯಿತು. ಒಂದಾವೃತ್ತಿ ಜಗಳವಾಡಿ ಆಕೆಯನ್ನು ರಾಜಕೋಟೆಯಿಂದ ತವರುಮನೆಗೆ ಕಳುಹಿಸಿಬಿಟ್ಟನು.

ವಕೀಲ ವೃತ್ತಿಯಲ್ಲಿ, ರಾಜಕೋಟೆಯಲ್ಲಾಗಲಿ, ಬೊಂಬಾಯಿಯಲ್ಲಾಗಲಿ ಯಶಸ್ವಿಯಾಗಲಿಲ್ಲ. ಬೊಂಬಾಯಿನಲ್ಲಿ ಒಂದು ಮೊಕದ್ದಮೆಯಲ್ಲಿ ನ್ಯಾಯಸ್ಥಾನದಲ್ಲಿ ಬಾಯಿತೆರೆಯಲು ಹೆದರಿ ಜತೆಗಾರನಿಗೆ ಅದನ್ನು ವಹಿಸಿದನು. ಪೋರ್ ಬಂದರ್ ರಾಜನಿಗಾಗಿ ಕೆಲಸ ಮಾಡತೊಡಗಿದನು. ಆತನ ಅಣ್ಣ ಲಕ್ಷ್ಮೀದಾಸ್, ತಂದೆ ತಾತಂದಿರಂತೆ, ಪೋರ್ ಬಂದರ್ ರಾಜನ ಕಾರ್ಯದರ್ಶಿಯಾಗಿದ್ದನು. ಮುಂದೆ ಮುಖ್ಯಮಂತ್ರಿಯಾಗುವ ಸಂಭವವೂ ಇತ್ತು. ಆದರೆ ಬ್ರಿಟಿಷ್ ಏಜಂಟನೊಡನೆ ಆತನಿಗೆ ವಿಶ್ವಾಸ

ವಿರಲಿಲ್ಲ. ಮೋಹನದಾಸ್ ಈ ಏಜಂಟನನ್ನು ಇಂಗ್ಲೆಂಡಿನಲ್ಲಿ ಸಂಧಿಸಿದ್ದನು; ಆದುದರಿಂದ ಅವನನ್ನು ಕಂಡು ತನ್ನ ಪರವಾಗಿ ಮಾತನಾಡಬೇಕೆಂದು ಲಕ್ಷ್ಮೀದಾಸ ತಮ್ಮನಿಗೆ ಹೇಳಿದನು. ಗಾಂಧಿಗೆ ಇದು ಸರಿಯಾಗಿ ತೋರ ದಿದ್ದರೂ ಅಣ್ಣನ ಕೇಳಿಕೆಗೆ ಒಪ್ಪಿಕೊಂಡನು. ಲಕ್ಷ್ಮೀದಾಸನಿಗೆ ಅನ್ಯಾಯ ವಾಗಿದ್ದರೆ, ಸರಿಯಾದ ರೀತಿಯಲ್ಲಿ ಅರ್ಜಿ ಹಾಕಬೇಕೆಂದು ಏಜಂಟ್ ಹೇಳಿ ದನು. ಗಾಂಧಿ ವಾದಿಸುತ್ತಾ ಹೋಗಲು ಏಜಂಟನ ನೌಕರ ಅವನನ್ನು ಹೊರಕ್ಕೆ ನೂಕಿದನು.

ಈ ಘಟನೆಯ ಆಘಾತ ತನ್ನ ಜೀವನ ಪಥವನ್ನೇ ಬೇರೆಯಾಗಿ ಮಾಡಿತೆಂದು ಗಾಂಧಿ ಆತ್ಮ ಕಥೆಯಲ್ಲಿ ಬರೆದಿದ್ದಾರೆ. ಜೀವನದಲ್ಲಿ ಮೊದಲು ಬಾರಿಗೆ ಒಂದು ಭಾವನೆ ತಲೆದೋರಿತು; ಏನು ಮಾಡಕೂಡ ದೆಂಬುದು ತಿಳಿಯಿತು. ಕಾಥೇವಾಡದ ರಾಜ್ಯಗಳಲ್ಲಿ ತುಂಬಿದ್ದ ಅರಮ ನೆಯ ಒಳಸಂಚು, ಆಡಂಬರ, ದಾಸ್ಯ, ಇವುಗಳಲ್ಲಿ ಅಸಹ್ಯ ಹುಟ್ಟಿತು. ತಾನೆಂದಿಗೂ ಹೊಗಳುಭಟ್ಟನಾಗಕೂಡದೆಂದು ನಿರ್ಧರಿಸಿದನು. ಆದರಿಂದ ಸ್ವಭಾವ ವಿಷಮಯವಾಗುತ್ತದೆ. ಬಿಡುಗಡೆಗಾಗಿ ಹಂಬಲಿಸಿದನು.

ಆಗ ಪೋರ್ ಬಂದರಿನ ಒಂದು ಮುಸ್ಲಿಂ ವ್ಯಾಪಾರ ಸಂಸ್ಥೆ ಆತ ನನ್ನು ತಮ್ಮ ಕಡೆ ವಕೀಲನಾಗಿ, ದಕ್ಷಿಣ ಆಫ್ರಿಕಾಕ್ಕೆ ಒಂದು ವರ್ಷ ಕಳುಹಿಸುವುದಾಗಿ ಹೇಳಲು, ಆತನು ತಕ್ಷಣ ಒಪ್ಪಿಕೊಂಡನು. ದುಃಖ ದಿಂದ, " ನನಗೆ ಇಂಡಿಯಾ ದೇಶವನ್ನು ಹೇಗಾದರೂ ಬಿಡಬೇಕೆನ್ನಿಸಿತು ". ಎಂದು ಬರೆದಿದ್ದಾರೆ. ಲಂಡನ್ ಬಿಟ್ಟು ಎರಡು ವರ್ಷವಾದರೂ ಯಶಸ್ಸು ದೊರೆತಿರಲಿಲ್ಲ. ಆದುದರಿಂದ ದಕ್ಷಿಣ ಆಫ್ರಿಕಾದಲ್ಲಿ ಅದೃಷ್ಟ ಪರೀಕ್ಷೆಗೆ ಹೊರಟನು.

ದಕ್ಷಿಣ ಆಫ್ರಿಕಾ ತಲುಪಿದ ಸ್ವಲ್ಪ ಕಾಲದಲ್ಲೇ ಗಾಂಧಿ ಸೋತು, ಹೊರದೂಡಿಸಿಕೊಳ್ಳಬೇಕಾದ ಎರಡನೆಯ ಪ್ರಸಂಗ ನಡೆಯಿತು. ಈ ಸಾರಿ ಆತನ ಜೀವನಕ್ಕೆ ನಿರ್ದಿಷ್ಟ ಗುರಿ ತಲೆದೋರಿತು.

ಒಂದು ಮೊಕದ್ದಮೆಗಾಗಿ ಗಾಂಧಿ ಟ್ರಾನ್ಸ್‌ವಾಲಿನ ರಾಜಧಾನಿ ಪ್ರಿಟೋರಿಯಾಕ್ಕೆ ಹೋಗಬೇಕಾಗಿತ್ತು. ರಾತ್ರಿ ಪ್ರಯಾಣಕ್ಕಾಗಿ ಮೊದ ಲನೆ ತರಗತಿಯ ಟಿಕೆಟ್ ತೆಗೆದುಕೊಂಡು ಮೊದಲನೆ ತರಗತಿಗೆ ಹತ್ತಿದನು.

ನೆಟಾಲಿನ ಮಾರಿಟ್ಸ್‌ಬರ್ಗ್‌ನಲ್ಲಿ ಒಬ್ಬ ಬಿಳೀ ಮನುಷ್ಯ ಗಾಡಿ ಹತ್ತಿ ಗಾಂಧಿಯನ್ನು ನೋಡಿ, ಇಳಿದು, ಇಬ್ಬರು ರೈಲ್ವೆ ಅಧಿಕಾರಿಗಳೊಡನೆ ಬಂದನು. ಅವರು ಗಾಂಧಿಯನ್ನು ಸಾಮಾನಿನ ಗಾಡಿಗೆ ಹೋಗೆಂದರು. ತಾನು ಮೊದಲನೆ ತರಗತಿಯ ಟಿಕೆಟ್ ತೆಕೆದುಕೊಂಡಿರುವುದಾಗಿ ಗಾಂಧಿ ಹೇಳಿದನು. ಆದರೆ ಅವರು ಇಳಿಯಬೇಕೆಂದರು. ಆತನು ಇಳಿಯದಿರಲು ಒಬ್ಬ ಪೋಲೀಸಿನವನು ಹತ್ತಿ ಆತನನ್ನೂ, ಸಾಮಾನನ್ನೂ ನೆಲದ ಮೇಲೆ ಬಿಸಾಡಿದನು.

ಅನೇಕ ವರ್ಷಗಳನಂತರ, ಅಮೇರಿಕದ ಧರ್ಮಪ್ರಚಾರಕ ಡಾಕ್ಟರ್ ಜಾನ್ ಆರ್. ಮಾಟ್ ಗಾಂಧಿಯನ್ನು "ನಿಮ್ಮ ಜೀವನದಲ್ಲಿ ಹೆಚ್ಚು ಪರಿಣಾಮವನ್ನುಂಟುಮಾಡಿದ ಅನುಭವಗಳೇನು?" ಎಂದು ಕೇಳಿದಾಗ ಗಾಂಧಿ ಮಾರಿಟ್ಸ್‌ಬರ್ಗಿನ ಅನುಭವವನ್ನು ಆತನಿಗೆ ತಿಳಿಸಿದನು.

ಗಾಂಧಿ ರೈಲಿಗೆ ಹಿಂದಿರುಗಿ ಮೂರನೆಯ ತರಗತಿಯಲ್ಲಿ ಕುಳಿತು ಕೊಳ್ಳಬಹುದಾಗಿತ್ತು. ಆದರೆ ನಿಲ್ದಾಣದ ಕೊಠಡಿಯಲ್ಲಿಯೇ ಇರಲು ಆತನು ನಿಶ್ಚಯಿಸಿದನು. ರೈಲ್ವೆ ಅಧಿಕಾರಿಗಳು ಆತನ ಸಾಮಾನು, ಬಟ್ಟೆಗಳನ್ನು ವಶಪಡಿಸಿಕೊಂಡಿದ್ದರು. ಛಳಿ ಹೆಚ್ಚಾಗಿದ್ದರೂ ಅವರಿಂದ ತನ್ನ ಬಟ್ಟೆ ಬೇಡಲಿಲ್ಲ. ರಾತ್ರಿಯೆಲ್ಲಾ ನಡುಗುತ್ತಾ, ಚಿಂತಿಸುತ್ತಾ ಕಳೆದರು.

ಈ ಎರಡು ಘಟನೆಗಳು ಆತನ ವ್ಯಕ್ತಿತ್ವವನ್ನು ಬಯಲಿಗೆ ತಂದುವಾದರೂ, ಆತನ ವ್ಯಕ್ತಿತ್ವದಿಂದಲೇ ಈ ಘಟನೆಗಳು ನಡೆದುವೆಂದರೂ ತಪ್ಪಾಗಲಾರದು. ಬಿಳಿಯವನು ಆಕ್ಷೇಪಿಸಿದಾಗ ಬೇರೆ ಇಂಡಿಯನ್ನರು ಎಷ್ಟೋ ಮಂದಿಯನ್ನು ರೈಲುಗಾಡಿಗಳಿಂದ ಓಡಿಸಿದ್ದರು; ಅವರುಗಳು ಕೆಳದರ್ಜೆಗಾಡಿಗಳಲ್ಲಿ ಕೂಡುತ್ತಲೂ ಇದ್ದರು. ಮಾರನೆಯ ದಿನ ಆತನ ಸ್ವದೇಶೀಯರು "ಬಂಡೆಗೆ ತಲೆಹೊಡೆದು ಏನು ಪ್ರಯೋಜನ?" ಎಂದು ಬುದ್ಧಿವಾದ ಹೇಳಿದರು. ಆದರೆ ಮಾರಿಟ್ಸ್‌ಬರ್ಗಿನಲ್ಲಿ ಗಾಂಧಿ ಅನ್ಯಾಯಕ್ಕೆ ತಲೆಬಾಗಲಿಲ್ಲ; ತಪ್ಪಿಸಿಕೊಳ್ಳಬಹುದಾಗಿದ್ದ ಶಿಕ್ಷೆಯನ್ನು ಅನುಭವಿಸಿದನು. ಆದರೆ ಇದರಿಂದ ವರ್ಣದ್ವೇಷವನ್ನು ಎದುರಿಸಬೇಬೇಕೆಂಬ ದೃಢ ನಿರ್ಧಾರ ಹುಟ್ಟಿತು. ಹಠ ಮತ್ತು ಹಿಂಸೆ ಧ್ಯೇಯವನ್ನು ಉಜ್ವಲವಾಗಿ ಮಾಡಿದವು; ಅವುಗಳನ್ನೆದುರಿಸಬೇಕಾದ ಅಗತ್ಯವನ್ನು ಒತ್ತಿತೋರಿಸಿ

ದುವು. ಒಂದು ವರ್ಷಕಾಲ ಮೊಕದ್ದಮೆಗೋಸ್ಕರ ದಕ್ಷಿಣ ಆಫ್ರಿಕಾದಲ್ಲಿ ನಿಲ್ಲುವ ಬದಲು, ಅಲ್ಲಿ ೧೮೯೩ ರಿಂದ ೧೯೧೪ ರ ವರೆಗೆ, ಇಪ್ಪತ್ತೊಂದು ವರ್ಷಗಳ ಕಾಲ ನಿಂತು, ತನ್ನ ಬೌದ್ಧಿಕ ಮತ್ತು ನೈತಿಕ ಶಕ್ತಿಗಳನ್ನು ಬೆಳೆಸಿಕೊಂಡುದೇ ಅಲ್ಲದೆ, ದಕ್ಷನಾದ ನಾಯಕನೂ, ವಕೀಲನೂ ಆದನು. ಕಡೆಯಲ್ಲಿ ಸ್ವಾತಂತ್ರ್ಯಕ್ಕೆ ಮಹದ್ವಿಜಯವನ್ನು ಸಂಪಾದಿಸಿದನು.

ಆ ಛಳಿ ರಾತ್ರಿ ಮಾರಿಟ್ಸ್‌ಬರ್ಗ್ ನಿಲ್ದಾಣದಲ್ಲಿ ಈ ಇಪ್ಪತ್ತು ನಾಲ್ಕು ವರ್ಷದ ಇಂಡಿಯಾ ಲಾಯರು ತಾನು ವರ್ಣದ್ವೇಷವೆಂಬ ಗೋಲಿಯಥನನ್ನು ಎದುರಿಸಬೇಕಾದ ಡೇವಿಡ್ ಎಂದುಕೊಂಡನು. ಗಾಂಧಿಯನ್ನು ಮಾರಿಟ್ಸ್‌ಬರ್ಗಿನಿಂದ ಜಗದ್ವಿಖ್ಯಾತಿಗೆ ಎತ್ತಿದುದೇನು ? ದೇಹ ಶಕ್ತಿ ಕಡಮೆಯಾದುದರಿಂದ ನೈತಿಕ ಶಕ್ತಿ ಹೆಚ್ಚಿಸಿಕೊಳ್ಳಲೆಳಸಿದನೋ? ಇದುವರೆಗೂ ಜೀವನದಲ್ಲಿ ಯಶಸ್ಸು ಲಭಿಸದಿದ್ದುದರಿಂದ ಆತಂಕಗಳಿಲ್ಲದೆ ಈ ಹೆಬ್ಬಯಕೆಯುಂಟಾಯಿತೋ? ಜನ ಸೇವೆಯಿಂದಲೇ ತನ್ನಲ್ಲಿ ಹುದುಗಿದ್ದ ಶಕ್ತಿ ಎಚ್ಚರಗೊಳ್ಳುವುದೆಂದರಿತನೋ? ಅದೃಷ್ಟವೋ ವಿಧಿಯೋ, ಪೂರ್ವ ಸುಕೃತವೋ, ಭಗವದ್ಗೀತೆಯೋ, ಅರಿಯಲಾರದ ಪರಿಸ್ಥಿತಿಯೋ? ಪ್ರಾಯಶಃ ಇವೆಲ್ಲಾ, ಜೊತೆಗೆ ಅಭಿಮಾನ, ನೈತಿಕ ಆಕ್ರೋಶ, ತನ್ನ ನಿಸ್ಸಹಾಯಕತೆಯ ಅರಿವು ಎಲ್ಲಾ ಸೇರಿ ಆತ ನಾಯಕನಾಗಲು ಸಹಾಯಕವಾದವು. ಫ್ಲೋರ್ ಬಂದರಿನ ಬ್ರಿಟಿಷ್ ನಿಯೋಗಿ, ಮತ್ತು ಮಾರಿಟ್ಸ್‌ಬರ್ಗಿನ ಪೋಲೀಸ್ ಅಧಿಕಾರಿ, ತನ್ನ ಮತ್ತು ತನ್ನವರ ದೌರ್ಬಲ್ಯದ ಕುರ್ಹೆ ಹಾಗಿದ್ದುದು ಗಾಂಧಿಗೆ ಸಹಿಸಲಾಗಲಿಲ್ಲ. ಗಾಂಧಿಗೆ ಯಾವ ವಿಚಾರದಲ್ಲಾದರೂ ಅಸಮಾಧಾನವಾದರೆ ಆತನಿಗೆ ಸುಮ್ಮನಿರಲು ಸಾಧ್ಯವಿರಲಿಲ್ಲ. ಅನ್ಯಾಯವನ್ನೆದುರಿಸದಿರಲು ಆತನಿಗೆ ಅಸಾಧ್ಯ. ಜಡತೆ ಆತನನ್ನು ರೇಗಿಸುತ್ತಿತ್ತು. ಆತನ ಸ್ವಭಾವದಲ್ಲಿ ಜಡತೆ ನೂಲಿನಷ್ಟೂ ಇರಲಿಲ್ಲ. ಆತನ ಪ್ರತಿಭಟನೆ ಯಾವಾಗಲೂ ಸಚೇತನವಾಗಿತ್ತು.

## ೫. ವರ್ಣ ದ್ವೇಷ

ಮಾರಿಟ್ಸ್ ಬರ್ಗ್ ಪ್ರಕರಣ ನಡೆದ ಒಂದು ವಾರದ ಮೇಲೆ ಗಾಂಧಿ ಪ್ರಿಟೋರಿಯದ ಇಂಡಿಯನ್ನರನ್ನು ಸಭೆ ಕೂಡಿಸಿ ಬಿಳೀ ಜನರ ಭೇದ ಭಾವನೆಯ ಮೇಲೆ ಒಂದು ಉಪನ್ಯಾಸ ಕೊಟ್ಟನು. ಅದೇ ಆತನ ಮೊದ

ಲನೆಯ ಬಹಿರಂಗ ಭಾಷಣ. ಧ್ಯೇಯ ಸಾಧನೆಯ ಉತ್ಸಾಹ ಆತನ ಸಂಕೋಚವನ್ನು ಕರಗಿಸಿ ಮಾತನಾಡುವ ಧೈರ್ಯಕೊಟ್ಟಿತು. ಸಭೆಯಲ್ಲಿ ಹಿಂದುಗಳೂ, ಮುಸ್ಲಿಂ ವರ್ತಕರೂ ಇದ್ದರು. ಆ ಮೊದಲ ದಿನಗಳಲ್ಲೂ ಗಾಂಧಿಯ ಮಾತಿನ ಸರಣಿ ಆತನ ನಾಯಕತ್ವದ ಚಿಹ್ನೆಗಳನ್ನು ತೋರುತ್ತಿದ್ದವು. ವ್ಯವಹಾರದಲ್ಲಿ ಸತ್ಯವಂತರಾಗಿರಬೇಕೆಂದೂ, ಆರೋಗ್ಯಕರವಾದ ಪದ್ಧತಿಗಳನ್ನಿಟ್ಟುಕೊಳ್ಳಬೇಕೆಂದೂ, ಜಾತಿ ಮತ ಭೇದಗಳನ್ನು ಬಿಡಬೇಕೆಂದೂ, ಇಂಗ್ಲೀಷ್ ಕಲಿಯಬೇಕೆಂದೂ ಒತ್ತಾಯ ಪೂರ್ವಕವಾಗಿ ಹೇಳಿದನು. ದಕ್ಷಿಣ ಆಫ್ರಿಕಾದಲ್ಲಿದ್ದ ಇಂಡಿಯನ್ನರ ಸ್ಥಿತಿ ಸುಧಾರಿಸುವುದು ಆತನ ಗುರಿಯಾಗಿದ್ದುದರಿಂದ ಅದನ್ನು ಸಾಧಿಸಬೇಕಾಗಿದ್ದ ಇಂಡಿಯನ್ನರು ತಮ್ಮ ಪದ್ಧತಿಗಳನ್ನು ಸರಿಪಡಿಸಿಕೊಳ್ಳಬೇಕಾಗಿತ್ತು. ಗಾಂಧಿಗೆ ರಾಜಕೀಯ ಗುರಿಯನ್ನು ಸಾಧಿಸುವುದಕ್ಕಿಂತ ಹೆಚ್ಚಾಗಿ ಅನೇಕ ವೇಳೆ ಅದಕ್ಕೆ ಸಹಾಯಕರಾದ ಮಾನವರನ್ನು ಉತ್ತಮ ಪಡಿಸುವುದರಲ್ಲೇ ಹೆಚ್ಚು ಆಸಕ್ತಿಯಿತ್ತು. ಮನುಷ್ಯನು ಉತ್ತಮನಾಗದೆ ಅವನ ಸ್ಥಿತಿಯನ್ನು ಉತ್ತಮ ಪಡಿಸಿದರೆ ಪ್ರಯೋಜನವೇನು? ಗಾಂಧಿಯ ಗುರಿ ಮುಖ್ಯವಾಗಿ ಮನುಷ್ಯರನ್ನು ಉತ್ತಮಗೊಳಿಸುವುದೇ. ವ್ಯಕ್ತಿಯ ಮಹತ್ವದಲ್ಲಿ ಆತನಿಗೆ ವಿಶ್ವಾಸವಿತ್ತು. ಆತ್ಮ ಕಥೆಯಲ್ಲಿ "ಸಹ ಜೀವಿಗಳ ಅವಮಾನದಿಂದ ಮನುಷ್ಯರು ಗೌರವಿತರಾದೆವೆಂದುಕೊಳ್ಳುವುದರ ಅರ್ಥ ನನಗೆ ತಿಳಿಯಲೇ ಇಲ್ಲ" ಎಂದು ಬರೆದಿದ್ದಾರೆ. ಆತನಿಗೆ ಉತ್ತರ ತಿಳಿದಿರಬೇಕು. ಕೆಲವರು ಬೇರೆಯವರನ್ನು ಮೇಲಕ್ಕೆತ್ತಿ ದೊಡ್ಡವರಾದೆವೆಂದುಕೊಳ್ಳುತ್ತಾರೆ. ಕೆಲವರು ಬೇರೆಯವರನ್ನು ಅವಮಾನಿಸಿ ತಮ್ಮ ಮಹತ್ವ ಹೆಚ್ಚಿತೆಂದುಕೊಳ್ಳುತ್ತಾರೆ. ಇದೇ ದಾತನಿಗೂ, ಹಿಂಸಕನಿಗೂ, ಮಹಾತ್ಮನಿಗೂ, ನಿರಂಕುಶಾಧಿಕಾರಿಗೂ ಇರುವ ಭೇದ.

ದಬ್ಬಾಳಿಕೆ, ಅಲ್ಪ ಸಂಖ್ಯಾತರಿಂದಾಗಲಿ, ಬಹು ಸಂಖ್ಯಾತರಿಂದಾಗಲೀ ನಡೆಯುವುದು ಭೇದಗಳಲ್ಲಿ ಸಹನೆಯಿಲ್ಲದಿರುವುದರಿಂದ. ಆತ್ಮ ವಿಶ್ವಾಸವಿಲ್ಲದುದರಿಂದ ಉಂಟಾಗುವ ಹೆದರಿಕೆಯಿಂದ ಈ ಸ್ಪರ್ಧಾ ಪ್ರಪಂಚದಲ್ಲಿ ಬಹು ಜನ ಎದುರಾಳಿಗಳನ್ನು ಪರಮತೀಯರನ್ನು ದ್ವೇಷಿಸುತ್ತಾರೆ. ಆದುದರಿಂದಲೇ ಅನೇಕ ಜನ ಅಲ್ಪ ಸಂಖ್ಯಾತರ ರಕ್ಷಕರು ಅವರನ್ನು ಬಹು

ಸಂಖ್ಯಾತರಿಗೆ ಬಿಟ್ಟುಕೊಡುತ್ತಾರೆ. ಗಾಂಧಿಯೂ ಇದೇ ತಪ್ಪು ಮಾಡಿದನು. ಟ್ರಾನ್ಸ್‌ವಾಲಿನ ಏಷ್ಯಾ ಖಾತೆಯ ಯಜಮಾನ ಲಯೋನೆಲ್ ಕರ್ಟಿಸ್ "ಗಾಂಧಿ ನನ್ನನ್ನು ನೋಡಲು ಬಂದು ತನ್ನ ದೇಶೀಯರಲ್ಲಿ ಕಷ್ಟ ಸಹಿಷ್ಣುತೆ ಜಾಗರೂಕತೆಗಳಿವೆಯೆಂದು ನಂಬಿಸಲು ಪ್ರಯತ್ನಿಸಿದನು" ಎಂದು ಬರೆದಿದ್ದಾನೆ.

ಅದಕ್ಕೆ ಆತನು "ಸ್ವಾಮೀ ಗಾಂಧಿ ನಿಮಗೆ ನಂಬಿಕೆ ಹುಟ್ಟಿಸಿಕೊಳ್ಳಲು ಹೀಗೆ ಹೇಳುತ್ತಿದ್ದೀರಿ. ಈ ದೇಶದ ಯೂರೋಪಿಯನ್ನರು ಹೆದರುವುದು ಇಂಡಿಯನ್ನರ ದುರ್ಗುಣಗಳಿಗಾಗಿ ಅಲ್ಲ. ಅವರ ಸುಗುಣಗಳಿಗಾಗಿ" ಎಂದು ಉತ್ತರಕೊಟ್ಟರಂತೆ. ಬೇರೆ ಸಂದರ್ಭಗಳಲ್ಲಿ ದುರ್ಗುಣಗಳೇ ಭೇದ ಭಾವಗಳಿಗೆ ಕಾರಣವೆನ್ನುತ್ತಿದ್ದುದರಿಂದ ಯಾವುದೂ ಇತ್ಯರ್ಥವಾಗಲಿಲ್ಲ. ಭೇದ ಭಾವ ತೊಲಗಬೇಕಾದರೆ ಅದನ್ನುಳ್ಳವರ ಮನಸ್ಸು ಶುದ್ಧವಾಗಬೇಕು; ಗಾಂಧಿ ಈ ಪ್ರಯತ್ನಕ್ಕೂ ಕೈ ಹಾಕಿದನು. ಹಿಂಸಕರನ್ನೂ, ಹಿಂಸೆಗೊಳಗಾದವರನ್ನೂ ಸುಧಾರಿಸಿ ಮಾನವನ ಮುನ್ನಡೆಗೆ ಸಹಾಯಕನಾಗಲು ಆಶಿಸಿದನು.

ದಕ್ಷಿಣ ಆಫ್ರಿಕಾದ ಬಿಳಿಯರು ಬಹು ಸಂಖ್ಯಾತರಾದ ಇಂಡಿಯನ್ನರು ಮತ್ತು ನೀಗ್ರೋಗಳಿಂದ ತಮಗೆ ರಕ್ಷಣೆ ಆವಶ್ಯಕವೆಂದು ತಿಳಿದಿದ್ದರು. ೧೮೯೬ ರಲ್ಲಿ ನೇಟಾಲಿನಲ್ಲಿ ೪೦೦,೦೦೦ ನೀಗ್ರೋಗಳೂ, ೫೧,೦೦೦ ಇಂಡಿಯನ್ನರೂ, ೫೦,೦೦೦ ಬಿಳಿಯರೂ ಇದ್ದರು. ಗುಡ್‌ಹೋಪ್ ಭೂಶಿರ ಪ್ರಾಂತ್ಯದಲ್ಲಿ ೯೦೦,೦೦೦ ನೀಗ್ರೋಗಳೂ, ೧೦,೦೦೦ ಇಂಡಿಯನ್ನರೂ, ೪೦೦,೦೦೦ ಯೂರೋಪಿಯನ್ನರೂ ಇದ್ದರು. ಟ್ರಾನ್ಸ್‌ವಾಲಿನಲ್ಲಿ ೬೫೦,೦೦೦ ನೀಗ್ರೋಗಳೂ, ೫,೦೦೦ ಇಂಡಿಯನ್ನರೂ ೧೨೦,೦೦೦ ಬಿಳಿಯರೂ ಇದ್ದರು. ೧೯೧೪ ರಲ್ಲಿ ೫ ಲಕ್ಷ ನೀಗ್ರೋಗಳು ಒಂದೂಕಾಲು ಲಕ್ಷ ಬಿಳಿಯರನ್ನು ಅಸಾಧ್ಯವಾಗಿ ಸಂಖ್ಯೆಯಲ್ಲಿ ಮೀರಿಸಿಬಿಟ್ಟಿದ್ದರು.

ಇಂಡಿಯನ್ನರು ನೀಗ್ರೋಗಳ ನಾಯಕರಾಗುವರೆಂದು ಬಿಳಿಯರು ಹೆದರಿದರು. ಅಥವಾ ಪರದೇಶೀಯರಾಗಿ ಸಂಖ್ಯೆಯಲ್ಲಿ ಕಡಿಮೆಯಾಗಿದ್ದ ಇಂಡಿಯನ್ನರನ್ನು ಹಿಂಸಿಸುವುದು ಸುಲಭವಾಗಿ ತೋರಿದ್ದಿರಬಹುದು

೧೮೬೦ ರಲ್ಲಿ ಬ್ರಿಟಿಷರ ಸಕ್ಕರೆ, ಟೀ, ಕಾಫಿ, ತೋಟಗಳಲ್ಲಿ ಕೆಲಸ

ಮಾಡಲು ಐದು ವರ್ಷ ಕಾಲದ ಒಪ್ಪಂದದ ಮೇಲೆ ಇಂಡಿಯನ್ನರು ಬಂದರು. ಕೆಲವು ಬಾರಿ ಬಿಟ್ಟಿ ಕೆಲಸ ಮಾಡುತ್ತಾ ಮತ್ತೆ, ಐದು ವರ್ಷಕಾಲ ನಿಂತರು. ಹೇಗಾದರೂ ಅವರ ದಾರಿ ಖರ್ಚನ್ನು ಯಜಮಾನ ಕೊಡಬೇಕಾಗಿತ್ತು. ಅನೇಕ ಬಾರಿ ಅವಧಿ ಮುಗಿದಮೇಲೂ ಇಂಡಿಯಾಕ್ಕಿಂತ ಆಫ್ರಿಕವೇ ಹೆಚ್ಚು ಸುಖವಾಗಿ ತೋರಿ ಕೆಲವರು ಅಲ್ಲೇ ನೆಲಸಿದರು. ಕಷ್ಟ ಸಹಿಷ್ಣುಗಳೂ, ಮಿತವ್ಯಯದವರೂ ಆದ ಇಂಡಿಯನ್ನರ ಸಂಖ್ಯೆ, ಐಶ್ವರ್ಯಗಳು ಹೆಚ್ಚುತ್ತಿದ್ದುದನ್ನು ನೋಡಿ ಗಾಬರಿಗೊಂಡು ೧೮೯೪ ರಲ್ಲಿ ಬಿಳಿಯರು ಕಾನೂನನ್ನು ಬದಲಾಯಿಸಿದರು. ಅಲ್ಲಿಂದ ಮುಂದೆ ಐದು ವರ್ಷದ ಅವಧಿ ಮುಗಿದ ಮೇಲೆ ಇಂಡಿಯನ್ನರು ಸ್ವದೇಶಕ್ಕೆ ಹಿಂದಿರುಗದಿದ್ದರೆ ಅವರು ಆಫ್ರಿಕಾದಲ್ಲಿ ಜೀವಾವಧಿ ಗುಲಾಮರಾಗಿರಬೇಕಾಗಿತ್ತು; ಅಥವಾ ಮೂರು ಪೌಂಡು ತಲೆಗಂದಾಯ ಕೊಟ್ಟು ಸ್ವತಂತ್ರರಾಗಿರಬಹುದಾಗಿತ್ತು. ಇದು ಬಹಳ ಹೆಚ್ಚು ಹಣವಾಗುತ್ತಿದ್ದುದರಿಂದ ಅಲ್ಲಿ ನಿಂತರೆ ಗುಲಾಮಗಿರಿಯೇ ಸಿದ್ಧವಾಗಿತ್ತು.

ಇವರೇ ಅಲ್ಲದೆ ಬೇರೆ ಇಂಡಿಯನ್ನರೂ ಆಫ್ರಿಕಾಕ್ಕೆ ವ್ಯಾಪಾರಿಗಳಾಗಿ, ಕೆಲಸಗಾರರಾಗಿ, ಅಥವಾ ಗಾಂಧಿಯಂತೆ ವ್ಯವಹಾರಕ್ಕಾಗಿ ಹೋದರು. ಕೆಲವರು ಬೇಕಾದಷ್ಟು ಆಸ್ತಿ ಕೂಡಿಸಿದರು. ಕೆಲವರು ಹಡಗುಗಳ ಯಜಮಾನರೂ ಇದ್ದರು.

ಇವರೆಲ್ಲರೂ ವಿಕ್ಟೋರಿಯಾ ರಾಣಿಯ ಪ್ರಜೆಗಳಾಗಿದ್ದುದರಿಂದ, ಆಸ್ತಿಯ ಅರ್ಹತೆಯಿದ್ದವರಿಗೆಲ್ಲಾ ಮತದಾನದ ಹಕ್ಕೂ ಇತ್ತು. ಗಾಂಧಿ ಆಫ್ರಿಕಾಕ್ಕೆ ಬಂದ ಮೂರನೆಯ ವರ್ಷ ೧೮೯೬ ರಲ್ಲಿ ಏಷ್ಯಾದವರ ಈ ಹಕ್ಕು ಕಿತ್ತುಕೊಳ್ಳಲ್ಪಟ್ಟಿತು.

ಇಂಡಿಯನ್ನರ ಮೇಲೆ ಎಷ್ಟೋ ತೊಂದರೆಗಳು ಹೊರಿಸಲ್ಪಟ್ಟುವು. ನೇಟಾಲಿನಲ್ಲಿ ಇಂಡಿಯಾ ದೇಶೀಯನು ರಾತ್ರಿ ಒಂಬತ್ತು ಗಂಟೆಯಮೇಲೆ ರಸ್ತೆಯಲ್ಲಿ ಓಡಾಡಬೇಕಾದರೆ ಒಂದು ಅಪ್ಪಣೆ ಚೀಟಿಯನ್ನಿಟ್ಟುಕೊಂಡಿರಬೇಕಾಗಿತ್ತು. ಡಚ್ಚರಿಗೆ ಸೇರಿದ ಆರೆಂಜ್ ಫ್ರೀಸ್ಟೇಟಿನಲ್ಲಿ ಇಂಡಿಯನ್ನರು ಆಸ್ತಿಹೊಂದುವುದಕ್ಕಾಗಲಿ, ವ್ಯಾಪಾರ ಮಾಡುವುದಕ್ಕಾಗಲಿ, ಭೂಮಿಯನ್ನಾಳುವುದಕ್ಕಾಗಲಿ ಆಸ್ಪದವಿರಲಿಲ್ಲ. ಜೂಲು ಲ್ಯಾಂಡಿನಲ್ಲಿ ಅವರು ಭೂಮಿ

ಯನ್ನು ಕೊಳ್ಳುವಂತಿರಲಿಲ್ಲ. ಟ್ರಾನ್ಸ್‌ವಾಲಿನಲ್ಲೂ ಈ ಹಕ್ಕಿರಲಿಲ್ಲ.. ಜೊತೆಗೆ ಅಲ್ಲಿ ವಾಸಿಸಲು ಮೂರು ಪೌಂಡು ಕಂದಾಯ ತೆರಬೇಕಾಗಿತ್ತು. ಆದೂ ಗಲ್ಲಿಗಳಲ್ಲಿ. ಕೇಪ್ ಕಾಲೋನಿಯ ಕೆಲವು ಪ್ರದೇಶಗಳಲ್ಲಿ ಅವರು ರಸ್ತೆಯ ಪಕ್ಕಗಳಲ್ಲಿ ಓಡಾಡಕೂಡದಾಗಿತ್ತು. ಕಟ್ಟಲೆಗಳಿಲ್ಲದ ಕಡೆ ಹಾಗೆ ನಡೆಯಲು ಅವರು ಒದೆತಗಳಿಂದ ಹೆದರುತ್ತಿದ್ದರು. ಗಾಂಧಿ ಹಾಗೊಂದು ಸಲ ಒದೆಯಲ್ಪಟ್ಟಿದ್ದನು. ಹೀಗಿದ್ದರೂ ಕಾನೂನು ಪುಸ್ತಕಗಳಲ್ಲಿ ಇಂಡಿಯನ್ನರನ್ನು ಅಸಂಸ್ಕೃತ ಏಷ್ಯಾಟಿಕರೆಂದು ವಿವರಿಸಿದ್ದಾರೆ.

ಗಾಂಧಿ ೧೮೯೬ ರ ಅಕ್ಟೋಬರ್ ೨೬ ರಲ್ಲಿ ಮದರಾಸಿನಲ್ಲಿ ನಡೆದ ಸಭೆಯಲ್ಲಿ "ಅವರು ನಮ್ಮನ್ನು ಮೃಗಗಳಂತೆ ಕಾಣುತ್ತಾರೆ'' ಎಂದು ಹೇಳಿದರು.

ಡಚ್ಚರಿಗೂ, ಬ್ರಿಟಿಷರಿಗೂ ೧೮೯೯ ರಿಂದ ೧೯೦೨ ರವರೆಗೆ ಬೋಯರ್ ಯುದ್ಧ ನಡೆದು, ಬ್ರಿಟಿಷರು ಗೆದ್ದಮೇಲೆ ಎರಡು ಪಕ್ಷದವರೂ ಸೇರಿ ಮೂರನೆಯವರನ್ನು ಹಿಂಸಿಸಿ ಸಮಾಧಾನ ಪಡೆಯಲು ಪ್ರಯತ್ನಿಸಿದರು. ದಕ್ಷಿಣ ಆಫ್ರಿಕಾದ ಇಂಡಿಯನ್ನರ ಪ್ರಶ್ನೆ ರಾಜಕೀಯ ಕಾಳ್ಗಿಚ್ಚಾಯಿತು. ಬೋಯರರ ಅಪಜಯವಾದಮೇಲೆ ಆರ್ಥಿಕ ಮತ್ತು ರಕ್ಷಣಾ ಮಂತ್ರಿಯಾದ ಬೋಯರ್ ಸೈನ್ಯಾಧಿಪತಿ ಮತ್ತು ವಕೀಲನಾದ ಜಾನ್ ಕ್ರಿಶ್ಚಿಯನ್ ಸ್ಮಟ್ಸ್ ೧೯೦೬ ಅಕ್ಟೋಬರಿನಲ್ಲಿ ದಕ್ಷಿಣ ಆಫ್ರಿಕಾದ ಕರುಳನ್ನು ಕೊರೆಯುತ್ತಿರುವ ಈ ಏಷ್ಯಾ ವ್ಯಾಧಿಯನ್ನು ಖಂಡಿತವಾಗಿ ನಾಶಮಾಡಬೇಕು, ಎಂದು ಭಾಷಣ ಮಾಡಿದನು. ಅವನಂತೆಯೇ ಬೋಯರ್ ಸೈನ್ಯಾಧಿಪತಿಯಾಗಿದ್ದ ಜನರಲ್ ಲೂಯಿ ಬೋಥಾ ಈಗ ಮುಖ್ಯ ಮಂತ್ರಿಯಾಗಿ ಇಂಡಿಯಾ ವಿರುದ್ಧ ಯೋಜನೆಯನ್ನು ಹೆಚ್ಚು ಸ್ಪಷ್ಟ ಪಡಿಸಿದನು. ೧೯೦೭ ರ ಜನವರಿಯಲ್ಲಿ ನನ್ನ ಪಂಗಡ ಸರ್ಕಾರ ವಹಿಸಿಕೊಂಡರೆ, ನಾಲ್ಕು ವರ್ಷಗಳಲ್ಲಿ ಈ ಕೂಲಿಗಳನ್ನು ದೇಶದಿಂದ ಹೊರ ಗಟ್ಟುತ್ತೇವೆ, ಎಂದು ಘೋಷಿಸಿದನು. "ಕೂಲಿಗಳು" ಎಂಬುದು ಭಾರತೀಯರನ್ನುದ್ದೇಶಿಸಿ ಉಪಯೋಗಿಸುತ್ತಿದ್ದ ಅಪಮಾನದ ಮಾತು. ನೂರು ಸಾವಿರ ಭಾರತೀಯರ ಇರುವಿಕೆಗೆ ಅಪಾಯ ಒದಗಿತ್ತು. ಗಾಂಧಿ ಅವರನ್ನು ತಾನು ಉಳಿಸಬಹುದೆಂದು ನಂಬಿದನು.

## ೬. ಆಕ್ರಮಣದೆದುರು ಧೈರ್ಯ

ಬಿಳಿಯರ ಪೂರ್ವ ಕಲ್ಪಿತ ಅಭಿಪ್ರಾಯಗಳನ್ನು ನಾಶಪಡಿಸಲು ಸಾಧ್ಯವೆಂದು ಗಾಂಧಿ ತಿಳಿಯಲಿಲ್ಲ. ೧೯೧೨ ರ ಜೂನ್ ೩ ನೇ ತಾರೀಖಿನ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ಆತನು ಈ ಅಭಿಪ್ರಾಯಗಳನ್ನು ಕಾನೂನುಗಳಿಂದ ದೂರ ಮಾಡಲಾಗುವುದಿಲ್ಲ .......ಬಹು ಕಾಲದ ಕೆಲಸ ವಿದ್ಯಾಭ್ಯಾಸಗಳಿಂದ ಮಾತ್ರ ಅದು ಸಾಧ್ಯ" ಎಂದು ಬರೆದಿದ್ದಾರೆ. ಪ್ರತ್ಯೇಕತೆ ಬೇಗ ಕೊನೆಗೊಳ್ಳುವುದೆಂದೂ ಆತನು ಆಶಿಸಲಿಲ್ಲ. "ಇಂಡಿಯನ್ನರು ನೋವಿನಿಂದ, ಮೌನದಿಂದ ಈ ಪ್ರತ್ಯೇಕತೆಯನ್ನು" ಸಹಿಸುತ್ತಾರೆ, ಎಂದರು. ದಕ್ಷಿಣ ಆಫ್ರಿಕನ್ನರು ಈ ಪ್ರತ್ಯೇಕತೆ ಕಾನೂನಿಗೆ ಬೆಂಬಲಕೊಡುತ್ತಿದ್ದರೆಂಬುದೇ ಆತನ ಅಸಮಾಧಾನಕ್ಕೆ ಕಾರಣ. ಕಾನೂನು ನ್ಯಾಯವಾಗಿರಬೇಕು. ಅದರ ನಿರ್ವಹಣೆ ನ್ಯಾಯವಾಗಿರುವುದೆಂದು ಆತನು ನಿರೀಕ್ಷಿಸಲಿಲ್ಲ; ಬಿಳಿಯರ ವಿಚಾರದಲ್ಲಿ ಪಕ್ಷಪಾತವಿದ್ದೇಇರುವುದು. ಆದರೆ ನ್ಯಾಯದ ದೃಷ್ಟಿಯಲ್ಲಿ ಸಮಾನತೆ ಸ್ಥಾಪಿಸಲ್ಪಟ್ಟರೆ ಜೀವನ ತನ್ನ ತೊಡಕಾದ ಮಾರ್ಗದಲ್ಲಿ ಸಾಗಿ, ಒಳ್ಳೆಯ ಪೌರರಿಂದ ಬೆಳಗಬಹುದು. ಇಂಡಿಯನ್ನರು ತಮ್ಮ "ಕೀಳ್ತನ"ವನ್ನು ಆಲಸ್ಯದಿಂದ ಒಪ್ಪಿಕೊಂಡುಬಿಟ್ಟರೆ ಅವರ ಗೌರವ, ನೈತಿಕಶಕ್ತಿ ನಾಶವಾಗುವುದು. ಆ ಕೀಳ್ತನವನ್ನು ಹೊರಿಸಿದ ಬಿಳಿಯರ ಗತಿಯೂ ಅದೇ ಆಗುವುದು.

ಸಂಸಾರವನ್ನು ಮನೆಯನ್ನು ಬಿಟ್ಟು ಆಗಲೇ ಮೂರು ವರ್ಷಗಳಾಗಿದ್ದುವು. ಪ್ರತ್ಯೇಕತೆಯನ್ನುನಿರ್ಮೂಲ ಮಾಡಲು ದೀರ್ಘಕಾಲಬೇಕಾಗಿತ್ತು; ಆದುದರಿಂದ ೧೮೯೬ ರಲ್ಲಿ ಕಸ್ತೂರಿಬಾಯಿಯನ್ನೂ, ಎಂಟು ವರ್ಷದ ಹರಿಲಾಲನನ್ನೂ, ೧೮೯೨ ರ ಅಕ್ಟೋಬರ್ ೨೮ ರಲ್ಲಿ ಹುಟ್ಟಿದ ಮಣಿಲಾಲನೆಂಬ ಎರಡನೆಯ ಮಗನನ್ನೂ, ಕರೆತರಲು ಗಾಂಧಿ ಇಂಡಿಯಾಕ್ಕೆ ಹಿಂದಿರುಗಿದರು. ಈ ಸಮಯದಲ್ಲಿ ದಕ್ಷಿಣ ಆಫ್ರಿಕದ ಸಹೋದರರ ಸ್ಥಿತಿಯನ್ನು ತನ್ನ ದೇಶೀಯರಿಗೆ ವಿವರಿಸಿದನು. ಈ ಚಟುವಟಿಕೆಗಳು ದಕ್ಷಿಣ ಆಫ್ರಿಕಾದವರಿಗೆ ತಿಳಿದು ಅವರು ಉದ್ರಿಕ್ತರಾದರು. ಡರ್ಬಾನಿನಲ್ಲಿ ಗಾಂಧಿಯ ಹಡಗು ನಿಂತಾಗ, ಅದರೊಡನೆ ಎಂಟು ನೂರು ಜನರ ಇನ್ನೊಂದು ಹಡಗೂ ಬರಲು, ಗಾಂಧಿ ಅನಾವಶ್ಯಕವಾಗಿ ದಕ್ಷಿಣ ಆಫ್ರಿಕಾವನ್ನು ಇಂಡಿ

ಯನ್ನರಿಂದ ತುಂಬುತ್ತಿದ್ದಾನೆಂದು ಆಪಾದಿಸಿದರು. ವಾಸ್ತವವಾಗಿ ಅವರ ಬರುವಿಕೆಗೂ ಗಾಂಧಿಗೂ ಏನೂ ಸಂಬಂಧವಿರಲಿಲ್ಲ. ಎರಡು ಹಡಗುಗಳೂ ಇಂಡಿಯಾಕ್ಕೆ ಹಿಂದಿರುಗಬೇಕೆಂದು ಬಿಳಿಯರು ಒತ್ತಾಯ ಪಡಿಸಿದರು. ಕಡೆಗೆ ಪ್ರಯಾಣಿಕರಿಗೆ ಇಳಿಯಲು ಅವಕಾಶವೊದಗಿದಾಗ ಗಾಂಧಿಯನ್ನು ಉದ್ರೇಕಗೊಂಡ ಒಂದು ಗುಂಪು ಜನ ಕಲ್ಲುಗಳಿಂದ, ಇಟ್ಟಿಗೆಗಳಿಂದ, ಮೊಟ್ಟೆಗಳಿಂದ ಹೊಡೆದು, ರುಮಾಲನ್ನು ಕಿತ್ತುಕೊಂಡು ಹೊಡೆದು ಒದ್ದರು. ನೋವಿನಿಂದ ತಲೆಸುತ್ತಿ ಬರಲು ಬೀಳದಂತೆ ಒಂದು ಮನೆಯ ಕಟಕಟಿ ಹಿಡಿದು ನಿಂತನು. ಬಿಳೀ ಜನರು ಹೊಡೆತವನ್ನು ಮುಂದುವರಿಸಿದರು. ಈ ಸಮಯದಲ್ಲಿ ಅಲ್ಲಿ ಹೋಗುತ್ತಿದ್ದ ಮುನಿಸಿಪಲ್ ಪೋಲೀಸ್ ಸೂಪರಿಂಟೆಂಡೆಂಟರ ಹೆಂಡತಿ ಶ್ರೀಮತಿ ಅಲೆಗ್ಸಾಂಡರ್ ಹುಚ್ಚೆದ್ದ ಗುಂಪಿಗೂ, ನರಳುತ್ತಿದ್ದ ಗಾಂಧಿಗೂ ನಡುವೆ ನಿಂತಳು. ಮೈಯೆಲ್ಲಾ ಹುಣ್ಣಾಗಿ ರಕ್ತ ಸೋರುತ್ತಿರಲು ಆತನನ್ನು ಒಬ್ಬ ಇಂಡಿಯನ್ ಸ್ನೇಹಿತರ ಮನೆಗೆ ಕರೆದೊಯ್ದರು; ಅಲ್ಲಿಗೆ ಗಾಂಧಿಯ ಹೆಂಡತಿ ಮಕ್ಕಳು ಆಗಲೇ ಬಂದಿದ್ದರು. ಅರಚುತ್ತಾ ಜನ ಮನೆಯನ್ನು ಸುತ್ತು ವರಿದು ಗಾಂಧಿಯನ್ನು ಕೊಡಬೇಕೆಂದು ಕೂಗಿ ಕೂಗಿಕೊಂಡರು. ಶ್ರೀ ಅಲೆಗ್ಸಾಂಡರರು ಅವರೆದುರು ಬಂದು ನಿಂತರು. ಆ ಜನಕ್ಕೆ ಗಾಂಧಿಯ ರಕ್ತದಾಹವುಂಟಾಗಿತ್ತು. ಅವನನ್ನು ಸುಡುತ್ತೇವೆ" ಎಂದು ಅರಚಿದರು ಸ್ವಲ್ಪ ಶಾಂತವಾದಮೇಲೆ, "ಹುಳಿ ಸೇಬಿನ ಗಿಡಕ್ಕೆ ಮುದಿ ಗಾಂಧಿಯನ್ನು ನೇತುಹಾಕುತ್ತೇವೆ", ಎಂದು ಹಾಡಿದರು. ಕೆಲವರು ಮನೆಗೆ ಬೆಂಕಿಯಿಡಲು ಪ್ರಯತ್ನಿಸಿದರು. ಹೆದರಿ ಪೋಲೀಸ್ ಸೂಪರಿಂಟೆಂಡೆಂಟ್ ಇಬ್ಬರು ಪತ್ತೇದಾರರನ್ನು ಕಳುಹಿಸಿದನು. ಅವರಲ್ಲೊಬ್ಬನು ತನ್ನ ಬಟ್ಟೆಗಳನ್ನು ಗಾಂಧಿಗೆ ಕೊಟ್ಟನು. ಅವರಿಬ್ಬರೂ ಇಂಡಿಯನ್ನರಂತೆ ವೇಷ ಹಾಕಿಕೊಂಡು ಮನೆಯ ಹಿಂದಿನ ಬಾಗಿಲಿನಿಂದ ತಪ್ಪಿಸಿಕೊಂಡು ಹೋಗಿ ಗಾಂಧಿಯನ್ನು ಪೋಲೀಸ್ ಸ್ಟೇಷನ್ನಿನಲ್ಲಿಟ್ಟರು. ಜನ ಶಾಂತರಾಗುವವರೆಗೂ ಮೂರು ದಿನ ಗಾಂಧಿ ಅಲ್ಲಿದ್ದರು.

ಈ ವರ್ತಮಾನ ಲಂಡನ್ನನ್ನು ತಲುಪಿದಾಗ, ಬ್ರಿಟಿಷ್ ಸೆಕ್ರೆಟರಿ ಆಫ್ ಸ್ಟೇಟ್ ಜೋಸೆಫ್ ಚೇಂಬರ್‌ಲೇನ್ ತಪ್ಪಿತಸ್ಥರನ್ನು ವಿಚಾರಣೆಗೆ

ಗುರಿ ಮಾಡಬೇಕೆಂದು ನೆಟಾಲ್ ಸರ್ಕಾರಕ್ಕೆ ತಿಳಿಸಿದನು. ಗಾಂಧಿಗೆ ತನ್ನನ್ನು ಹೊಡೆದವರಲ್ಲಿ ಅನೇಕರ ಪರಿಚಯವಿತ್ತು ; ಆದರೆ ಸಾಕ್ಷ್ಯ ಕೊಡಲು ಆತನೊಪ್ಪಲಿಲ್ಲ. ಅದು ಅವರ ತಪ್ಪಲ್ಲವೆಂದೂ, ಸಮಾಜದ, ಸರ್ಕಾರದ ತಪ್ಪೆಂದೂ ಹೇಳಿದನು. "ಇದು ನನಗೆ ಧರ್ಮದ ವಿಚಾರ ; ಆತ್ಮಸಂಯಮವಿರಬೇಕು" ಎಂದನು.

ಎರಡು ವರ್ಷಗಳ ಅನಂತರ ಬೋಯರ್ ಯುದ್ಧದಲ್ಲಿ ಬ್ರಿಟಿಷರಿಗಾಗಿ ಇಂಡಿಯನ್ನರ ಒಂದು ದಳವನ್ನು ಏಟುಬಿದ್ದವರನ್ನು ಹೊರಲು, ಆಸ್ಪತ್ರೆಯಲ್ಲಿ ಕೆಲಸಮಾಡಲು, ಏರ್ಪಡಿಸುವುದಾಗಿ ಗಾಂಧಿ ಹೇಳಿದರು. ನೆಟಾಲ್ ಸರ್ಕಾರ ಈ ಪ್ರಸ್ತಾಪವನ್ನು ತಿರಸ್ಕರಿಸಿತು. ಆದರೂ ಗಾಂಧಿ ಮತ್ತು ಕೆಲವು ಇಂಡಿಯನ್ನರು ತಮ್ಮ ಸ್ವಂತ ಖರ್ಚಿನಲ್ಲಿ ಆಸ್ಪತ್ರೆಯ ದಾದಿಗಳಾಗಲು ಕಲಿಯತೊಡಗಿದರು. ಆದರೂ ಸರ್ಕಾರ ಅವರ ಸಹಾಯವನ್ನು ತಿರಸ್ಕರಿಸಿತು. ಆದರೆ ಬೋಯರರು ಮುನ್ನುಗ್ಗುತ್ತಿರಲು ರಣಭೂಮಿಗಳಲ್ಲಿ ಹೆಣಗಳ ರಾಶಿಗಳು ಹೆಚ್ಚುತ್ತಿತ್ತು ; ಗಾಯಗೊಂಡವರಿಗೆ ಶುಶ್ರೂಷೆಯಿರಲಿಲ್ಲ. ಕಡೆಗೆ ಸರ್ಕಾರ ಇಂಡಿಯನ್ನರ ಒಂದು ದಳದ ರಚನೆಗೆ ಒಪ್ಪಿಗೆ ಕೊಟ್ಟಿತು. ಮುನ್ನೂರು ಜನ ಸ್ವತಂತ್ರ ಹಿಂದೂಗಳೂ, ತಮ್ಮ ಯಜಮಾನರಿಂದ ಅಪ್ಪಣೆಪಡೆದ ಎಂಟುನೂರು ಕೆಲಸದಾಳುಗಳೂ, ಈ ದಳವನ್ನು ಸೇರಿದರು. ದಕ್ಷಿಣ ಆಫ್ರಿಕ, ಇಂಗ್ಲೆಂಡ್ ಅವರ ಕೆಲಸವನ್ನು ಹೊಗಳಿತು; ಗುಂಡಿನ ಸುರಿಮಳೆಯಲ್ಲಿ ಅವರು ತೋರಿದ ಧೈರ್ಯ ಸಾಹಸಗಳನ್ನು ಕೇಳಿದಾಗ ಮೆಚ್ಚುಗೆಯೂ ಉಂಟಾಯಿತು.

೧೯೧೧ರ ಜೋಹಾನ್ಸ್‌ಬರ್ಗಿನ "ಇಲ್ಲಸ್ಟ್ರೇಟೆಡ್ ಸ್ಟಾರ್" ಪತ್ರಿಕೆಯಲ್ಲಿ ಶ್ರೀ ವೀರ್‌ಸ್ಟೆಂಟ್ ಎಂಬ ಬ್ರಿಟಿಷ್ ಸಂಪಾದಕ ೧೯೦೦ ರ ಜನವರಿಯಲ್ಲಿ ನಡೆದ ಸ್ಪಿಯನ್‌ಕಾಪ್ ಯುದ್ಧದ ವಿಚಾರವಾಗಿ ಬರೆದನು. ಬ್ರಿಟಿಷ್ ಸೈನ್ಯಾಧಿಪತಿ ಜನರಲ್ ಮಿಲ್ಲರ್ ಹಿಮ್ಮೆಟ್ಟಬೇಕಾಗಿ ಬಂತು. ಆಗ ಗಾಯಗೊಂಡವರನ್ನು ಉಳಿಸಬೇಕೆಂದು ಇಂಡಿಯನ್ನರಿಗೆ ತಿಳಿಸಿದನು. ಗಾಂಧಿ ತನ್ನ ಕಡೆಯವರನ್ನು ರಣಭೂಮಿಗೊಯ್ದನು. ಶತ್ರುಗಳು ಗುಂಡುಗಳನ್ನು ಮಳೆಗರೆಯುತ್ತಿರಲು ಗಾಯಗೊಂಡವರನ್ನು ಅನೇಕ ದಿನ ಆಸ್ಪತ್ರೆಗಳಿಗೆ ಸಾಗಿಸಿದರು. "ಎಷ್ಟೋ ಜನ ಹೆಚ್ಚು ಶಕ್ತರಾದವರನ್ನು ನುಚ್ಚು

ನುರಿ ಮಾಡುವಂತಹ ರಾತ್ರಿಯ ಕೆಲಸ, ಮುಗಿದಮೇಲೆ ಪ್ರಾತಃಕಾಲ ಗಾಂಧಿ ರಸ್ತೆಯ ಪಕ್ಕದಲ್ಲಿ ಕುಳಿತು ಒಂದು ರೊಟ್ಟಿಯನ್ನು ತಿನ್ನುತ್ತಿದ್ದು ದನ್ನು ನೋಡಿದೆ. ಬುಲ್ಲರರ ಸೈನ್ಯದಲ್ಲಿ ಎಲ್ಲರೂ ಬೇಸರದಿಂದ ರೇಗಾಡು ತ್ತಿದ್ದರು. ಗಾಂಧಿ ಮಾತ್ರ ಶಾಂತಚಿತ್ತನಾಗಿ, ಹಸನ್ಮುಖಿಯಾಗಿ, ಧೈರ್ಯ ವಾಗಿದ್ದನು. ಆತನನ್ನು ನೋಡಿದವರಿಗೆ ಉಲ್ಲಾಸವಾಗುತ್ತಿತ್ತು" ಎಂದು ಬರೆದಿದ್ದಾನೆ. ಕಾಕಿ ಬಟ್ಟೆ, ಅಗಲವಾದ ಟೋಪಿ, ರೆಡ್‌ಕ್ರಾಸ್ ಪಟ್ಟಿ, ಜೋಲುತ್ತಿರುವ ಮೀಸೆ, ಇದು ಗಾಂಧಿಯ ಆಗಿನ ಚಿತ್ರ. ದಳದ ಕೆಲಸ ಮುಗಿದಮೇಲೆ ಗಾಂಧಿ ಮತ್ತು ಬೇರೆ ಕೆಲವರಿಗೆ ಯುದ್ಧ ಪ್ರಶಸ್ತಿ ಕೊಡ ಲಾಯಿತು.

ಇಂಡಿಯನ್ನರು ಈ ಯುದ್ಧದಲ್ಲಿ ತೋರಿದ ಧೈರ್ಯದಿಂದ ದಕ್ಷಿಣ ಆಫ್ರಿಕಾದವರು ಅವರ ವಿಚಾರದಲ್ಲಿ ಹೆಚ್ಚು ಸಹಾನುಭೂತಿ ತೋರುವರೆಂದು ಗಾಂಧಿ ನಂಬಿದ್ದನು. ಅದಕ್ಕೆ ಬದಲಾಗಿ ವೈರ ಹೆಚ್ಚಿತು ಆದರೂ ಗಾಂಧಿ ಪುನಃ ಬ್ರಿಟಿಷ್ ಸೈನ್ಯಕ್ಕೆ ಜೂಲು ದಂಗೆಯನ್ನಡಗಿಸಲು ೧೯೦೬ರಲ್ಲಿ ಸೇರಿದರು. "ಬ್ರಿಟಿಷ್ ಚಕ್ರಾಧಿಪತ್ಯವಿರುವುದು ಜಗತ್ತಿನ ಹಿತಕ್ಕಾಗಿ; ನನಗೆ ಅದರಲ್ಲಿ ನಿಷ್ಠೆಯಿದೆ" ಎಂದು ಹೇಳಿದನು.

ದಕ್ಷಿಣ ಆಫ್ರಿಕಾದಲ್ಲಿ ಇಂಡಿಯನ್ನರು, ಕಳೆದ ಈ ವರ್ಷಗಳಲ್ಲಿ ಗಾಂಧಿ ಕುಂದದ ಚೈತನ್ಯವನ್ನೂ, ರೋಷಗೊಳ್ಳುವ ಶಕ್ತಿಯನ್ನೂ, ನಂಬಿಕೆಯ ನ್ನುಂಟುಮಾಡುವ ಪ್ರಾಮಾಣಿಕತೆಯನ್ನೂ, ಹಿರಿಯರು ಕಿರಿಯರೆನ್ನದೆ ಎಲ್ಲರೊಡನೆ ಸರಳವಾಗಿ ಸೇರುವ ಕಲೆಯನ್ನೂ ತೋರಿದನು. ಸಂಸ್ಥೆ ಗಳನ್ನು ಕಟ್ಟುವುದರಲ್ಲಿ, ನಡೆಸುವುದರಲ್ಲಿ ನೈಪುಣ್ಯ ತೋರಿದನು. ಆದರೆ ಇತಿಹಾಸದ ಮಹಾಗಾಂಧಿ ಇನ್ನೂ ಮೊಳಕೆಯಲ್ಲೇ ಇದ್ದು ಯಾರಿಗೂ ಕಾಣಬರುತ್ತಿರಲಿಲ್ಲ.

## ೭. ಪರಿವರ್ತನೆ

ದಕ್ಷಿಣ ಆಫ್ರಿಕದಲ್ಲಿ ಗಾಂಧಿ, ಬಿಳೀ ರಟ್ಟಿನಂತಹ ಕಾಲರ್, ಷರ್ಟ್, ಗೀರುಗೀರು ಟೈ, ಹೊಳಪಾದ ಷೂಗಳು ಮುಂತಾದ ಯೂರೋಪಿಯನ್ ತರದ ಬಟ್ಟೆಗಳನ್ನು ಹಾಕಿಕೊಳ್ಳುತ್ತಿದ್ದನು. ಡರ್ಬನ್ನಿನಲ್ಲಿ, ಸಮುದ್ರ ದಂಡೆಯ ಸೊಗಸಾದ ಪ್ರದೇಶದಲ್ಲಿ ಒಂದು ಇಂಗ್ಲಿಷ್ ಮನೆಯನ್ನು

ಬಾಡಿಗೆಗೆ ತೆಗೆದುಕೊಂಡಿದ್ದನು. ವರ್ಷಕ್ಕೆ ೫-೬ ಸಾವಿರ ಪೌಂಡು ಸಂಪಾದನೆಯಿತ್ತು. ಆತನ ಜೀವನ ಬಿಳಿಯರನ್ನು ಅನುಕರಿಸುವ ಇಂಡಿಯನ್ನನದಾಗಿತ್ತು.

ಆದರೆ ಆತನಿಗೆ ವಿಚಿತ್ರ ಆಲೋಚನೆಗಳಿದ್ದುವು. ೧೮೯೭ ರಲ್ಲಿ ಮೂರನೆಯ ಮಗ ರಾಮದಾಸ ದಕ್ಷಿಣ ಆಫ್ರಿಕದಲ್ಲಿ ಹುಟ್ಟಲು ಮಗುವನ್ನು ಸಾಕುವ ಭಾರವನ್ನು ತಾನೇ ಹೊತ್ತನು. "ತಾಯಿಗೆ ಉಪದೇಶ" ಎಂಬ ಪುಸ್ತಕವನ್ನೋದಿ ದೇವದಾಸನೆಂಬ ತನ್ನ ನಾಲ್ಕನೆಯ ಮಗನ ಹೆರಿಗೆ ಯನ್ನು ತಾನೇ ಮಾಡಿದನು. "ನನಗೇನೂ ಗಾಬರಿಯಾಗಲಿಲ್ಲ" ಎಂದು ಹೇಳಿದನು.

ಮನೆಯಲ್ಲಿ ಕಸ್ತೂರಿಬಾಯಿಗೆ ಅವನಿಂದ ತುಂಬಾ ತೊಂದರೆಯಾಗಿದ್ದಿರಬೇಕು. ಅಡಿಗೆ ಮನೆಯಲ್ಲಿ, ಮಕ್ಕಳ ಪಾಲನೆಯಲ್ಲಿ ತಲೆಹಾಕುವುದಲ್ಲದೆ, ಯಾರು ಯಾರನ್ನೋ ಕರೆದು ಅವರ ಸೇವೆ ಮಾಡಿ, ಕಸ್ತೂರಿಬಾಯಿಯೂ ಮಾಡಬೇಕೆಂದು ಬಲವಂತ ಮಾಡುತ್ತಿದ್ದನು. ಗಾಂಧಿಯ ಮನೆಯಲ್ಲಿ ಕೊಳಾಯಿಗಳಿರಲಿಲ್ಲ. ಒಂದೊಂದು ಕೊಠಡಿಯಲ್ಲೂ ಮೂತ್ರ ಪಾತ್ರೆಯಿರುತ್ತಿತ್ತು. ಇಂಡಿಯಾದಲ್ಲಿ ಹೊಲಸುಗೆಲಸ ಮಾಡುವ ಅಸ್ಪೃಶ್ಯರನ್ನು ನೇಮಿಸಲು ಗಾಂಧಿ ನಿರಾಕರಿಸಿದನು. ಆತ, ಕಸ್ತೂರಿಬಾಯಿ, ದೊಡ್ಡ ಹುಡುಗರು ಈ ಪಾತ್ರೆಗಳನ್ನು ಶುದ್ಧಿಮಾಡುತ್ತಿದ್ದರು. ಆತ ಒತ್ತಾಯಪಡಿಸಿದನು; ಆಕೆಗೆ ಬೇರೆ ಯಾವ ಮಾರ್ಗವೂ ಇರಲಿಲ್ಲ. ಗಾಂಧಿಯ ಕಛೇರಿಯಲ್ಲಿದ್ದ ಒಬ್ಬ ಹರಿಜನ ಗುಮಾಸ್ತೆ, ಅಸ್ಪೃಶ್ಯತೆಯ ಹಿಂಸೆಗಳನ್ನು ತಪ್ಪಿಸಿಕೊಳ್ಳಲು ಕ್ರಿಶ್ಚಿಯನ್ನನಾಗಿದ್ದನು. ಆಚಾರವಂತೆಯಾದ ಕಸ್ತೂರಿಬಾಯಿಯ ದೃಷ್ಟಿಯಲ್ಲೇನೋ ಅವನು ಅಸ್ಪೃಶ್ಯನಾಗಿಯೇ ಉಳಿದಿದ್ದುದರಿಂದ ಆತನ ಪಾತ್ರೆ ಶುದ್ಧಿಮಾಡಲು ನಿರಾಕರಿಸಿದಳು. ಆಕೆಗೆ ಆ ಕೆಲಸವೇ ಇಷ್ಟವಿರಲಿಲ್ಲ. ತಾನಾಗಲಿ, ತನ್ನ ಗಂಡನಾಗಲಿ, ಮಕ್ಕಳಾಗಲಿ ಈ ಕೆಲಸಮಾಡುವ ಆವಶ್ಯಕತೆ ಆಕೆಗೆ ಅರ್ಥವಾಗಲಿಲ್ಲ. ಅದು ಆಕೆಯ ವಿದ್ಯಾಭ್ಯಾಸದ ಭಾಗವೆಂದು ಗಾಂಧಿ ಭಾವಿಸಿದ್ದನು. ಆಕೆ ಅತ್ತು ಕಣ್ಣು ಕೆಂಪಾದುದರಿಂದ ಆತನಿಗೆ ರೇಗಿತು. ಕೆಲಸವನ್ನು ಆಕೆ ಮಾಡಿದರೆ ಸಾಲದು, ನಗುನಗುತ್ತಾ ಮಾಡಬೇಕು. ಅವಳು ಅಳುವು

ದನ್ನು ನೋಡಿ, "ನನ್ನ ಮನೆಯಲ್ಲಿ ಇವೆಲ್ಲಾ ಕೂಡದು" ಎಂದು ಅರಚಿದ ನೆಂದು ಆತನೇ ಕತೆ ಹೇಳುತ್ತಾನೆ. ಆಕೆ, "ನಿನ್ನ ಮನೆ ನಿನಗೇ ಇರಲಿ, ನನ್ನನ್ನು ಕಳುಹಿಸು" ಎಂದಳು.

ಗಾಂಧಿ ಆಕೆಯ ಕೈ ಹಿಡಿದೆಳೆದುಕೊಂಡು ಹೊರ ಬಾಗಿಲವರೆಗೂ ಹೋಗಲು, ಆಕೆ ಬಿಕ್ಕುತ್ತ "ನಿಮಗೆ ನಾಚಿಕೆಯಿಲ್ಲವೆ? ನಾನೆಲ್ಲಿ ಹೋಗಲಿ? ಇಲ್ಲಿ ನನ್ನ ತಂದೆತಾಯಿಗಳೂ, ಬಂಧುಗಳೂ ಯಾರೂ ಇಲ್ಲ. ದಯವಿಟ್ಟು ಬಾಗಿಲು ಹಾಕಿ, ಯಾರಾದರೂ ನೋಡಿ ನಕ್ಕಾರು" ಎಂದಳು.

ಆತನಿಗೆ ಜ್ಞಾನೋದಯವಾಯಿತು. ಆತನ ಸ್ವಭಾವ ಆವೇಶಪೂರಿತ ವಾದುದು. ಮಹಾತ್ಮನ ಶಾಂತಿ ಆತನಿಗೆ ದೊರಕಿದುದು ಅನೇಕ ದಿನ ಪ್ರಯತ್ನಪಟ್ಟು ಮನಸ್ಸನ್ನು ಹತೋಟಿಗೆ ತಂದುದರಿಂದ, ಸುಲಭವಾಗಿ ಆತ ಸಂಯಮಿಯಾದ ಆಶಾರಹಿತನಾದ ಯೋಗಿಯಾಗಲಿಲ್ಲ. ಸ್ವಭಾವವನ್ನೇ ಬದಲಾಯಿಸಿಕೊಳ್ಳಬೇಕಾಯಿತು. ತನ್ನ ಕುಂದುಗಳನ್ನು ಅರಿತು, ಪ್ರಯತ್ನದಿಂದ ತನ್ನ ಕೆಟ್ಟ ಆವೇಗಗಳನ್ನು ಮಾರ್ಪಡಿಸಿ, ತಡೆಹಿಡಿದನು. ವ್ಯಕ್ತಿತ್ವವೇ ಬದಲಾಯಿಸಿತು. ಒಂದೇ ಜೀವಿತ ಕಾಲದಲ್ಲಿ ಎರಡು ಜನ್ಮ ಗಳನ್ನು ಪಡೆದ ಮಹಾನುಭಾವ ಗಾಂಧಿ: ದಕ್ಷಿಣ ಆಫ್ರಿಕಾದಲ್ಲಿ ಈ ಮಾರ್ಪಾಟು ಪ್ರಾರಂಭವಾಯಿತು. ಫಲಿತಾಂಶ ಸ್ವಶಕ್ತಿಯಿಂದ ಬದ ಲಾದ ಮನುಷ್ಯ.

೧೮೯೬ರಲ್ಲಿ ಇಂಡಿಯಾಕ್ಕೆ ಹೊರಟಾಗ, ದಕ್ಷಿಣ ಆಫ್ರಿಕದ ಇಂಡಿಯಾ ದೇಶೀಯರು ಆತನಿಗೆ ಎಷ್ಟೋ ಬಹುಮಾನಗಳನ್ನು ಕೊಟ್ಟರು. ಸಂಕೋಚವಿಲ್ಲದೆ ಆತನು ತೆಗೆದುಕೊಂಡಿದ್ದನು. ಆದರೆ ೧೯೦೧ರಲ್ಲಿ ಬೊಂಬಾಯಿಗೆ ಹಿಂದಿರುಗುವ ಆಲೋಚನೆಯಲ್ಲಿದ್ದಾಗ ಕೆಲವು ಒಡವೆ ಗಳನ್ನೂ, ಕಸ್ತೂರಿಬಾಯಿಗೆ ಒಂದು ಹಾರವನ್ನೂ ಕೊಟ್ಟಾಗ, ಆ ವಜ್ರ, ಮುತ್ತು, ಕೆಂಪು, ಚಿನ್ನದ ಆಭರಣಗಳಿಂದ ದೊರಕುತ್ತಿದ್ದ ಭವಿಷ್ಯ ದಾಧಾರದ ಆಸೆ, ಆಸ್ತಿಯನ್ನು ಬಿಟ್ಟುದರಿಂದ ದೊರಕುವ ಸ್ವಾತಂತ್ರ್ಯದ ಆಸೆ, ಇವೆರಡರ ಘರ್ಷಣೆಯಿಂದ ಒಂದು ರಾತ್ರಿಯೆಲ್ಲಾ ಆತನು ನಿದ್ದೆ ಗೆಟ್ಟನು. ಕಡೆಗೆ ಆ ಆಭರಣಗಳನ್ನು ನಿರಾಕರಿಸಬೇಕೆಂದು ನಿಶ್ಚಯಿಸಿ ದನು. ಕಸ್ತೂರಿಬಾಯಿಯ ಆಕ್ಷೇಪಣೆಯಿಂದ ಪ್ರಯೋಜನವಾಗಲಿಲ್ಲ. ಆ

ಹಣವನ್ನೆಲ್ಲಾ ಸೇರಿಸಿ ದಕ್ಷಿಣ ಆಫ್ರಿಕದ ಇಂಡಿಯನ್ನರಿಗಾಗಿ ಒಂದು ನಿಧಿಯನ್ನೇರ್ಪಡಿಸಿದನು.

೧೯೦೧ರಲ್ಲಿ ಬೊಂಬಾಯಿಯಲ್ಲಿ ಒಬ್ಬ ಅಮೆರಿಕನ್ ಇನ್ಶೂರೆನ್ಸ್ ನಿಯೋಗಿ ವಿಮಾಪತ್ರವನ್ನು ಗಾಂಧಿಗೆ ಮಾರಲು ಬಂದನು. "ಅವರ ಮುಖಭಾವ ಹಿತವಾಗಿತ್ತು; ಮಾತು ಮಧುರವಾಗಿತ್ತು" ಎಂದು ಹೇಳಿದ್ದಾರೆ ಗಾಂಧಿ. ಹಳೆಯ ಸ್ನೇಹಿತನಂತೆ ಗಾಂಧಿಯ ಭವಿಷ್ಯವನ್ನು ಚರ್ಚಿಸಿ, "ಅಮೆರಿಕದಲ್ಲಿ ನಿಮ್ಮಂತಹವರು ವಿಮೆಮಾಡದೆ ಇರುವುದಿಲ್ಲ. ಜೀವ ಶಾಶ್ವತವಲ್ಲ" ಎಂದನು. ಗಾಂಧಿಯ ದೌರ್ಬಲ್ಯ ಯಾವುದೆಂದು ತಿಳಿದು "ವಿಮೆ ಮಾಡುವುದು ನಿಮ್ಮ ಧರ್ಮ" ಎಂದನು. ಗಾಂಧಿಗೆ ವಿಮಾ ಕಂಪೆನಿಗಿಂತ ದೇವರಲ್ಲಿ ಹೆಚ್ಚು ನಂಬಿಕೆಯಿತ್ತು. ಆದರೆ ಮಾತಿನಲ್ಲಿ ನಿಪುಣನಾದ ಆ ಅಮೆರಿಕದವನು ಗಾಂಧಿಯ ನಂಬಿಕೆಯನ್ನು ಕದಲಿಸಿ ೫೦೦೦ ಡಾಲರಿನ ವಿಮಾ ಪತ್ರ ಮಾಡಿಸಿದನು.

ಎರಡು ವರ್ಷಗಳ ನಂತರ ದಕ್ಷಿಣ ಆಫ್ರಿಕಕ್ಕೆ ಹಿಂದಿರುಗಿದಾಗ ಗಾಂಧಿಯ ಮನಸ್ಸು ಬದಲಾಯಿಸಿತು. ೩೫ ನಿಮಿಷಗಳನ್ನು ಪ್ರಾತರ್ವಿಧಿಗಳಿಗೂ, ೩೦ ನಿಮಿಷಗಳನ್ನು ಸ್ನಾನಕ್ಕೂ, ಇಂಡಿಯಾ ಪದ್ಧತಿಯಂತೆ ೧೫ ನಿಮಿಷ ಹಲ್ಲುಜ್ಜುವುದಕ್ಕೂ ಉಪಯೋಗಿಸುತ್ತಿದ್ದನು. ಈ ಸಮಯದಲ್ಲೇ ಭಗವದ್ಗೀತೆಯನ್ನು ಗಟ್ಟಿಮಾಡುತ್ತಿದ್ದನು. ಅದರ ಪ್ರಭಾವದಿಂದಲೇ ವಿಮೆಗೆ ಹಣಕಟ್ಟದೆ ಕಳೆದುಹೋಗಲು ಬಿಟ್ಟನು. ಸಂಸಾರ ನಿರ್ವಹಣೆಯ ಭಾರ ಭಗವಂತನದು. ಪರಿವರ್ತನೆ ಪ್ರಾರಂಭವಾಗಿತ್ತು.

ಈ ಸಮಯದಲ್ಲಿ ಗಾಂಧಿಗೆ, "ಟ್ರಾನ್ಸ್‌ವಾಲ್ ಕ್ರಿಟಿಕ್" ಎಂಬ ಪತ್ರಿಕೆಯ ಉಪಸಂಪಾದಕನಾದ ಹೆನ್ರಿ ಎಸ್. ಎಲ್. ಪೋಲಕನೆಂಬ ಸಸ್ಯಾಹಾರಿಯ ಪರಿಚಯವಾಯಿತು. ಒಂದು ಸಂಜೆ, ಗಾಂಧಿ ರೈಲಿನಲ್ಲಿ ಹೊರಡುತ್ತಿದ್ದಾಗ ಪೋಲಕ್ ಆತನಿಗೆ, ಇಂಗ್ಲಿಷ್ ಪ್ರಬಂಧಕಾರ ಮತ್ತು ವಿಮರ್ಶಕ ಜಾನ್ ರಸ್ಕಿನ್ನನ "Unto this last" ಎಂಬ ಪುಸ್ತಕವನ್ನು ಓದಲು ಕೊಟ್ಟನು. ಗಾಂಧಿ ರಾತ್ರಿಯೆಲ್ಲಾ ಆ ಪುಸ್ತಕವನ್ನೋದಿ ಮುಗಿಸಿದರು. ೧೯೪೬ ಅಕ್ಟೋಬರಿನಲ್ಲಿ "ಆ ಪುಸ್ತಕದಿಂದ ನನ್ನ ಜೀವನದ ಹಾದಿ ಬದಲಾಯಿಸಿತು" ಎಂದರು. ಒಂದು ಜಮೀನಿನಲ್ಲಿ ಸರಳ

ಜೀವನ ನಡೆಸಬೇಕೆಂದು ನಿಶ್ಚಯಿಸಿದನು. ಪುಸ್ತಕ ಇದಕ್ಕೆ ಯಾವ ರೀತಿಯಲ್ಲೂ ಪ್ರೇರಿಸದಿರಬಹುದು. ಗಾಂಧಿಗೆ ಪ್ರಕೃತಿ ಪ್ರೇಮ ಮೂಡಿತ್ತು ; ರಸ್ಕಿನ್ನನ ಪುಸ್ತಕದ ಒಂದು ಭಾಗ ಈ ನಿಶ್ಚಯಕ್ಕೆ ರೂಪು ಕೊಟ್ಟಿತು. ತನ್ನ ಮನಸ್ಸಿನ ಭಾವವನ್ನು ಪುಸ್ತಕಗಳಿಗೆ ಆತನು ಅನೇಕ ಸಲ ಆರೋಪಿಸುತ್ತಿದ್ದನು. ಪುಸ್ತಕ ಕರ್ತೃವಿನೊಡನೆ ತನ್ನ ವ್ಯಕ್ತಿತ್ವವನ್ನೂ ಸೇರಿಸಿ ಹೊಸ ಭಾವನೆಗಳನ್ನು ಮೂಡಿಸುತ್ತಿದ್ದನು. ತನ್ನ ಭಾವನೆಗಳನ್ನೂ ಸೇರಿಸಿ ಹೆಚ್ಚಿನ ಉಪಯೋಗ ಪಡೆಯುತ್ತಿದ್ದನು. " ಇಷ್ಟವಿಲ್ಲದುದನ್ನು ಮರೆಯುವುದೂ, ಇಷ್ಟಪಟ್ಟುದನ್ನು ಆಚರಣೆಗೆ ತರುವುದೂ ನನ್ನ ಪದ್ಧತಿಯಾಗಿತ್ತು " ಎಂದು ಬರೆದಿದ್ದಾರೆ.

ರಸ್ಕಿನ್ನನ ಪುಸ್ತಕದಲ್ಲಿ ಗಾಂಧಿಯು ಭಾವನೆಗಳನ್ನೋದಿ ಗಾಂಧಿ ನೆಟಾಲಿನಲ್ಲಿರುವ ಫೀನಿಕ್ಸ್ ಬಳಿ ನೂರು ಎಕರೆ ಜಮೀನನ್ನು ಸಾವಿರ ಪೌಂಡುಗಳಿಗೆ ಕೊಂಡುಕೊಂಡು ತಾನು ಕೆಲವು ತಿಂಗಳುಗಳ ಕೆಳಗೆ ಆರಂಭಿಸಿದ್ದ " ಇಂಡಿಯನ್ ಒಪಿನಿಯನ್ " ಎಂಬ ವಾರ ಪತ್ರಿಕೆಯ ಮುದ್ರಣಾಲಯ, ಕಾರ್ಯಾಲಯಗಳನ್ನು ಅಲ್ಲಿಗೆ ಸಾಗಿಸಿದನು. ಸ್ವಲ್ಪ ಕಾಲ ವಕೀಲಿವೃತ್ತಿ ನಡೆಸುತ್ತಿದ್ದ ಜೋಹಾನ್ಸ್‌ಬರ್ಗ್‌ನಲ್ಲೂ, ಕೆಲವು ಕಾಲ ಮುದ್ರಣಕ್ಕೆ ಸಹಾಯಮಾಡುತ್ತ ಮಾವು ಕಿತ್ತಳೆಗಿಡಗಳನ್ನು ಬೆಳೆಸುತ್ತ ಫೀನಿಕ್ಸ್ ಜಮೀನಿನಲ್ಲೂ ಸಂಸಾರದೊಡನೆ ಆತ ಕಳೆಯುತ್ತಿದ್ದರು.

ಸಂಯಮದ ವಿಚಾರವಾಗಿ ಗಾಂಧಿ ಹೆಚ್ಚುಹೆಚ್ಚಾಗಿ ಆಲೋಚಿಸತೊಡಗಿದರು. ಆಗಾಗ ತಾಯಿಯಂತೆ ಉಪವಾಸ ಮಾಡುತ್ತಿದ್ದರು ; ಮಿಕ್ಕ ದಿನಗಳಲ್ಲಿ ಸ್ವಲ್ಪವಾಗಿ ಎರಡು ಬಾರಿ ಊಟಮಾಡಿ, ಹಾಲು ಹಣ್ಣುಗಳನ್ನು ತಿನ್ನುತ್ತಿದ್ದರು. ದೇಹವನ್ನು ಪೋಷಿಸಿದರೂ ವ್ಯಾಗೀಯ ಚಿಂತನೆಗಳಿಂದ ಮನಸ್ಸನ್ನು ಮೇಲಕ್ಕೆತ್ತುವ ಆಹಾರದ ಸಂಶೋಧನೆಯನ್ನು ಪ್ರಾರಂಭಿಸಿದರು. " ನಾವು ಬದುಕಿರುವುದು ದೇಹವನ್ನು ಬೆಳೆಸಿ, ಸಂರಕ್ಷಿಸುವುದಕ್ಕಲ್ಲ ; ಬದುಕಲು ದೇಹವನ್ನು ಪೋಷಿಸಬೇಕು. ದೇಹದ ಬೇಡಿಕೆಗಳು ತೀರಿದನಂತರ ಜೀವನ ಪ್ರಾರಂಭವಾಗುತ್ತದೆ. ಆದರೆ ಎಷ್ಟು ಜನ ಸುಖಜೀವನಕ್ಕಾಸೆಪಟ್ಟು ಜೀವನವನ್ನೇ ನಾಶ ಮಾಡಿಕೊಳ್ಳುತ್ತಾರೆ ! ಆತ್ಮಕ್ಕೆ ಬೇಕಾದುದು ತಾತ್ಕಾಲಿಕ ವಾಸಸ್ಥಳ ; ಅದು ಅರಮನೆಯಾದ

ಶೇನು, ಸ್ವಚ್ಛವಾದ ಮಣ್ಣು ಗುಡಿಸಿಲಾದರೇನು ? ಮನುಷ್ಯ ದೇಹರಕ್ಷಣೆಯು ಕಡೆ ಹೆಚ್ಚು ಗಮನ ಕೊಟ್ಟರೆ ಆತ್ಮ ಸೊರಗಿ ತೃಪ್ತಿಯನ್ನು ಕಳೆದು ಕೊಳ್ಳುತ್ತದೆ."

ಪಾಶ್ಚಾತ್ಯರ ದೃಷ್ಟಿಗೆ ಸುಖವನ್ನು ತ್ಯಜಿಸುವುದು ಕ್ರೌರ್ಯವೆಂದು ತೋರುತ್ತದೆ. ಆದರೆ ಕ್ರೈಸ್ತರ ತಪಸ್ವಿಯೂ ಎಲ್ಲಾ ಮತಗಳ ತಪಸ್ವಿಗಳೂ ಸ್ವಸುಖವನ್ನು ಬಿಟ್ಟವರೆ. ಗಾಂಧಿಗೆ ದೇಹದಂಡನೆಯಲ್ಲಿ ನಂಬಿಕೆಯಿರಲಿಲ್ಲ. "ತಾಯಿ ಒದ್ದೆಯಾದ ಹಾಸಿಗೆಯಲ್ಲಿ ಮಲಗಲು ಇಚ್ಛಿಸುವುದಿಲ್ಲ. ಆದರೆ ಮಗುವಿಗಾಗಿ ಆನಂದದಿಂದ ಒಣಗಿದ ಹಾಸಿಗೆಯನ್ನು ಬಿಟ್ಟುಕೊಡುತ್ತಾಳೆ" ಎಂದು ಬರೆದಿದ್ದಾರೆ. ಗಾಂಧಿಯ ಸ್ವಾರ್ಥತ್ಯಾಗ ಪ್ರೇಮದ ನಿಃಸ್ವಾರ್ಥತೆ. ಪ್ರೇಮದ ಮೂಲಕ ಸಹಜೀವಿಗಳಲ್ಲಿ ಒಂದೊಂದು ಬಾರಿ ಐಕ್ಯತೆಯ ಅನುಭವ ಎಲ್ಲರಿಗೂ ಉಂಟಾಗುತ್ತದೆ. ತನ್ನನ್ನು ಮರೆತು ಬೇರೆಯವರ ಅನುಭವಗಳಲ್ಲಿ ಐಕ್ಯತೆ ಹೊಂದುವ ಗಳಿಗೆಗಳು ಸಂತರ ಜೀವನದಲ್ಲಿ ಹೆಚ್ಚಾಗಿರುತ್ತವೆ. ತನ್ನದು, ಪರರದು ಎಂಬ ಭೇದವನ್ನು ಸ್ವಲ್ಪವಾದರೂ ಮರೆಸಿ, ಈ ಐಕ್ಯತೆ ಆನಂದದ ಶಕ್ತಿಯನ್ನು ಕೊಡುತ್ತದೆ. ಗಾಂಧಿ ಮಹಾತ್ಮ ಹಿಂಬಾಲಕರಲ್ಲಿ ಈ ಆತ್ಮಶಕ್ತಿಯನ್ನು ತುಂಬಲು ಸಮರ್ಥನಾಗಿದ್ದನು. ಗಾಂಧಿಯ ಜೀವನದ ಯಾವ ಚಿತ್ರವನ್ನು ನೋಡಿದರೂ ಆತನಿಗೆ ಸ್ವಾರ್ಥದ ಅರಿವೇ ಇರಲಿಲ್ಲವೆಂದೂ, ಪರರಲ್ಲಿ ಐಕ್ಯನಾಗಿದ್ದನೆಂಬುದೂ, ಕಡಮೆ ರಾಜಕೀಯ ವ್ಯಕ್ತಿಗಳ ಸ್ವಾಭಿಮಾನ, ಸ್ವಪತ್ರಿಷ್ಠೆಗಳಿರಲಿಲ್ಲವೆಂಬುದೂ ತಿಳಿಯುತ್ತದೆ. ಇದೇ ಆತನ ಮಹತ್ವದ ಪ್ರಭಾವದ ಗುಟ್ಟು. ಸುತ್ತಲಿರುವವರೊಡನೆ ಸೇರಿ ಹೋಗುತ್ತಿದ್ದನು. ಆತನನ್ನು ನೋಡಿದವರೆಲ್ಲಾ ಶತ್ರು ಮಿತ್ರರೆನ್ನದೆ ಭಾವಾವೇಶಕ್ಕೊಳಗಾಗುತ್ತಿದ್ದರು. ಆತನ ಸಾಧನೆಯಲ್ಲಿ ಅನುಮಾನ ದ್ವೇಷಗಳಿದ್ದವರು ಸೋಲುತ್ತಿದ್ದರು.

ಆತನು ಮಾಡಿದ ಮೊದಲನೆಯ ಕೆಲಸ ಕಾಮಾಸಕ್ತಿಯನ್ನು ಬಿಟ್ಟುದು. ಜೂಲು ದಂಗೆಯಲ್ಲಿ ಹಳ್ಳಿಯಿಂದ ಹಳ್ಳಿಗೆ ತಿರುಗುತ್ತಾ ಆತ್ಮ ಮಥನಮಾಡಿ ಎಂದೆಂದಿಗೂ ಕಾಮಾಪೇಕ್ಷೆಯನ್ನು ಬಿಡಬೇಕೆಂದು ನಿರ್ಧರಿಸಿದನು. ಹಿಂದೆ ಎರಡು ಬಾರಿ ಇಂದ್ರಿಯ ನಿಗ್ರಹಮಾಡಲು ಪ್ರಯತ್ನಿಸಿದೆ

ನೆಂದು ಆತ ಸರಳವಾಗಿ ತಿಳಿಸುತ್ತಾರೆ. ಕಸ್ತೂರಿಬಾಯಿ ಒಪ್ಪಿದರು. ಬೇರೆ ಬೇರೆ ಹಾಸಿಗೆಗಳಲ್ಲಿ ಮಲಗುತ್ತಿದ್ದರು. ಆಯಾಸವಾಗುವವರೆಗೂ ಆತ ಮಲಗುತ್ತಿರಲಿಲ್ಲ. ಆದರೂ ಎರಡು ಬಾರಿಯೂ ಆತನು ಸೋತನು.

ಆದರೆ ಜೂಲು ಪ್ರದೇಶದಲ್ಲಿ ಕಡೆಯದಾಗಿ ಪ್ರತಿಜ್ಞೆ ಮಾಡಿದನು. ಸೈನ್ಯ ಬಿಟ್ಟಾಗ ಫೀನಿಕ್ಸ್ ಜಮೀನಿಗೆ ಹೋಗಿ ಕಸ್ತೂರಿಬಾಯಿಗೆ ತನ್ನ ನಿಶ್ಚಯವನ್ನು ತಿಳಿಸಿದನು. "ಆಕೆ ಎಂದೂ ಕೆರಳಿಸುತ್ತಿರಲಿಲ್ಲ" ಎಂದು ಬರೆದಿದ್ದಾರೆ. ಅವರವರ ವ್ಯಕ್ತಿಸಂಬಂಧವನ್ನು ಆತನೇ ನಿಶ್ಚಯಿಸಿದನು.

೧೯೦೬ರಿಂದ ತನ್ನ ಮೂವತ್ತೇಳನೆಯ ವರ್ಷದಿಂದ ೧೯೪೮ರಲ್ಲಿ ಸಾಯುವವರೆಗೂ ಗಾಂಧಿ ಸನ್ಯಾಸಿ ಜೀವನವನ್ನು ನಡೆಸಿದರು.

ಗಾಂಧಿಯ ಉದ್ದೇಶಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಆತನಿಗೇ ಎಷ್ಟೋ ಬಾರಿ ಅರ್ಥವಾಗುತ್ತಿರಲಿಲ್ಲ. ತನ್ನ ಸನ್ಯಾಸ "ಸಮಾಜಿಕ ಕರ್ತವ್ಯದ" ಕೂಗಿಗೆ ಉತ್ತರವೆಂದು ಆತನು ನಂಬಿದನು. ಆತನೇ "ಮಕ್ಕಳಾಗಬಾರದೆಂಬುದೇ ನನ್ನ ಮುಖ್ಯೋದ್ದೇಶ" ಎಂದನು. ಆದರೆ ಮಕ್ಕಳೇಕಾಗಬಾರದು. ಫೀನಿಕ್ಸ್ ಫಾರಮ್ಮಿಗೆ ಮಕ್ಕಳನ್ನೂ ದೊಡ್ಡವರನ್ನೂ ಕರೆಸಿ ಸಹ ಜೀವನವನ್ನಾರಂಭಿಸಿದ್ದನು. ತನ್ನ ಮಕ್ಕಳೂ ಏಕಿರಕೂಡದು?

ಗಾಂಧಿಗೆ ಇಂದ್ರಿಯನಿಗ್ರಹದ ವಿಚಾರದಲ್ಲಿ ಒಂದು ವಿಧವಾದ ಅಪರಾಧಿಯ ಭಾವನೆಯೂ ಇತ್ತು. ತಂದೆಯು ಕಾಲನ್ನೊತ್ತುತ್ತಿದ್ದಾಗ ಕಾಮಾವೇಶವುಂಟಾಗಿ ಕಸ್ತೂರಿಬಾಯಿಯ ಬಳಿಗೆ ಹೋಗಿದ್ದನು. ಕೆಲವು ನಿಮಿಷಗಳಲ್ಲಿ ಆಳು ಬಂದು ಬಾಗಿಲು ತಟ್ಟಿದನು. ಕೊಠಡಿಗೆ ಹೋಗುವ ವೇಳೆಗೆ ತಂದೆ ಸತ್ತು ಹೋಗಿದ್ದನು. ನಲವತ್ತು ವರ್ಷಗಳಾದ ಮೇಲೆ ಗಾಂಧಿ "ಕಾಮಪರವಶನಾಗದಿದ್ದರೆ ತಂದೆಯ ಕಡೆಗಾಲದಲ್ಲಿ ನಾನು ದೂರವಿರುತ್ತಿರಲಿಲ್ಲ. ತಂದೆಯ ಸಾವಿನ ಸಮಯದಲ್ಲಿ ನನ್ನ ಆ ಕಾಮಾವೇಶದ ಅಪಮಾನವನ್ನು ನಾನೆಂದಿಗೂ ಅಳಿಸಲು, ಮರೆಯಲು ಸಾಧ್ಯವಿಲ್ಲ." ಎಂದು ಆಲೋಚಿಸಿದನು. ಇದರ ಪ್ರಭಾವ ಆತನ ಮೇಲಾಗಿದ್ದಿರಬೇಕು. ಲಂಡನ್ನಿನಲ್ಲಿ ತಾನಿದ್ದ ಮೂವತ್ತುಮೂರು ತಿಂಗಳನ್ನು "ಕಸ್ತೂರಿಬಾಯಿಯಿಂದ ದೂರವಾಗಿ ಕಳೆದ ಆರೋಗ್ಯದ ಕಾಲ," ಎಂದಿದ್ದಾರೆ. ದಕ್ಷಿಣ ಆಫ್ರಿಕಾಕ್ಕೆ ಮೊದಲು ಹೋದಾಗ ಆಕೆಯನ್ನು ಸಮಾಧಾನಪಡಿಸಲು, "ವರ್ಷದೊಳಗೆ

ಪುನಃ ಸೇರುತ್ತೇವೆ" ಎಂದರು. ಅಲ್ಲಿ ಮೂರು ವರ್ಷಗಳಿದ್ದರು.

ಹಿಂದೂ ಜೀವನದಲ್ಲಿ ಬ್ರಹ್ಮಚರ್ಯಕ್ಕೆ ಮುಖ್ಯಸ್ಥಾನವಿದೆ. ಸಂಸಾರಿಯಾಗಿ ಜಾತಿ ದೇಶಗಳ ಋಣ ತೀರಿಸಿದ ಮೇಲೆ ತನ್ನ ಐವತ್ತನೆಯ ವರ್ಷದಲ್ಲಿ ಹಿಂದು ಸನ್ಯಾಸಿಯಾಗಬಹುದು. ಆದರೆ ಗಾಂಧಿಯ ಹಾಗೆ ಚಿಕ್ಕ ವಯಸ್ಸಿನಲ್ಲಿ ಸನ್ಯಾಸಿಯಾಗುವುದು ಅಪರೂಪ. ನಾಲ್ಕು ಜನ ಗಂಡು ಮಕ್ಕಳು ಸಾಕೆನ್ನಿಸಿರಬಹುದು. ತಂದೆಯ ಸಾವಿನ ವೇಳೆಯಲ್ಲಿ ಪಾಪ ಮಾಡಿದುದರಿಂದ ತಂದೆಯಾಗುವುದೇ ಪಾಪವೆನ್ನಿಸಿರಬಹುದು. ಕಸ್ತೂರಿಬಾಯಿಯ ದೇಹಸ್ಥಿತಿಯ ವಿಚಾರವಾಗಿಯೂ ಆತಂಕವಿದ್ದಿರಬಹುದು. ಆಕೆ ರಕ್ತಸಾಲದೆ ಒಂದು ಬಾರಿ ರಕ್ತಸ್ರಾವದಿಂದ ಸಾವಿನ ಸಮೀಪದಲ್ಲಿದ್ದಳು. ಶಸ್ತ್ರ ಚಿಕಿತ್ಸೆಯಿಂದ ಗುಣವಾದರೂ ತೀರ ವಾಸಿಯಾಗಲಿಲ್ಲ. ಆಕೆಯ ದೇಹಸ್ಥಿತಿಯಿದ್ದುದರಲ್ಲಿ ಗಾಂಧಿಗಿದ್ದುದು ಎರಡೇದಾರಿ. ಪರಸ್ತ್ರೀಗಮನ, ಇಲ್ಲವೆ ಆತ್ಮ ಸಂಯಮನ.

ಉದ್ದೇಶವನ್ನೂ ಫಲಿತಾಂಶವನ್ನೂ ಸೇರಿಸಿದನು. ಫಲಿತಾಂಶ ಆತ್ಮ ಸಂಬಂಧವಾದುದಾಯಿತು. ೧೯೨೪ ರಲ್ಲಿ "ಸರಿಯಾಗಿ ಅರ್ಥಮಾಡಿಕೊಳ್ಳುವುದಾದರೆ ಬ್ರಹ್ಮಚರ್ಯವೆಂದರೆ ಬ್ರಹ್ಮಾನ್ವೇಷಣೆ. ಸರ್ವಕಾಲದಲ್ಲೂ ಎಲ್ಲಾ ಕಡೆಯಲ್ಲೂ ಕಾಯಾ, ವಾಚಾ, ಮನಸಾ ಸರ್ವೇಂದ್ರಿಯ ನಿಗ್ರಹವಿರಬೇಕು." ಕಾಮನಿಗ್ರಹವನ್ನೊಳಗೊಂಡಿದ್ದರೂ ಅದನ್ನು ಮೀರಿದುದು ಆಹಾರದಲ್ಲಿ ಭಾವನೆಗಳಲ್ಲಿ ಮಾತಿನಲ್ಲಿ, ಬಿಗಿಯಿರಬೇಕು. ದ್ವೇಷ, ಅಸತ್ಯ, ಕೋಪಗಳಿರಕೂಡದು. ಸಮತಾಭಾವವನ್ನು ಸೃಷ್ಟಿಸುತ್ತದೆ. ಅದೇ ಆಸೆಯನ್ನು ಬಿಟ್ಟಿರುವುದು. ಶುದ್ಧ ಬ್ರಹ್ಮಚಾರಿಗಳು ಪಾಪವಿಹೀನರು. ಅದರಿಂದ ದೇವರ ಸಾಮೀಪ್ಯ ಪಡೆದವರು. ಅವರು ದೇವರ ರೂಪಿಗಳು" ಎಂದು ಬರೆದಿದ್ದಾರೆ. ಹಾಗಾಗಲು ಗಾಂಧಿಗೆ ಅಭಿಲಾಷೆಯಿತ್ತು. ಪರಿವರ್ತನೆಯ ಅಂತಿಮ ಗುರಿ ಅದೇ.

ಸುಖಸಂಪತ್ತುಗಳನ್ನು ಬಿಡುವುದು ಕಷ್ಟವಲ್ಲ. ಭಾರಿ ಊಟ, ಸೊಗಸಾದ ಬಟ್ಟೆಗಳು, ಮನೆಗಳನ್ನು ಅನೇಕರು ಬಿಡಬಲ್ಲರು. ಅಹಂಭಾವವನ್ನು ಬಿಡಲಾರರು. ಪ್ರಾಪಂಚಿಕ ವಿಚಾರಗಳಲ್ಲಿ ಸಮಾಜಸ್ಥಾನ ಜನಾದರಣೆ ಅಧಿಕಾರಗಳಲ್ಲಡಗಿರುವ ತನ್ನ ತನದ ಪರಿಚಯವೊಂದನ್ನೇ ಹೊಂದಿರುವವರು

ಅದನ್ನು ಯಾವುದೋ ಕಲ್ಪನೆಯ ಹೊಸ, ಪ್ರಾಪಂಚಿಕ ಸಂಪರ್ಕವಿಲ್ಲದ ತನ್ನ ತನಕ್ಕಾಗಿ ಬದಲಾಯಿಸಿಕೊಳ್ಳಲು ಇಚ್ಛಿಸುವುದಿಲ್ಲ; ಅದು ಎಂದಿಗೂ ಸಿಕ್ಕದಿರಬಹುದು; ಅದರ ಇರವೇ ಸುಳ್ಳಾಗಿರಬಹುದು. ಆದರೆ ಗಾಂಧಿ ಮಾತ್ರ ಮೊದಲ ಜೀವನದ ಭದ್ರವಾದ ನೆಲದಿಂದ, ಅರಿಯದ ಲೋಕಕ್ಕೆ ಹಾರಿದನು. ಅಲ್ಲಿಗೆ ತನ್ನಲೋಕವನ್ನು ಸರಿಸಲು ಆಧಾರ ಸಿಕ್ಕುವುದೆಂದು ಆತ ನಂಬಿದನು. ಅದು ಸುಲಭವಾದ ಕೆಲಸವಾಗಿರಲಿಲ್ಲ. ದೇಹಕ್ಕೆ ತುಂಬಾ ನೋವಾಗಿದ್ದಿರಬೇಕು. ಆತನಿಗೆ ಇಂದ್ರಿಯ ಚಾಪಲ್ಯ ಹೆಚ್ಚಾಗಿತ್ತು. ಪ್ರತಿಜ್ಞೆಮಾಡಿದ ಮೇಲೆ ಹೆಂಗಸರಲ್ಲಿ ಆಸಕ್ತಿಯಿತ್ತು. ಊಟದ ಚಪಲ ತನ್ನ "ದೊಡ್ಡ ಹೊಟ್ಟೆ"ಗೆ ತುಂಬಾ ಇತ್ತೆಂದು ಹೇಳಿದ್ದಾರೆ. ಸಂಪಾದನೆ ಚೆನ್ನಾಗಿತ್ತು. ಧನಿಕನಾದ ಲಾಯರಾಗಬಹುದಾಗಿತ್ತು. ಸ್ವಂತ ಇಚ್ಛೆಯಿಂದ ಸನ್ಯಾಸಿಯಾಗುವುದೂ, ಬಡತನವನ್ನಪ್ಪುವುದೂ ಕಷ್ಟವಾಗಿ ತೋರಿದ್ದಿರಬೇಕು. ಯಾವುದೋ ಧ್ಯೇಯದಲ್ಲಿ ಅತಿಶಯವಾದ ನಂಬಿಕೆಯಿದ್ದುದರಿಂದ ಮಾತ್ರ ಅವುಗಳನ್ನು ಆಹ್ವಾನಿಸಿ ಸಹಿಸಲು ಶಕ್ತನಾದನು. ನಂಬಿಕೆಯಿದ್ದರೆ ಸ್ವಾರ್ಥತ್ಯಾಗ ಕಷ್ಟವಾಗುವುದಿಲ್ಲ; ಒಂದು ಆನಂದಕ್ಕೆ ಪ್ರತಿಯಾಗಿ ಮತ್ತೊಂದು ಸಿಕ್ಕುತ್ತದೆ. ಕೆಲವರು ಹಣ ಕೊಡುತ್ತಾರೆ. ಗಾಂಧಿ ತನ್ನನ್ನೇ ಕೊಟ್ಟು ತನ್ನ ಶಕ್ತಿಯನ್ನರಿತನು. ದಾನ ನಂಬಿಕೆಯ ತೀಕ್ಷ್ಣತೆಯನ್ನವಲಂಬಿಸುತ್ತದೆ. "ಬೇರೆ ಯಾವುದಕ್ಕೋಸ್ಕರವಾಗಿಯಾದರೂ ಬಲಿದಾನ ಮಾಡು. ಅದನ್ನು ನೀನು ಪ್ರಬಲವಾಗಿ ಅಪೇಕ್ಷಿಸಿದರೆ ನೀನು ದಾನಮಾಡಿದ ವಸ್ತುವಿನ ಮೇಲೆ ನಿನಗೆ ಆಸೆಯೇ ಇರುವುದಿಲ್ಲ" ಎಂದು ಗಾಂಧಿ ಬರೆದರು.

ಈ ತಪಸ್ಸು ಗಾಂಧಿಯ ಸಾಮಾಜಿಕ ಅಭಿಲಾಷೆಗಳನ್ನು ಹೆಚ್ಚಿಸುವ ಉದಾತ್ತ ಶಕ್ತಿಯಾಯಿತು. ಈ ವೈರಾಗ್ಯ ಜನರ ಹಿತಕ್ಕಾಗಿ ದುಡಿಯುವ ಆಸೆಯನ್ನು ಇಮ್ಮಡಿಗೊಳಿಸಿತು. ಇಂದ್ರಿಯ ನಿಗ್ರಹದಿಂದ ಆತ್ಮ ಪ್ರತಿಷ್ಠೆ ಮಾಯವಾಯಿತು. ಪ್ರಾಪಂಚಿಕ ಚಿಂತೆಗಳಿಂದ ಮೇಲೆದ್ದು ಧ್ಯೇಯಕ್ಕಾಗಿ ದುಡಿಯಲು ಶಕ್ತಿ ಪಡೆದನು. ಮನಸ್ಸಿನಲ್ಲಿ ಬಿರುಗಾಳಿಗಳಿದ್ದರೂ ಅವುಗಳನ್ನು ತಡೆಹಿಡಿದು ಜನರಲ್ಲಿ ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳಲು ಸಮರ್ಥನಾದನು.

ವೈರಾಗ್ಯದಿಂದ ಮತ್ತೊಂದು ಪ್ರಯೋಜನವುಂಟಾಯಿತು. ಜನರಿಗೆ ಆತನಲ್ಲಿ ನಂಬಿಕೆ ಹೆಚ್ಚಿತು. ಅನೇಕ ಶತಮಾನಗಳಿಂದ ಯಾರ ಸಹಾಯವೂ ಇಲ್ಲದೆ ಬಾಳಿದ ಇಂಡಿಯನ್ನರಿಗೆ ದಾನಕೊಡುವವರಲ್ಲಿ ನಂಬಿಕೆಯಿಲ್ಲ. ಅದರಲ್ಲಿ ಸ್ವಾರ್ಥವಿದೆಯೆಂದು ಅನುಮಾನಿಸುವರು. ಯಾರೂ ಸ್ವಾರ್ಥವಿಲ್ಲದೆ ಏನನ್ನೂ ಕೊಡುವುದಿಲ್ಲವೆಂದು ತಿಳಿದಿದ್ದಾರೆ. ಧನಿಕರೂ ಬಲವಂತರೂ ತೆಗೆದುಕೊಳ್ಳುವುದೇ ಅವರ ಅನುಭವ. ಆದುದರಿಂದ ಒಬ್ಬ ಮನುಷ್ಯನಲ್ಲಿ ಸ್ವಲ್ಪವೂ ಸ್ವಾರ್ಥವಿಲ್ಲವೆಂಬ ನಂಬಿಕೆಯುಂಟಾದರೆ ಅವನಿಗೆ ವಿಪರೀತ ಭಕ್ತಿ, ಗೌರವಗಳನ್ನು ತೋರಿಸುತ್ತಾರೆ. ಅದೇ ಗಾಂಧಿಯ ಸಂಭಾವನೆಯಾಯಿತು.

ತನ್ನಲ್ಲೂ ಹಿಂಬಾಲಕರಲ್ಲೂ ಹೆಚ್ಚು ಶಕ್ತಿಯನ್ನು ಕಂಡುಕೊಂಡು ಹೊಸ ಗಾಂಧಿ ದಕ್ಷಿಣ ಆಫ್ರಿಕದ ಸರ್ಕಾರವನ್ನೆದುರಿಸಿದನು. ಎಂಟು ವರ್ಷ ಕಾಲ ಅದರೊಡನೆ ಹೋರಾಡಿ ಕಡೆಯಲ್ಲಿ ಜಯವನ್ನು ಗಳಿಸಿದನು.

## ೮. ಆತ್ಮಶಕ್ತಿ

ದಕ್ಷಿಣ ಆಫ್ರಿಕಾದಲ್ಲಿ ಗಾಂಧಿ ಹೀಗೆಂದರೆಂದು ಹೆನ್ರಿಪೋಲಕ್ ಹೇಳುತ್ತಾರೆ "ನಾನು ರಾಜಕೀಯದಲ್ಲಿ ಸೇರಿಹೋಗುತ್ತಿರುವ ಸಂತನೆಂದು ಜನರೆನ್ನುತ್ತಾರೆ. ಆದರೆ ನಿಜವಾಗಿ ನಾನು ಸಂತನಾಗಲು ಪ್ರಯತ್ನಿಸುತ್ತಿರುವ ರಾಜಕೀಯ ವ್ಯಕ್ತಿ." ವಾಸ್ತವವಾಗಿ ಗಾಂಧಿಯ ರಾಜಕೀಯಕ್ಕೂ ಧರ್ಮಕ್ಕೂ ವ್ಯತ್ಯಾಸವಿಲ್ಲ. "ನನ್ನ ದೇಶಭಕ್ತಿ ನನ್ನ ಧರ್ಮದ ಸೇವಕ" ಎಂದನು. ರಾಜಕೀಯದಲ್ಲಿ ನೈತಿಕ ಕಟ್ಟುಗಳನ್ನು ಆತನು ಬಿಟ್ಟುಕೊಡುತ್ತಿರಲಿಲ್ಲ. ಸಂತನಾಗಿ, ಗುಹೆಯಲ್ಲಾಗಲಿ, ಆಶ್ರಮದಲ್ಲಾಗಲಿ ಇರಬೇಕೆಂದುಕೊಳ್ಳದೆ ನ್ಯಾಯಕ್ಕಾಗಿ, ಹಕ್ಕುಗಳಿಗಾಗಿ ಹೊಡೆದಾಡುವ ಜನರ ಸಮೂಹದಲ್ಲಿ ಸೇರಿದನು. ಗಾಂಧಿಯ ಧರ್ಮವೇ ಆತನನ್ನು ರಾಜಕೀಯಕ್ಕೆ ತಿರುಗಿಸಿತು; ಆತನ ರಾಜಕೀಯ ಧರ್ಮದ ಮೇಲೆ ನಿಂತಿತ್ತು.

ಸಂತನಾದ ರಾಜಕಾರಣಿ ಅಥವಾ ರಾಜಕಾರಣಿಯಾದ ಸಂತ, ಸ್ವಾರ್ಥತ್ಯಾಗದಿಂದ ಗಳಿಸಿದ ಶಕ್ತಿಯಿದ್ದರೂ ಆತ ದಕ್ಷಿಣ ಆಫ್ರಿಕದಲ್ಲಿ ಇಂಡಿಯಾದಲ್ಲಿ ಮಾಡಿದ ಕೆಲಸವನ್ನು ತನ್ನದೇ ಆದ ಒಂದು ಆಯುಧವಿಲ್ಲದಿದ್ದರೆ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಅದು ಹಿಂದೆಂದೂ ಉಪ

ಯೋಗಿಸಲ್ಪಟ್ಟಿರಲಿಲ್ಲ. ಇದುವರೆಗೂ ಅನುಕರಿಸಲ್ಪಡಲಿಲ್ಲ. ಅದಕ್ಕೆ "ಸತ್ಯಾಗ್ರಹ" ವೆಂಬ ಹೆಸರನ್ನೂ ಆತನೇ ಸೃಷ್ಟಿಸಬೇಕಾಯಿತು. ಸತ್ಯ ವೆಂದರೆ ನಿಜ, ಪ್ರೇಮಕ್ಕೆ ಮತ್ತೊಂದು ಹೆಸರು, ಆತ್ಮದ ಗುಣವಿಶೇಷ; ಆಗ್ರಹವೆಂದರೆ ಸ್ಥೈರ್ಯ, ಶಕ್ತಿ. "ಸತ್ಯಾಗ್ರಹ" ವೆಂದರೆ ಆತ್ಮಶಕ್ತಿ.

ಗಾಂಧಿ ಬೇರೊಬ್ಬರಿಗೆ ನೋವನ್ನುಂಟುಮಾಡದೆ ತಾನೇ ನೊಂದು ನಿಜವನ್ನು ಸಮರ್ಥಿಸುವುದೇ ಸತ್ಯಾಗ್ರಹ" ಎಂದರು. ತಾಳ್ಮೆಯಿಂದ ಸಹಾನುಭೂತಿಯಿಂದ ಎದುರಾಳಿ ತಪ್ಪನ್ನು ತಿದ್ದಿಕೊಳ್ಳುವಂತೆ ಮಾಡ ಬೇಕು. ತಿದ್ದಬೇಕು, ನಾಶಮಾಡಕೂಡದು. ಎದುರಾಳಿಗಳು ಪರಸ್ಪರ ವಿಶ್ವಾಸದ ಪ್ರಭಾವ ಬೀರಿ ಕಡೆಗೆ ಸಮಾಧಾನ ಪಡೆಯಬೇಕು. ಹಿಂಸೆ, ಅಪಮಾನ, ಉದ್ರೇಕ ಪೂರಿತವಾದ ಪ್ರಚಾರಗಳು ಈ ಗುರಿಗೆ ಅಡ್ಡಿಯ ನ್ನುಂಟುಮಾಡುತ್ತವೆ.

ದಕ್ಷಿಣ ಆಫ್ರಿಕದ ಬಿಳಿಯ ಜನರನ್ನಾಗಲಿ, ಇಂಡಿಯಾದ ಬ್ರಿಟಿಷ ರನ್ನಾಗಲಿ, ಅವಮಾನ ಪಡಿಸಲಾಗಲಿ ಸೋಲಿಸಲಾಗಲಿ ಗಾಂಧಿ ಪ್ರಯತ್ನಿ ಸಲಿಲ್ಲ. ಅವರ ಮನಸ್ಸನ್ನು ಪರಿವರ್ತಿಸಬೇಕೆಂದು ಅಭಿಲಾಷೆಪಟ್ಟನು. ಕ್ರಿಸ್ತ ಬೆಟ್ಟದ ಮೇಲೆ ಮಾಡಿದ ಉಪದೇಶದಂತೆ ತಾನು ಜೀವನ ನಡೆಸಿದರೆ ಜನರಲ್ ಜಾನ್ ಕ್ರಿಶ್ಚಿಯನ್ ಸ್ಮಟ್ಸ್‌ಗೆ, ತಾನೂ ಕ್ರೈಸ್ತನೆಂಬ ನೆನಪುಂ ಟಾಗಬಹುದೆಂದುಕೊಂಡನು. ಎಲ್ಲರನ್ನೂ ಕುರುಡರನ್ನಾಗಿ, ರೋಷದಿಂದ ಕುರುಡರನ್ನಾಗಿ ಮಾಡುವ ಕಣ್ಣಿಗೆ ಕಣ್ಣು. ಎಂಬ ತತ್ವದ ವಿರುದ್ಧ ನೀತಿಯೇ ಸತ್ಯಾಗ್ರಹ. ಪಾಪಕರ್ಮಿಗೆ ಪಾಪದಲ್ಲಿ ಬೇಸರ ಬರುವವರೆಗೆ ಕೆಡಕಿಗೆ ಪ್ರತಿಯಾಗಿ ಒಳ್ಳಿತನ್ನುಂಟುಮಾಡುತ್ತದೆ. ದಕ್ಷಿಣ ಆಫ್ರಿಕದಲ್ಲಿ, ಕೆಲವು ವೇಳೆ ಇಂಡಿಯಾದಲ್ಲಿ ಗಾಂಧಿ ಸಾಧಾರಣ ಮಾನವರು ಬಹಳ ಕಿರುಕುಳದ ಸಂದರ್ಭಗಳಲ್ಲೂ ಉದಾರರಾಗಿರಬಲ್ಲರೆಂಬುದನ್ನು ತೋರಿಸಿದನು.

೧೯೦೬ ರ ಆಗಸ್ಟ್ ೨೨ ರ ಟ್ರಾನ್ಸ್‌ವಾಲ್ ಗೌರ್ನಮೆಂಟ್ ಗೆಜೆಟ್ ನಲ್ಲಿ ಇಂಡಿಯಾ ಹೆಂಗಸರು, ಗಂಡಸರು ಎಂಟು ವರ್ಷಕ್ಕೆ ಮೇಲ್ಪಟ್ಟ ಮಕ್ಕಳು, ದಂಡ, ಸೆರೆಮನೆ, ಗಡೀಪಾರುಗಳನ್ನು ತಪ್ಪಿಸಿಕೊಳ್ಳಬೇಕಾದರೆ ಸರ್ಕಾರಕ್ಕೆ ಹೆಸರನ್ನೂ, ಹೆಬ್ಬೆಟ್ಟಿನ ಗುರುತನ್ನೂ ಒಪ್ಪಿಸಬೇಕೆಂಬ ಕಾನೂ ನನ್ನು ಪ್ರಕಟಿಸಿದಾಗ ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹದ ಮೊದಲ ಪರೀಕ್ಷೆ

ನಡೆಯಿತು. ಆ ಅಧಿಕಾರ ಪತ್ರವಿಲ್ಲದ ಇಂಡಿಯನ್ನರಿಗೂ ಅದೇ ಶಿಕ್ಷೆಯಾಗುತ್ತಿತ್ತು.

೧೯೦೬ರ ಸೆಪ್ಟೆಂಬರ್ ೧೧ರಲ್ಲಿ ಗಾಂಧಿ ಜೋಹಾನ್ಸ್ ಬರ್ಗಿನ ಇಂಪೀರಿಯಲ್ ಥಿಯೇಟರ್ ಬಳಿ ಒಂದು ಸಾರ್ವಜನಿಕ ಸಭೆಯನ್ನುದ್ದೇಶಿಸಿ, "ಈ ಕಾನೂನು ಇಂಡಿಯನ್ನರಿಗೆ ವಿರುದ್ಧವಾಗಿರುವುದರಿಂದ ಅದು ಇಂಡಿಯನ್ನರನ್ನೂ, ಇಂಡಿಯಾವನ್ನೂ ಅವಮಾನಪಡಿಸಿದಂತೆ" ಎಂದು ಹೇಳಿದರು. "ಸರ್ಕಾರ ಸಭ್ಯತೆಯ ಅರಿವನ್ನೇ ಕಳೆದುಕೊಂಡಿದೆ-" ಅಲ್ಲಿ ಸೇರಿದ್ದ ಮೂರುಸಾವಿರ ಜನರೂ ಆ ಕಾನೂನಿಗೆ ತಲೆಬಾಗಕೂಡದೆಂದೂ, ಅವಶ್ಯ ಬಿದ್ದರೆ ಸೆರೆಮನೆಗೆ ಹೋಗಬೇಕೆಂದೂ ಸಾವಿಗೂ ಹಿಂಜರಿಯಕೂಡದೆಂದೂ ಹೇಳಿದರು. ಹೋರಾಟ ಬಹಳ ದಿನಗಳು ಹಿಡಿಯಬಹುದು. "ಆದರೆ ಎಂದಿನವರೆಗೆ ಪ್ರತಿಜ್ಞೆಯನ್ನುಳಿಸಿಕೊಳ್ಳುವ ನಾಲ್ಕಾರು ಜನರಾದರೂ ಇರುವರೋ, ಅದುವರೆಗೆ ಈ ಹೋರಾಟಕ್ಕೆ ವಿಜಯ ಸಿದ್ಧವೆಂದು ನಾನು ಧೈರ್ಯವಾಗಿ ಹೇಳಬಲ್ಲೆ." ಇದೇ ಸತ್ಯಾಗ್ರಹದ ತಳಹದಿ, ಆತ್ಮಶಕ್ತಿ ಜಯ ಸಂಖ್ಯೆಯನ್ನವಲಂಬಿಸಿಲ್ಲ. ಸ್ಥೈರ್ಯವನ್ನವಲಂಬಿಸಿದೆ.

೧೯೦೭ ರ ಜುಲೈ ೩೧ ರಲ್ಲಿ ಈ ಏಷ್ಯನರ ರಿಜಿಸ್ಟ್ರೇಷನ್ ಕಾನೂನು ಜಾರಿಗೆ ಬಂತು. ಗಾಂಧಿ, "ಡೊಂಕುರಾಜ್ಯ ನೀತಿ ಕೂಡ, ನಮ್ಮಲ್ಲಿ ಆತ್ಮವಿಶ್ವಾಸವಿದ್ದರೆ ನೇರವಾಗಿ ಪರಿಣಮಿಸುತ್ತದೆ," ಎಂದು ಹೇಳಿ ತನ್ನ ಹೆಸರನ್ನು ದಾಖಲೆ ಮಾಡಲು ನಿರಾಕರಿಸಿದನು. ಎರಡು ತಿಂಗಳ ಕಾರಾಗೃಹವಾಸ ವಿಧಿಸಲ್ಪಟ್ಟಿತು. ಸ್ವಲ್ಪ ದಿನದಲ್ಲಿ ಜನರಲ್ ಸ್ಮಟ್ಸನ ರಾಯಭಾರಿ ಸೆರೆಮನೆಗೆ ಬಂದು—ಇಂಡಿಯನ್ನರೇ ಸ್ವಯಂ ಪ್ರೇರಣೆಯಿಂದ ಹೆಸರುಗಳನ್ನು ದಾಖಲೆಮಾಡಿಸಿದರೆ ಕಾನೂನನ್ನು ರದ್ದುಪಡಿಸಲಾಗುವುದೆಂದು ಹೇಳಿದನು. ಸೆರೆಯಾಳಿನ ವಸ್ತ್ರಗಳಲ್ಲೇ ಗಾಂಧಿ ಸ್ಮಟ್ಸ್‌ನ ಕಛೇರಿಗೆ ಹೋಗಿ ಚರ್ಚಿಸಿ ಈ ಸೂಚನೆಗೆ ಒಪ್ಪಿಕೊಂಡನು. ಆತನನ್ನೂ ಇತರ ಇಂಡಿಯನರನ್ನೂ ಬಿಡುಗಡೆ ಮಾಡಿದರು.

ಜೋಹಾನ್ಸ್ ಬರ್ಗಿಗೆ ಹಿಂದಿರುಗಿದಾಗ, ಇಂಡಿಯನ್ನರು ಹೆಸರು ದಾಖಲೆಮಾಡಿಸುವ ಮೊದಲೇ ಕಾನೂನನ್ನು ರದ್ದುಪಡಿಸಬೇಕೆಂದು ಗಾಂಧಿಯೊಡನೆ ವಾದಿಸಿದರು. "ಸ್ಮಟ್ಸ್ ಮಾತಿಗೆ ತಪ್ಪಿದರೆ ಏನು ಮಾಡ

ವುದು ?" ಎಂದು ಕೇಳಿದರು.

"ಸತ್ಯಾಗ್ರಹಿ ಹೆದರುವುದಿಲ್ಲ. ಎದುರಾಳಿಯನ್ನು ನಂಬಲು ಹಿಂಜರಿಯುವುದಿಲ್ಲ. ಇಪ್ಪತ್ತು ಸಲ ಎದುರಾಳಿ ಮೋಸಮಾಡಿದರೂ, ಸತ್ಯಾಗ್ರಹಿ ಇಪ್ಪತ್ತೊಂದನೆಯ ಬಾರಿ ಅವನನ್ನು ನಂಬಲು ಸಿದ್ಧವಾಗಿರುತ್ತಾನೆ, ಮಾನವ ಸ್ವಭಾವದಲ್ಲಿ ನಂಬಿಕೆಯೇ ಸತ್ಯಾಗ್ರಹದ ಸಿದ್ಧಾಂತ" ಎಂದು ಉತ್ತರ ಕೊಟ್ಟನು. ಸ್ವಂತ ಇಚ್ಛೆಯಿಂದ ಹೆಸರು ದಾಖಲೆ ಮಾಡಿಸಿ ಸಮಾಧಾನ ಮಾಡಿಕೊಳ್ಳಲು ತನ್ನ ಒಪ್ಪಿಗೆ ಸೂಚಿಸಿದನು. ಬಲವಂತಕ್ಕೆ ತಲೆಬಾಗಿದರೆ ವ್ಯಕ್ತಿಯ ಗೌರವ, ನಿಲುವು ಕಡಮೆಯಾಗುತ್ತವೆ. ಆದರೆ ಸರ್ಕಾರದ ತೊಂದರೆಗಳನ್ನೂ ಗಮನಿಸಬೇಕು. ಅದು ವರ್ಣ ಭಾವನೆಯಿಂದ ತುಂಬಿದ ಬಿಳಿಯರ ಬಲವಂತಕ್ಕಾಗಿ ಹಾಗೆ ಮಾಡುತ್ತಿದ್ದುದು. ಹೆಸರು ದಾಖಲೆ ಮಾಡಿಸುವುದು, ಇಂಡಿಯನ್ನರು ಟ್ರಾನ್ಸ್‌ವಾಲಿನೊಳಕ್ಕೆ ಅಪ್ಪಣೆಯಿಲ್ಲದೆ ಪ್ರವೇಶಿಸದಂತೆ. ತಮಗೆ ಹಾಗೆ, "ಕಳ್ಳತನದಿಂದಾಗಲಿ, ಮೋಸದಿಂದಾಗಲಿ," ಹೊಸಬರನ್ನು ಸಂಸ್ಥಾನದೊಳಕ್ಕೆ ಕರೆತರುವ ಅಭಿಪ್ರಾಯವಿರದಿದ್ದುದರಿಂದ ಹೆಸರು ದಾಖಲೆಮಾಡಿಸಿದರೆ ತೊಂದರೆಯೇನು ? ಸಹಕಾರವನ್ನು ಉದಾರವಾಗಿ ನೀಡಿದರೆ ಗೌರವ ಹೆಚ್ಚುತ್ತದೆ. ಹೀಗೆ ಬಲವಂತವಾಗಿ ಹೆಸರು ದಾಖಲೆಮಾಡಿಸುವ ಕಾನೂನನ್ನು ಹಿಂತೆಗೆದುಕೊಂಡುದು ಪರಿಸ್ಥಿತಿಯನ್ನು ಬದಲಾಯಿಸಿತು.

ಈ ಮಾತುಕತೆಗಳು ನಡೆದ ಸಭೆಯಲ್ಲಿ ವಾಯುವ್ಯ ಇಂಡಿಯದ ಒಬ್ಬ ಪಠಾನನು ಎದ್ದು "ನಾವು ಹೆಬ್ಬೆರಳನ್ನೊತ್ತುವುದಿಲ್ಲ. ಬೇರೆಯವರನ್ನು ಒತ್ತಲು ಬಿಡುವುದಿಲ್ಲ. ದಾಖಲೆ ಮಾಡಿಸಿಕೊಳ್ಳಲುಹೋದ ಮೊದಲಿಗನನ್ನು ಕೊಲ್ಲುವೆನೆಂದು ಅಲ್ಲಾಮೇಲೆ ಆಣೆಯಿಟ್ಟು ಹೇಳುತ್ತೇನೆ" ಎಂದು ಅರಚಿದನು.

ಗಾಂಧಿ ತಾನೇ ಮೊದಲು ದಾಖಲೆಮಾಡಿಸುವುದಾಗಿ ಹೇಳಿದನು. "ಸಾವೇ ಜೀವನದ ಕೊನೆ. ಖಾಯಿಲೆ ಮುಂತಾದುವುಗಳಿಂದ ಸಾಯದೆ ಸಹೋದರನ ಕೈಯಿಂದ ಸಾವು ನನಗೆ ದುಃಖ ಕೊಡಲಾರದು. ಅಂತಹ ಸಂದರ್ಭದಲ್ಲಿ ನನ್ನನ್ನು ಕೊಲ್ಲುವವನ ವಿಚಾರದಲ್ಲಿ ನನಗೆ ರೋಷ ದ್ವೇಷಗಳಿಲ್ಲದೆಹೋದರೆ ನನಗೆ ಮುಕ್ತಿ ಸಿಕ್ಕುತ್ತದೆ. ಕೊಂದವನಿಗೂ, ನಾನು

ನಿರ್ದೋಷಿಯೆಂಬ ಅರಿವುಂಟಾಗುತ್ತದೆ." ನಲವತ್ತೆರಡು ವರ್ಷಗಳನಂತರ ಸಹೋದರನ ಕೈಯಿಂದಲೇ ಗಾಂಧಿ ಸಾಯುವನೆಂದು ಆಗ ಯಾರಿಗೂ ತಿಳಿಯಲಿಲ್ಲ. ಪಠಾಣ ಮಾತಿಗೆ ತಪ್ಪಲಿಲ್ಲ. ಗಾಂಧಿ ದಾಖಲೆ ಕಛೇರಿಗೆ ಹೋಗುತ್ತಿರಲು ಆರಡಿ ಎತ್ತರವಾಗಿ ಬಲವಾಗಿದ್ದ ಮೀರ್‌ಆಲಂ ಆತನ ತಲೆಯಮೇಲೆ ಬಲವಾಗಿ ಹೊಡೆದನು. ಗಾಂಧಿ "ನಾನು ಹೇ ರಾಮ ಎನ್ನುತ್ತಾ ಜ್ಞಾನ ತಪ್ಪಿಬಿದ್ದೆ" ಎಂದು ಬರೆದಿದ್ದಾರೆ. ಇದೇ ನಾಮ ವನ್ನುಚ್ಚರಿಸುತ್ತಾ ಆತನು ೧೯೪೮ರ ಜನವರಿ ೩೦ನೇ ತಾರೀಖು ಸತ್ತುದು.

ಮೀರ್ ಆಲಮನನ್ನೂ ಬೇರೆ ಕೆಲವು ಪಠಾಣರನ್ನೂ ಸೆರೆಹಿಡಿಯ ಲಾಯಿತು. ಆದರೆ ಗಾಂಧಿ ಅವರನ್ನು ಬಿಡಿಸಿದನು. "ಅವರಿಗೆ ಸರಿ ಯೆಂದು ತೋರಿದುದನ್ನು ಅವರು ಮಾಡಿದರು. ಅವರನ್ನು ಶಿಕ್ಷೆಗೆ ಗುರಿ ಪಡಿಸಲು ನನಗಿಷ್ಟವಿಲ್ಲ" ಎಂದನು.

ಏಟಿನಿಂದ ಗುಣಹೊಂದಿದಮೇಲೆ ಗಾಂಧಿ ತನ್ನ ಹೆಸರನ್ನು ದಾಖಲೆ ಮಾಡಿಸಲು ಅನೇಕ ಹಿಂದುಗಳು ಆತನನ್ನನುಸರಿಸಿದರು! ಅದಾದಮೇಲೆ ಸ್ಮಟ್ಸ್ ಬಲವಂತವಾಗಿ ದಾಖಲೆ ಮಾಡಿಸುವ ಕಾನೂನನ್ನು ಜಾರಿಗೆ ತಂದನು. ಇಂಡಿಯನ್ನರು ಗಾಂಧಿಯನ್ನು ಅಪಹಾಸ್ಯಮಾಡಿ, "ನೀವು ಮೋಸ ಹೋಗುತ್ತೀರೆಂದು ನಾವು ಹೇಳಲಿಲ್ಲವೆ?" ಎಂದರು.

೧೯೦೮ರ ಆಗಸ್ಟ್ ೧೬ರ ಸಂಜೆ ನಾಲ್ಕು ಘಂಟೆಗೆ ಎರಡು ಸಾವಿರ ಇಂಡಿಯನ್ನರು ಜೋಹಾನ್ಸ್‌ಬರ್ಗಿನ ಹಮೀದಿಯ ಮಸೀತಿಯಲ್ಲಿ ಸೇರಿ ಉರಿಯುವ ಬೆಂಕಿಯಲ್ಲಿ ತಮ್ಮ ದಾಖಲೆ ಚೀಟಿಗಳನ್ನು ಹಾಕಿದರು. ಲಂಡನ್ ಡೈಲಿ ಮೈಲಿನ ಬಾತ್ಮೀದಾರ ಅದನ್ನು ಬೋಸ್ಟನ್ ಟೀಪಾರ್ಟಿಗೆ ಹೋಲಿಸಿದನು.

ಜೋಹಾನ್ಸ್ ಬರ್ಗಿನಲ್ಲಿ ಗಾಂಧಿಯ ಕಛೇರಿ ಈಗ ಸತ್ಯಾಗ್ರಹ ಚಳುವಳಿಯ ಮುಖ್ಯ ಕಾರ್ಯಾಲಯವಾಯಿತು. ಮಿಕ್ಕವೇಳೆಯಲ್ಲಿ ನೇಟಾಲಿನ ಫೀನಿಕ್ಸ್ ಜಮೀನಿಗೆ ಹೋಗಿ ಅಲ್ಲಿಯ ಇಂಡಿಯನ್ನರ ಬೆಂಬಲ ವನ್ನು ಬೇಡುತ್ತಿದ್ದನು. ಅಲ್ಲಿ ಟ್ರಾನ್ಸ್‌ವಾಲಿನ ಹದಿಮೂರು ಸಾವಿರಕ್ಕಿಂತ ಬಹಳ ಹೆಚ್ಚು ಜನ ಇಂಡಿಯನ್ನರಿದ್ದರು. ಜಮೀನಿನಲ್ಲಿ ಮಳೆಯಿಲ್ಲದಾಗ ಒಂದು ತೆಳುವಾದ ಬಟ್ಟೆಯ ಮೇಲೆ ಹೊರಗೆ ಮಲಗುತ್ತಾ ಕಠಿಣ ಜೀವನ

ವನ್ನು ನಡೆಸುತ್ತಿದ್ದನು. ಪ್ರಾಪಂಚಿಕ ಸುಖಗಳನ್ನು ಬಿಟ್ಟು ಮುಂದಿನ ಯುದ್ಧದ ಮೇಲೆ ಲಕ್ಷ್ಯವನ್ನೆಲ್ಲಾ ಕೇಂದ್ರೀಕರಿಸಿದನು. ಸತ್ಯಾಗ್ರಹಿ ಹಗ್ಗದ ಮೇಲೆ ಕುಣಿಯುವವನಿಗಿಂತ ತದೇಕಚಿತ್ತನಾಗಿರಬೇಕು", ಎಂದು ಬರೆದನು. ನೈತಿಕ ಯುದ್ಧಕ್ಕೆ ಸಿದ್ಧಪಡಿಸಿಕೊಳ್ಳುತ್ತಿದ್ದನು. ಇಂಡಿಯನ್ನರು ಕಾನೂನನ್ನುಲ್ಲಂಘಿಸಿ, ಅಪ್ಪಣೆ ಚೀಟಿಗಳಿಲ್ಲದೆ ಟ್ರಾನ್ಸ್‌ವಾಲಿಗೆ ಪ್ರವೇಶಿಸಿ ಸೆರೆಮನೆಗಳನ್ನು ತುಂಬಲು ನಿರ್ಧರಿಸಿದರು.

ಗಾಂಧಿ ಬಹು ಸರಳವಾದ ಆದರೂ ನಾಟಕೀಯವಾದ ಉಪಾಯ ಹೂಡಿದನು. ನೆಟಾಲಿನ ಇಂಡಿಯನ್ನರು ತಾವು ಟ್ರಾನ್ಸ್‌ವಾಲಿನ ಪ್ರವೇಶ ಪತ್ರದ ಕಾನೂನಿನ ಶಕ್ತಿಯನ್ನು ಪರೀಕ್ಷಿಸಲು ಅನುಮತಿ ಕೇಳುತ್ತಿದ್ದರು. ಒಬ್ಬೊಬ್ಬರನ್ನಾಗಿ ಆರಿಸಿ ಟ್ರಾನ್ಸ್‌ವಾಲಿನ ಗಡಿಗೆ ಹೋಗಿ ಒಳಕ್ಕೆ ಪ್ರವೇಶಿಸಲು ಪ್ರಯತ್ನ ಮಾಡಬೇಕೆಂದು ಹೇಳಿದನು. ಅವರಲ್ಲಿ ಆತನ ಹಿರಿಯ ಮಗ ಹರಿಲಾಲನೂ ಇದ್ದನು. ಎಲ್ಲರನ್ನೂ ದಸ್ತಗಿರಿ ಮಾಡಿ ಮೂರು ತಿಂಗಳು ಸಜಾ ವಿಧಿಸಿದರು. ಗಾಂಧಿಯೂ ಅವರನ್ನು ಸೇರಿದನು. ಟ್ರಾನ್ಸ್‌ವಾಲಿನಲ್ಲಿ ಅನೇಕರು ತಮ್ಮಲ್ಲಿ ಅಪ್ಪಣೆ ಚೀಟಿಗಳಿಲ್ಲವೆಂದು ಹೇಳಿ ಸೆರೆಮನೆ ಸೇರಿದರು.

ಒಂದು ಸೆರೆಮನೆಯಲ್ಲಿ ಗಾಂಧಿ ಎಪ್ಪತ್ತೈದು ಜನ ಜೊತೆಯವರಿಗೆ ಅಡಿಗೆಯವನಾಗಿ ಕೆಲಸ ಮಾಡಿದನು. ಕೈಗಳಲ್ಲಿ ಬೊಬ್ಬೆ ಬರುವಂತಹ ಕಷ್ಟದ ಕೆಲಸಗಳನ್ನು ಮಾಡುತ್ತಿದ್ದನು. ಕಕ್ಕಸುಗಳನ್ನು ಚೊಕ್ಕಟ ಮಾಡಲು ಒಪ್ಪಿಕೊಂಡನು. ಗಾಂಧಿ ಆ ಕಾಲದಲ್ಲಿ ಬರೆದ ಒಂದು ಲೇಖನದಲ್ಲಿ "ದೇಶಕ್ಕಾಗಿ, ಮತಕ್ಕಾಗಿ ಸೆರೆಮನೆಗೆ ಹೋಗಿ ಕಷ್ಟಪಡುವದು ಆನಂದದ ಹಾದಿ " ಎಂದು ಬರೆದನು. ಸೆರೆಯಾಳಿನ ಆತ್ಮ ಸ್ವತಂತ್ರವಾದುದು. ನ್ಯೂ ಇಂಗ್ಲೆಂಡಿನ ಕ್ರಾಂತಿಕಾರ ಹೆನ್ರಿಡೇವಿಡ್ ಥೋರೋ ತನ್ನ ಸೆರೆಮನೆಯ ಅನುಭವಗಳನ್ನು ಬರೆಯುತ್ತಾ "ನನಗೆ ಸೆರೆಯಲ್ಲಿದ್ದಂತೆ ತೋರಲೇ ಇಲ್ಲ. ಗೋಡೆಗಳಿಗೆ ಕಲ್ಲುಗಾರೆ ಹಾಕಿದ್ದುದು ದಂಡವಾಗಿ ತೋರಿತು" ಎಂದನು. ಗಾಂಧಿ ಈ ಮಾತುಗಳನ್ನು ಬರೆದಿಟ್ಟುಕೊಂಡು, ಎರಡನೆಯ ಬಾರಿ ಸೆರೆಮನೆಗೆ ಹೋದಾಗ ಆ ಪ್ರಬಂಧವನ್ನೆಲ್ಲಾ ಓದಿದನು. ಅದನ್ನು " ಪ್ರಭಾವಯುತವಾದ ಪ್ರಬಂಧ " ವೆಂದು ಕರೆದು ಅದು ತನ್ನಮೇಲೆ

ಅತಿಶಯ ಪರಿಣಾಮವನ್ನುಂಟು ಮಾಡಿತೆಂದು ಹೇಳಿದ್ದಾರೆ. ಥೋರೋ ಮೇಲೆ ಇಂಡಿಯದ ಪರಿಣಾಮವಿದ್ದಂತೆಯೇ ಗಾಂಧಿಯ ಕೆಲಸಗಳಮೇಲೆ ಥೋರೋ ಪ್ರಭಾವವಿತ್ತು. ಥೋರೋ ಮತ್ತು ಆತನ ಸ್ನೇಹಿತ ರಾಲ್ಫ್ ವಾಲ್ಡೊ ಎಮರ್ಸನ್ ಭಗವದ್ಗೀತೆಯನ್ನೂ, ಉಪನಿಷತ್ತುಗಳನ್ನೂ ಓದಿದ್ದರು. ಹೀಗೆ ಮಸಾಚುಸೆಟ್ಸ್‌ನಲ್ಲಿ ಥೋರೋ ಗಾಂಧಿಯ ಇಂಡಿಯದಿಂದ ತೆಗೆದುಕೊಂಡ ಅಭಿಪ್ರಾಯಗಳ ಋಣವನ್ನು ದಕ್ಷಿಣ ಆಫ್ರಿಕದ ಸೆರೆಯಲ್ಲಿದ್ದ ಗಾಂಧಿಗೆ ಕೊಟ್ಟು ತೀರಿಸಿದನು.

ಥೋರೋ ತನ್ನ "ರಾಜಕೀಯ ಮುಷ್ಕರ"ದಲ್ಲಿ "ನಾನು ಒಪ್ಪಿಕೊಳ್ಳುವ ಹೊಣೆ, ನನ್ನ ಮನಸ್ಸಿಗೆ ಸರಿದೋರಿದುದನ್ನು ಮಾಡುವುದೇ" ಎಂದು ಹೇಳಿದ್ದಾನೆ. ಕಾನೂನಿಗೆ ತಲೆಬಾಗುವುದಕ್ಕಿಂತ ಸರಿಯೆಂದು ತೋರಿದುದನ್ನು ಮಾಡುವುದೇ ಗೌರವವೆಂದು ಆತನು ಎಣಿಸಿದ್ದನು. ೧೮೪೯ರಲ್ಲಿ ಗುಲಾಮರಿಗೆ ವಿರುದ್ಧವಾಗಿಯೂ, ಮೆಕ್ಸಿಕೋವಿನ ಆಕ್ರಮಣವನ್ನೆದುರಿಸಿಯೂ ಬರೆಯುವಾಗ, "ಗುಲಾಮಗಿರಿಗೂ, ಯುದ್ಧಕ್ಕೂ, ವಿರುದ್ಧ ಅಭಿಪ್ರಾಯವುಳ್ಳವರು ಸಾವಿರಾರು ಜನರಿದ್ದಾರೆ. ಆದರೆ ಅವರು ಯಾರೂ ಅದನ್ನು ಕೊನೆಗಾಣಿಸಲು ಏನೂ ಪ್ರಯತ್ನ ಮಾಡುವುದಿಲ್ಲ. ಒಬ್ಬ ಧರ್ಮಿಷ್ಠನಿದ್ದರೆ, ತೊಂಬತ್ತೊಂಬತ್ತು ಧರ್ಮದ ಆರಾಧಕರಿರುತ್ತಾರೆ" ಎಂದನು.

ಗಾಂಧಿಯಂತೆ ಥೋರೋ, ನೈತಿಕ ಹಠವುಳ್ಳ ಕೆಲವು ಜನ, ಅನೇಕರ ಪಾಪಗಳನ್ನು ತಿದ್ದುವ ಶಕ್ತಿಯುಳ್ಳವರೆಂದು ನಂಬಿದ್ದನು. "ಸಾವಿರ ಜನ, ನೂರು ಜನ, ನಾನು ಹೆಸರಿಸಬಲ್ಲ ಹತ್ತು ಜನ-ಹತ್ತು ಜನ ಪ್ರಾಮಾಣಿಕರು–ಒಬ್ಬ ಪ್ರಾಮಾಣಿಕನಾದ ಮನುಷ್ಯ, ಈ ಮಸಾಚುಸೆಟ್ಸ್ ಸಂಸ್ಥಾನದಲ್ಲಿ ಗುಲಾಮರನ್ನು ಇಟ್ಟುಕೊಳ್ಳಲು ನಿರಾಕರಿಸಿ ಸರ್ಕಾರದೊಡನೆ ಅಸಹಕಾರ ತೋರಿ, ಅದಕ್ಕಾಗಿ ಸೆರೆಮನೆ ಸೇರಿದರೆ ಅಲ್ಲಿಗೆ ಅಮೆರಿಕದಲ್ಲಿ ಗುಲಾಮಗಿರಿ ನಾಶವಾದಂತೆ. ಪ್ರಾರಂಭ ಸಣ್ಣದಾದರೆ ಚಿಂತೆಯಿಲ್ಲ. ಸರಿಯಾಗಿ ಮಾಡಿದುದು ಎಂದಿಗೂ ನಾಶವಾಗುವುದಿಲ್ಲ. ಆದರೆ ನಮಗೆ ಆ ವಿಚಾರ ಮಾತನಾಡುವುದರಲ್ಲಿ ಮಾತ್ರ ಆಸಕ್ತಿ...."

ಥೋರೋ ತೆರಿಗೆ ಕೊಡಲು ನಿರಾಕರಿಸಿ ಸೆರಮನೆ ಸೇರಿದನು. ಆದರೆ

ಒಬ್ಬ ಸ್ನೇಹಿತ ಆತನ ಹಣಕೊಟ್ಟು ಇಪ್ಪತ್ತು ನಾಲ್ಕು ಘಂಟೆಗಳಲ್ಲಿ ಬಿಡಿಸಿದನು. ರಾಜಕೀಯ ವಿಚಾರ ಪ್ರಬಂಧದಲ್ಲಿ ಎಮರ್ಸನ್ "ತನ್ನ ನೈತಿಕ ನಂಬಿಕೆಗಳಿಗಾಗಿ ಕಾನೂನುಗಳ ಅಧಿಕಾರವನ್ನು ಸಂತತವಾಗಿ ತಿರಸ್ಕರಿಸಿದ ಮನುಷ್ಯನೊಬ್ಬನನ್ನೂ ನಾನು ಕಾಣೆ" ಎಂದನು. ಎಮರ್ಸನ್ ೧೮೮೨ರಲ್ಲಿ ಸತ್ತನು. ಆತನಿಗೆ ಗಾಂಧಿಯು ಪರಿಚಯವಿರಲಾರದು. ಗಾಂಧಿ ಥೋರೋವಿನ ಪುಸ್ತಕವನ್ನೋದುತ್ತಿದ್ದಾಗಲೇ ಅನ್ಯಾಯದ ಕಾನೂನುಗಳನ್ನು ನೈತಿಕ ಕಾರಣಗಳಿಗಾಗಿ ತಿರಸ್ಕರಿಸಿ, ಜೀವಮಾನವೆಲ್ಲಾ ತಿರಸ್ಕರಿಸಿ, ಜೀವಮಾನವೆಲ್ಲಾ ತಿರಸ್ಕರಿಸಲು ನಿಶ್ಚಯಿಸಿ, ಸೆರೆಮನೆಯಲ್ಲಿದ್ದನು.

೧೯೦೯ ಮತ್ತು ೧೯೧೦ರಲ್ಲಿ ಗಾಂಧಿ ಪತ್ರ ಸಂಬಂಧ ಹೊಂದಿದ್ದ ಕೌಂಟ್‌ಲಿಯೋ ಟಾಲ್‌ಸ್ಟಾಯ್‌ಗೆ ಕೂಡ, ನೈತಿಕಶಕ್ತಿಹೊಂದಿದ್ದ ವ್ಯಕ್ತಿಯಲ್ಲೂ ರಾಜಕೀಯ ಅಸಹಕಾರದಲ್ಲೂ ಅದೇ ನಂಬಿಕೆಯಿತ್ತು. ತನ್ನ, "ದೇವರ ರಾಜ್ಯ ನಿನ್ನಲ್ಲಿದೆ" ಎಂಬ ಪುಸ್ತಕದಲ್ಲಿ ಟಾಲ್‌ಸ್ಟಾಯ್, "ಕ್ರೈಸ್ತರ ಎದುರಿನಲ್ಲಿ ಸರ್ಕಾರದ ಸ್ಥಾನ ಬಹಳ ಸಡಿಲ. ಅದನ್ನು ತುಂಡಾಗಿಸಲು ಬಹಳ ಪ್ರಯತ್ನ ಬೇಕಾಗಿಲ್ಲ" ಎಂದು ಬರೆದನು. ಕ್ರೈಸ್ತನೆಂದರೆ "ನೆರೆಯವನೊಡನೆ ವಾಗ್ವಾದಕ್ಕೆ ತೊಡಗದವನು, ಆಕ್ರಮಣ ಮಾಡದೆ ಹಿಂಸೆ ಮಾಡದೆ ಇರುವವನು, ಪ್ರತಿಭಟಿಸದೆ ಕಷ್ಟ ಸಹಿಸಿ, ತನ್ನ ನಿಲುವಿನಿಂದ ತಾನು ಸ್ವತಂತ್ರನಾಗುವುದಲ್ಲದೆ ಲೋಕವನ್ನೆಲ್ಲಾ ಹೊರಗಿನ ಅಧಿಕಾರದಿಂದ ಮುಕ್ತಗೊಳಿಸುತ್ತಾನೆ" ಎಂದು ವಿವರಿಸಿದ್ದಾನೆ.

ಟಾಲ್‌ಸ್ಟಾಯ್ ತನ್ನ ಕಡೆಯ ದಿನಗಳಲ್ಲಿ ಕಾಯ ಕಷ್ಟದಿಂದ, ತ್ಯಾಗದಿಂದ, ತಪಸ್ಸಿನಿಂದ, ಕ್ರೈಸ್ತಮತ ಬೋಧೆಯಿಂದ ಧರ್ಮವನ್ನೂ ನಡತೆಯನ್ನೂ ಸಮನ್ವಯಗೊಳಿಸಲು ಪ್ರಯತ್ನಿಸಿದನು. ಥೋರೋ, ರಸ್ಕಿನ್ ಕೂಡ ಮನುಷ್ಯನ ಧ್ಯೇಯ, ಕರ್ಮಗಳಿಗೆ ನಿಕಟ ಸಂಬಂಧದ ಅನ್ವೇಷಣೆಮಾಡಿದರು. ಮಾತುಗಳಿಗೆ ಧ್ಯೇಯಗಳೊಡನೆಯೂ, ಎರಡಕ್ಕೂ ಕರ್ಮದೊಡನೆಯೂ ಐಕ್ಯತೆ ತೋರಿಸಲು ಅವರ ಕಲಾತ್ಮಕ ಸ್ವಭಾವ ಪ್ರಯತ್ನಿಸಿತು.

ಟಾಲ್‌ಸ್ಟಾಯ್ ಪ್ರಭಾವಕ್ಕೊಳಗಾಗಿದ್ದ ರೋಮೋ ರೋಲ ಆತ

ನ್ನು ಗಾಂಧಿಯೊಡನೆ ಬಹಳ ಚತುರತೆಯಿಂದ ಹೋಲಿಸಿದನು. ಳರಲ್ಲಿ ಆತ "ಗಾಂಧಿಗೆ ಎಲ್ಲದರಲ್ಲೂ ಪ್ರಕೃತಿಯ ಸರಳತೆ ಶುಭ್ರತೆ ೀರುತ್ತದೆ. ಆತನ ಹೋರಾಟವೆಲ್ಲಾ ಧಾರ್ಮಿಕ ಶಾಂತತೆಯಿಂದ ವಿತ್ರವಾಗಿದೆ. ಟಾಲ್‌ಸ್ಟಾಯ್ ಹೆಮ್ಮೆಯನ್ನೆದುರಿಸಿ ಹೆಮ್ಮೆಯ ಕ್ರಾಂತಿ, ೀಷವನ್ನೆದುರಿಸಿ ದ್ವೇಷ ಉದ್ವೇಗವನ್ನೆದುರಿಸಿ ಉದ್ವೇಗ ತೋರುತ್ತಾನೆ. ಲ್‌ಸ್ಟಾಯ್‌ಯ ಅಹಿಂಸಾ ತತ್ವ ಕೂಡ ಹಿಂಸಾತ್ಮಕವಾದುದು.

ಟಾಲ್‌ಸ್ಟಾಯ್ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ್ದನು ; ಗಾಂಧಿ ಂತನಾಗಿ ಸಮತೆಯಿಂದಿದ್ದನು. ಈ ವಿಚಾರದಲ್ಲಿ ಗಾಂಧಿಯ ಸಂಗಡಿಗ ೇಕರು ಟಾಲ್‌ಸ್ಟಾಯ್ ತತ್ವದವರು. ತನಗೆ ಸರಿಯೆಂದು ತೋರಿದು ನ್ನಲ್ಲದೆ, ಅನುಕೂಲವಾದುದನ್ನೋ, ಸುಖವಾದುದನ್ನೋ, ಲಾಭಕರ ದುದನ್ನೋ, ಜನಪ್ರಿಯವಾದುದನ್ನೋ, ಸುರಕ್ಷಿತವಾದುದನ್ನೋ, ಭಾವಪೂರಿತವಾದುದನ್ನೋ ಮಾಡದೆ, ಗಾಂಧಿ ತನ್ನಲ್ಲಿ ಮನೋವಿಶ್ಲೇ ಣವಿಲ್ಲದೆ, ತಪ್ಪುಮಾಡಿದವರೊಡನೆ ಶಾಂತವಾಗಿ, ಸಮಾಧಾನವಾಗಿ ೀರಾಡುವ ಶಕ್ತಿಗಳಿಸಿದನು. ಮಾತು, ಅಭಿಪ್ರಾಯಗಳಿಗೆ ಪ್ರಾಮು ತೆ ಕೊಟ್ಟು, ಒಂದು ನೈತಿಕ ವಿಚಾರವನ್ನೊಪ್ಪಿಕೊಂಡರೆ ಅದರಂತೆ ನುಕಬೇಕೆಂಬ ಭಾವನೆಯನ್ನು ಹೊಂದಿದ್ದನು. ಅನಂತರ ಅದನ್ನು ರೆಯುವರಿಗೆ ಬೋಧಿಸಬಹುದು. ತಾನು ನಡೆದಂತೆ ಬೋಧಿಸುತ್ತಿದ್ದನು.

ನಮ್ಮ ಸಂಸ್ಕೃತಿಯ ಅನೇಕ ದೋಷಗಳ ಬೇರು, ಮಾತು ನಡೆ ಡಿಗಳಿಗೆ ಸಮನ್ವಯವಿಲ್ಲದಿರುವುದು. ಅದೇ ಚರ್ಚುಗಳ, ಸಂಸ್ಥಾನಗಳ, ಂಗಡಗಳ ವ್ಯಕ್ತಿಗಳ ದೌರ್ಬಲ್ಯ. ಅದರಿಂದ ಮನುಷ್ಯರೂ, ಸಂಸ್ಥೆಗಳೂ ಮುಖವಾಗುತ್ತವೆ. ಅಸಂಬದ್ಧ ವಿಚಾರಗಳ ಸ್ಥಾನದಲ್ಲಿ ಸಾಮರಸ್ಯ ನ್ನು ಸ್ಥಾಪಿಸಿ ಈ ಸೀಳನ್ನು ಸರಿಪಡಿಸಲು ಗಾಂಧಿ ಪ್ರಯತ್ನಿಸಿದನು. ದು ಸಾಧ್ಯವಾಗುತ್ತ ಹೋದಂತೆಲ್ಲಾ ಆತನಿಗೆ ಸುಖ ಶಾಂತಿಗಳು ದೊರ ನುವು.

ಮಾತು, ನಡೆ, ನುಡಿಗಳಲ್ಲಿ ಸಾಮರಸ್ಯವಿದ್ದುದರಿಂದ ಗಾಂಧಿಯ ದ್ಧಿ ಆರೋಗ್ಯದಿಂದಿತ್ತು. ಆತನಲ್ಲಿ ಭಿನ್ನತೆ ಇರಲಿಲ್ಲ. "ಸತ್ಯದಿಂದ ತಂತ್ರನಾಗುವೆ – ಆರೋಗ್ಯವಂತನಾಗುವೆ." ಸತ್ಯದಿಂದ ಗಾಂಧಿ ಸೆರೆ

ಮನೆಗೆ ಹೋಗಲು ಬಿಡುಗಡೆ ಪಡೆದನು.

## ೯. ಆನಂದದ ವಿಜಯ

ಸೆರೆಮನೆಗೆ ಹೋಗಲು, ಟ್ರಾನ್ಸ್‌ವಾಲಿನ ಇಂಡಿಯನ್, ನೆಟಾಲಿಗೆ ಹೋಗಿ ಪುನಃ ಟ್ರಾನ್ಸ್‌ವಾಲಿಗೆ ಹಿಂದಿರುಗಿದರೆ ಸಾಕಾಗಿತ್ತು. ಹೀಗೆ ಮಾಡಿದರೆ ಕಾನೂನಿಗೆ ವಿರುದ್ಧವಾಗಿ ನಡೆದಂತಾಗಿ, ಒಂದರಿಂದ ಮೂರು ತಿಂಗಳು ಸೆರೆಮನೆಯನ್ನನುಭವಿಸಬೇಕಾಗಿತ್ತು. ಕೆಲವು ಜನ ಈ ಆತ್ಮಶಕ್ತಿಯ ಚಳುವಳಿಗಾರರು ಎಂಟಾವೃತ್ತಿ ಸೆರೆಮನೆಗೆ ಹೋಗಿ ಬಂದರು. ಹೊರಗೆ ಬಂದ ತಕ್ಷಣ ಪುನಃ ಕಾನೂನು ಮುರಿಯುತ್ತಿದ್ದರು. ಒಂದು ಸಲ ಟ್ರಾನ್ಸ್‌ವಾಲಿನಲ್ಲಿದ್ದ ಹದಿಮೂರುಸಾವಿರ ಇಂಡಿಯನ್ನರಲ್ಲಿ ಎರಡು ಸಾವಿರದೈನೂರು ಜನ ಸೆರೆ ಮನೆಯಲ್ಲಿದ್ದರು ; ಆರು ಸಾವಿರ ಜನ ಸಂಸ್ಥಾನವನ್ನು ಬಿಟ್ಟು ಓಡಿಹೋಗಿದ್ದರು. ಹೋರಾಟದ ಕೊನೆ ಕಾಣಲಿಲ್ಲ.

೧೯೦೯ರಲ್ಲಿ ಗಾಂಧಿ ಹೆನ್ರಿ ಪೋಲಕನನ್ನು ಇಂಡಿಯಾಕ್ಕೆ ಕಳುಹಿಸಿ ತಾನು ಇಂಗ್ಲೆಂಡಿಗೆ ಹೋದನು. ಚಕ್ರಾಧಿಪತ್ಯದ ಒಂದು ಕಡೆ ಜನರು ವರ್ಣದ್ವೇಷದ ಅಸಮಾಧಾನದಿಂದಿದ್ದರೆ ಅದರಿಂದ ವರ್ಣ ಭೇದ ವಿರುದ್ಧವಾಗಿ ಹೋರಾಡುವ ಮತ್ತೊಂದು ಕಡೆಯ ಜನರಿಗೆ ಸಹಾಯವಾಗುವುದೆಂದು ಗಾಂಧಿ ಅರಿತಿದ್ದನು. ಇಂಡಿಯಾಕ್ಕೆ ದಕ್ಷಿಣ ಆಫ್ರಿಕದ ಕಡೆ ಗಮನ ತಿರುಗಿದರೆ ವೈಸರಾಯಿ ಆ ಆತಂಕವನ್ನು ಲಂಡನ್ನಿಗೆ ತಿಳಿಸಿ ಸ್ಮಟ್ಸನನ್ನು ತಡೆಯಬಹುದು.

ಗಾಂಧಿಗೆ ಅನೇಕ ಜನ ಉದಾರ ಪಕ್ಷವಾದಿಗಳ ಮತ್ತು ವಿವೇಕಿಗಳಾದ ಚಕ್ರಾಧಿಪತ್ಯವಾದಿಗಳ ಬೆಂಬಲ ಸಿಕ್ಕಿತು. ಆತನ ಪ್ರಯಾಣದಿಂದ ತಕ್ಷಣ ಏನು ಉಪಯೋಗವೂ ಆಗದಿದ್ದರೂ, ದಕ್ಷಿಣ ಆಫ್ರಿಕದ ಇಂಡಿಯನ್ನರ ಪ್ರಶ್ನೆ ಚಕ್ರಾಧಿಪತ್ಯದ ಒಂದು ದೊಡ್ಡ ತಲೆನೋವಾಗಿ ಪರಿಣಮಿಸಿತು. ಇದೇ ಅಂತಿಮ ವಿಜಯದ ಮೊಳಕೆಯಾಯಿತು.

೧೯೦೯ ರ ಕಡೆಯಲ್ಲಿ ದಕ್ಷಿಣ ಆಫ್ರಿಕಕ್ಕೆ ಹಿಂದಿರುಗಿ ಗಾಂಧಿ, ರಾಜಕೀಯ ಚಳುವಳಿಗಾರರ ಒಂದು ಸಹಕಾರ ಸಂಘವನ್ನು ಸ್ಥಾಪಿಸಿ, ಅವರೆಲ್ಲರೂ ಸಹೃದಯತೆಯಿಂದ ಸರಳ ಜೀವನ ನಡೆಸಬೇಕೆಂದು ನಿರ್ಧರಿಸಿದನು. ಸೆರೆಯಾಳುಗಳ ಸಂಸಾರ ನಿರ್ವಹಣೆಗೂ, ಸೆರೆಮನೆಯಿಂದ ಹೊರಗೆ

ಬಂದ ಚಳುವಳಿಗಾರರ ಪೋಷಣೆಗೂ ಒಂದು ಸಂಸ್ಥೆ ಬೇಕಾಗಿತ್ತು. ಇದಕ್ಕಾಗಿ ಸತ್ಯಾಗ್ರಹ ಚಳುವಳಿಯ ಎರಡನೆಯ ಮುಂದಾಳು ದೊಡ್ಡ ಮೀಸೆಯ, ಕನ್ನಡಕ ಧರಿಸಿದ, ಧನಿಕ ಶಿಲ್ಪಿ, ಬೌದ್ಧ ಕುಸ್ತಿಯಲ್ಲಿ ಪಂಡಿತ, ಪ್ರಸಿದ್ಧನಾದ ಸ್ಯಾಂಡೋ ಶಿಷ್ಯ, ಗಾಂಧಿಯ ಮಾತಿನಲ್ಲಿ " ತೀವ್ರ ಭಾವನೆಯುಳ್ಳವನು, ವಿಶಾಲ ಸಹಾನುಭೂತಿಯುಳ್ಳವನೂ, ಮಗುವಿನಂತೆ ಸರಳನಾದವನೂ" ಆದ ಎತ್ತರದ ಜರ್ಮನ್‌ಜ್ಯೂ ಹರ್ಮನ್ ಕಲೆನ್‌ಬಾಕ್, ಜೋಹಾನ್ಸ್ ಬರ್ಗಿನಿಂದ ಇಪ್ಪತ್ತೊಂದು ಮೈಲಿ ದೂರದಲ್ಲಿದ್ದ ಲಾಲಿ ಎಂಬ ಕಡೆ ೧೧೦೦ ಎಕರೆ ಭೂಮಿಯನ್ನು ಕೊಂಡುಕೊಂಡು ಚಳುವಳಿಗೆ ಉಚಿತವಾಗಿ ಕೊಟ್ಟನು. ಗಾಂಧಿ ಅದನ್ನು " ಟಾಲ್‌ಸ್ಟಾಯ್ ಫಾರಂ " ಎಂದು ಕರೆದನು. ಆತ ಸಂಸಾರದೊಡನೆ ಅಲ್ಲಿ ನಿಂತರು.

ಗಾಂಧಿ ಇಂಡಿಯಾದಲ್ಲಿದ್ದ ಸ್ನೇಹಿತರಿಗೆ ಕಾಗದ ಬರೆದನು. ಫಾರಂಗೆ ಬೇಕಾದಷ್ಟು ರೊಟ್ಟಿಯನ್ನು ನಾನು ಮಾಡುತ್ತೇನೆ. ಚೆನ್ನಾಗಿರುವುದೆಂದು ಎಲ್ಲರೂ ಹೇಳುತ್ತಾರೆ. ನಾವು ಹುಳಿಯನ್ನಾಗಲೀ, ಸೋಡಾಪುಡಿಯನ್ನಾಗಲೀ ಹಾಕುವುದಿಲ್ಲ. ಇಲ್ಲಿ ಬೆಳೆದ ಕಿತ್ತಲೆ ಹಣ್ಣುಗಳಿಂದ ರಸಾಯನ ಮಾಡಿದ್ದೇವೆ. ಸಕ್ಕರೆ ಪಾಕದ ಕಾಫಿ ತಯಾರು ಮಾಡಲು ಕಲಿತಿದ್ದೇನೆ. ಅದನ್ನು ಮಕ್ಕಳೂ ಕೂಡ ಸೇವಿಸಬಹುದು."

ಗಾಂಧಿ ಅಡಿಗೆ ಮಾಡುತ್ತಿದ್ದನು. ಮರಗೆಲಸವನ್ನೂ, ಜೋಡು ಹೊಲಿಯುವುದನ್ನೂ ಕಲಿತನು. ಹೆಂಡತಿಗೆ ಕುಪ್ಪುಸಗಳನ್ನು ಹೊಲಿದು, ಅವುಗಳನ್ನು ಆಕೆ ಧರಿಸುತ್ತಿದ್ದಳೆಂದು ಹೆಮ್ಮೆಯಿಂದ ಹೇಳುತ್ತಿದ್ದನು. ಅಡಿಗೆಗೆ ಸಹಾಯಮಾಡಿ, ಹೆಂಗಸರು ಕಾದಾಡದಂತೆ ನೋಡಿಕೊಂಡು, ಮೇಲ್ವಿಚಾರಣೆಯನ್ನೆಲ್ಲಾ ನೋಡಿಕೊಳ್ಳುತ್ತಿದ್ದನು. ಯಾವುದಾದರೂ ಮೊಕದ್ದಮೆಯನ್ನು ನೋಡಬೇಕಾಗಿ ಬಂದಾಗ, ರಾತ್ರಿ ಎರಡು ಘಂಟೆಗೆ ಫಾರಮ್ಮಿನಿಂದ ಕಾಲ್ನಡಗೆಯಲ್ಲಿ ಇಪ್ಪತ್ತೊಂದು ಮೈಲಿ ಪಟ್ಟಣಕ್ಕೆ ನಡೆದು, ಆ ರಾತ್ರಿಯೇ ನಡೆದುಕೊಂಡು ಹಿಂದಿರುಗುತ್ತಿದ್ದನು. ಒಂದು ದಿನ " ಐವತ್ತು ಮೈಲಿ ನಡೆವೆ ", ಎಂದು ನೆನೆಸಿಕೊಂಡಿದ್ದಾರೆ.

ತನ್ನ ದೇಹದಾರ್ಢ್ಯ, ಶುದ್ಧಜೀವನದಿಂದಲೂ, ಆರೋಗ್ಯಕರವಾದ ಆಹಾರದಿಂದಲೂ ಬಂದಿತೆಂದು ಗಾಂಧಿ ಹೇಳುತ್ತಾರೆ. ಆತನೂ ಫಾರಮ್ಮಿ

ನಲ್ಲಿದ್ದ ಇತರರೂ ಬೇಯಿಸಿದ ಆಹಾರ ತೆಗೆದುಕೊಳ್ಳದೆ, ಬಾಳೆಹಣ್ಣು, ಖರ್ಜೂರ, ನಿಂಬೆ, ಕಿತ್ತಳೆ, ಕಡಲೆಕಾಯಿ, ಆಲಿವ್ ಎಣ್ಣೆಗಳನ್ನು ತೆಗೆದ್ಕೊಳ್ಳುತ್ತಿದ್ದರು. ಇಂಡಿಯಾದಲ್ಲಿ ಹಾಲಿಗಾಗಿ ಹಸು ಎಮ್ಮೆಗಳನ್ನು ಹಿಂಸಿಸುವ ಕತೆಗಳನ್ನು ಕೇಳಿ ಅವರು ಹಾಲನ್ನು ತ್ಯಜಿಸಿದರು.

ಫಾರಮ್ಮಿನ ಜನಸಂಖ್ಯೆ ಸೆರೆಮನೆ ಸೇರಿದ ಸತ್ಯಾಗ್ರಹಿಗಳ ಸಂಖ್ಯೆಯನ್ನವಲಂಬಿಸಿತ್ತು. ಕೆಲವು ಬಾರಿ ನೂರಕ್ಕೂ ಹೆಚ್ಚು ಜನರಿರುತ್ತಿದ್ದರು. ಕಲೆನ್‌ಬಾಕ್ ಮತ್ತು ಗಾಂಧಿ, ಮಕ್ಕಳಿಗೆ ಮತ, ಭೂಗೋಳ, ಚರಿತ್ರೆ ಲೆಖ್ಖ ಮುಂತಾದುವುಗಳನ್ನು ಹೇಳಿಕೊಡುತ್ತಿದ್ದರು.

ಸಹ ವಿದ್ಯಾಭ್ಯಾಸದ ವಿಚಾರವಾಗಿ ಗಾಂಧಿಯ ಅಭಿಪ್ರಾಯಗಳು ತೀರ ಸಂಪ್ರದಾಯ ವಿರುದ್ಧವಾಗಿದ್ದುವು. ಬೆಳೆದ ಹುಡುಗ ಹುಡುಗಿಯರು ಒಟ್ಟಿಗೆ ಸ್ನಾನಮಾಡಬಹುದಾಗಿತ್ತು. ಹುಡುಗಿಯರ ರಕ್ಷಣೆಗಾಗಿ ಗಾಂಧಿ ಅಲ್ಲಿ ಯಾವಾಗಲೂ ಇರುತ್ತಿದ್ದನು. "ನನ್ನ ಕಣ್ಣು ತಾಯ ಕಣ್ಣು ಮಗಳನ್ನನುಸರಿಸುವಂತೆ ಹುಡುಗಿಯರನ್ನನುಸರಿಸುತಿದ್ದುವು". ಹುಡುಗರ ಕಣ್ಣುಗಳೂ ಅನುಸರಿಸಿರಬೇಕು. ರಾತ್ರಿ ಎಲ್ಲರೂ ಹೊರಗಡೆ ಮಲಗುತ್ತಿದ್ದರು. ಎಳೆಯರೆಲ್ಲಾ ಗಾಂಧಿಯ ಹಾಸಿಗೆಯ ಸುತ್ತಲೂ ಹಾಸಿಕೊಂಡು ಮಲಗುತ್ತಿದ್ದರು. ಹಾಸಿಗೆಯಿಂದ ಹಾಸಿಗೆಗೆ ಮೂರಡಿಗಳ ಅಂತರವಿತ್ತು. ಆದರೆ ಗಾಂಧಿ ಆ ಮಕ್ಕಳಿಗೆ ತನ್ನಲ್ಲಿ ಪ್ರೀತಿಯಿತ್ತೆಂದೂ, ತಾನು ಅವರಿಗೆ ಇಂದ್ರಿಯ ನಿಗ್ರಹದ ವಿಚಾರಹೇಳಿದ್ದುದಾಗಿಯೂ ಹೇಳಿದನು.

ಒಬ್ಬ ಹುಡುಗಿಯ ವಿಚಾರದಲ್ಲಿ ಅಪಚಾರ ನಡೆದಾಗ ಗಂಡಸರ ಪಾಪದೃಷ್ಟಿಯನ್ನು ಶುದ್ಧಿಗೊಳಿಸಲು ಗಾಂಧಿ ರಾತ್ರಿಯೆಲ್ಲಾ ಎದ್ದಿದ್ದನು. ಬೆಳಗ್ಗೆ ಹುಡುಗಿಯನ್ನು ತಲೆಬೋಳಿಸಿಕೊಳ್ಳುವಂತೆ ಹೇಳಿದನು. ಅವಳಿಗೆ ಗಾಬರಿಯಾಯಿತು. ಆದರೆ ಆತನ ಮಾತಿಗೆ ಎದುರಾಡಲಾಗದೆ ಕಡೆಗೆ ಒಪ್ಪಿಕೊಂಡಳು. ಗಾಂಧಿಯೇ ಕೂದಲು ಕತ್ತರಿಸಿದನು.

ಈ ವಿಚಾರವಾಗಿ ಅನೇಕ ವರ್ಷಗಳ ಅನಂತರ ಮಾತನಾಡುತ್ತಾ ಗಾಂಧಿ ತನ್ನ ಅಮಾನುಷಕತೆಗೆ, ಅವಿವೇಕವೇ ಕಾರಣವೆಂದು ವಿವರಿಸಿದನು. ಆದರೆ ಆತ ಅವಿವೇಕಿಯಾಗಲು ಕಾರಣವೇನು ? ಟಾಲ್‌ಸ್ಟಾಯ್ ಫಾರಮ್ಮಿನಲ್ಲಿ ತನ್ನ ನಂಬಿಕೆ ಧೈರ್ಯಗಳು ಅತ್ಯುನ್ನತ

ವಾಗಿದ್ದುವೆಂದು ಹೇಳಿದನು. ತನ್ನಲ್ಲಿದ್ದ ಅಸೀಮನಂಬಿಕೆಯಿಂದ ಆತನಿಗೆ ಬೇರೆಯವರ ಅನುಮಾನಗಳು, ಭಾವಗಳು, ದೌರ್ಬಲ್ಯ ಅರ್ಥವಾಗುತ್ತಿರಲಿಲ್ಲ. ಬೇರೆಯವರ ಶಕ್ತಿಯನ್ನು ತನ್ನ ಶ್ರದ್ಧೆಯ ಮಾನದಿಂದ ಅಳೆಯುತ್ತಿದ್ದನು. ಆತಂಕಗಳನ್ನು ಮರೆಸಿ, ಧೈರ್ಯವಾಗಿ ಮುನ್ನುಗ್ಗುವಂತೆ ಮಾಡುವ ಕುರುಡುತನ ಅದು.

ಚಳುವಳಿ, ಸೆರೆಮನೆಗೆ ಹೋಗಿಬರುವುದು, ಆಶ್ರಮದಲ್ಲಿ ಕಠಿಣ ನಿಯಮದಿಂದಿರುವುದು, ಇಷ್ಟರಲ್ಲಿ ನಿಂತಿತು. ಬೇರೇನೂ ನಡೆಯಲಿಲ್ಲ. ಕೆಲವರಿಗೆ ಬೇಸರವಾಯಿತು, ಗಾಂಧಿಗೆ ಆಗಲಿಲ್ಲ. ೧೯೧೨ರ ಅಕ್ಟೋಬರಿನಲ್ಲಿ ಇಂಡಿಯಾ ಜನಾಂಗ ಚಳುವಳಿಯ ನಾಯಕ ಗೋಪಾಲಕೃಷ್ಣ ಗೋಖಲೆ, ದಕ್ಷಿಣ ಆಫ್ರಿಕದ ಸ್ಥಿತಿಗತಿಗಳನ್ನು ನೋಡಲು ಬಂದು ಗಾಂಧಿಯನ್ನು ಕಠಿಣವಾಗಿ, ನಂಬಿಕೆಗರ್ಹರಾದ ಚಳುವಳಿಗಾರರ ಪಟ್ಟಿಯನ್ನು ಕೊಡಬೇಕೆಂದು ಕೇಳಿದಾಗ, ಗಾಂಧಿ ೬೬ ಹೆಸರುಗಳನ್ನು ಬರೆದುಕೊಟ್ಟು ಅದು ಹದಿನಾರಕ್ಕಿಳಿದರೂ ಇಳಿಯಬಹುದೆಂದು ಹೇಳಿದನು. ಅವರು ತನ್ನ "ಶಾಂತಿ ಸೈನ್ಯ"ವೆಂದು ಹೇಳಿದನು. ಜನರೆಷ್ಟು ಕಡಿಮೆಯಾದರೂ ಗಾಂಧಿ ಎದೆಗುಂದಲಿಲ್ಲ. ಸರ್ಕಾರ ಆತ್ಮಶಕ್ತಿಗೆ ಖಂಡಿತ ಸೋಲುವುದೆಂದು ಆತನು ನಂಬಿದ್ದನು. ಗೋಖಲೆಗೆ ಭಾರತೀಯರ ಮೇಲೆ ಮತ್ತು ಬ್ರಿಟಿಷ್ ಆಡಳಿತಗಾರರಲ್ಲಿ ವಿಶೇಷ ಪ್ರಭಾವವಿತ್ತು. ಜನರಲ್ ಬೋಥ ಮತ್ತು ಸ್ಮಟ್ಸರ ಕೈಕೆಳಗಿದ್ದ ಹೊಸ ದಕ್ಷಿಣ ಆಫ್ರಿಕ ಯೂನಿಯನ್ ಸರ್ಕಾರ, ಆತನ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡಬೇಕೆಂದು ಆತನಿಗೆ ಉಪಚಾರಮಾಡಿ, ಸಂಚಾರ ಸೌಕರ್ಯಗಳನ್ನು ಕಲ್ಪಿಸಿಕೊಟ್ಟರು. ಇಂಡಿಯನ್ನರು ಬರಕೂಡದೆಂಬ ಕಾನೂನನ್ನು ರದ್ದುಪಡಿಸುವುದಾಗಿಯೂ, ಬಿಡುಗಡೆ ಹೊಂದಿದ ಕೂಲಿಯಾಳುಗಳ ಮೇಲೆ ಹಾಕಿದ್ದ ಮೂರು ಪೌಂಡು ವಾರ್ಷಿಕ ತೆರಿಗೆಯನ್ನು ತೆಗೆಯುವುದಾಗಿಯೂ ಭರವಸೆಕೊಟ್ಟರು.

ಗೋಖಲೆ ಈ ವಿಚಾರ ಹೇಳಿದಾಗ ಗಾಂಧಿ, "ನನಗೆ ನಂಬಿಕೆಯಿಲ್ಲ. ನನಗೆ ಆ ಮಂತ್ರಿಗಳ ಪರಿಚಯವಿರುವ ಹಾಗೆ ನಿಮಗಿಲ್ಲ" ಎಂದು ಹೇಳಿದನು.

ಗಾಂಧಿಗೆ ಗೋಖಲೆಯಲ್ಲಿ ಗೌರವವಿತ್ತು. ಆತನು " ಸ್ನಾ ಮಾಡಲು ಆಸೆ ಹುಟ್ಟಿಸುವ ಗಂಗೆಯ ಪವಿತ್ರ ಜಲದಂತಹ ಮನುಷ್ಯ ನೆಂದು ಹೇಳುತ್ತಿದ್ದನು. ಆತನನ್ನು ತನ್ನ ರಾಜಕೀಯ ಗುರುವೆಂದ ಒಪ್ಪಿಕೊಂಡರೂ ಗಾಂಧಿ ತನಗೆ ಸರಿಯೆಂದು ತೋರದಿದ್ದರೆ, ಯಾರ ಅ ಪ್ರಾಯಗಳಿಗೂ ಅವರಲ್ಲಿ ತನಗೆಷ್ಟು ಗೌರವವಿರಲಿ, ವಿಶ್ವಾಸವಿರಲಿ, ತ ಬಾಗುತ್ತಿರಲಿಲ್ಲ. ಗೋಖಲೆಯ ಅಭಿಪ್ರಾಯದಲ್ಲಿ ಬೋಥಾ, ಸ್ಮಟ್ಸ್ ವಚನ ಕೊಟ್ಟುದರಿಂದ ದಕ್ಷಿಣ ಆಫ್ರಿಕದ ಹೋರಾಟ ಮುಗಿದಂತೆ ಆದುದರಿಂದ ಆತನು ಗಾಂಧಿಗೆ, " ಹನ್ನೆರಡು ತಿಂಗಳೊಳಗಾಗಿ ಇಂಡಿಯ ದೇಶಕ್ಕೆ ಹಿಂದಿರುಗು, ಕುಂಟುನೆವಗಳನ್ನು ನಾನು ಕೇಳುವುದಿಲ್ಲ" ಎಂದನ ಗಾಂಧಿಯು ಹಠವನ್ನು ನೋಡಿ, " ಯಾವಾಗಲೂ ನಿನ್ನ ದಾರಿಯೇ ನಿನಗೆ ಎಂದು ಗದರಿಸಿದನು. ಆದರೆ ಬೊಂಬಾಯಿಗೆ ಹಿಂದಿರುಗಿದಮೇಲೆ ನಗ ಭವನದ ಸಭೆಯಲ್ಲಿ ೧೯೧೨ರ ಡಿಸೆಂಬರಿನಲ್ಲಿ " ಗಾಂಧಿಯಲ್ಲಿ ಸಾಧಾರ ಜನರನ್ನು ಉದಾತ್ತರನ್ನಾಗಿ, ಹುತಾತ್ಮರನ್ನಾಗಿ ಮಾಡುವ ಅದ್ಭುತ ಆ ಶಕ್ತಿಯಿದೆ " ಎಂದನು. ಗಾಂಧಿಯು ಎದುರಿನಲ್ಲಿ ಅಯೋಗ್ಯವಾದ ಕೆಲ ಮಾಡಲು ಸಂಕೋಚವಾಗುತ್ತದೆ ; ಆಲೋಚನೆ ಮಾಡಲು ಕೂಡ ಹೆದರಿ ಯಾಗುತ್ತದೆ " ಎಂದನು. ಗೋಖಲೆಯಂತಹ ಗಣ್ಯರನ್ನು ಕಂಡ ಗಾಂಧಿಗೆ ಗೌರವ, ಸಂಕೋಚ ಹೆದರಿಕೆ ಕೂಡ ಆಗುತ್ತಿತ್ತು. ಇದರಿಂ ಅವರ ಆಲೋಚನೆಗಳು ಕೆಲವು ಬಾರಿ ಆತನಿಗೆ ತಾಕುತ್ತಲೇ ಇರಲ್ಲಿ ದಾಕ್ಷಿಣ್ಯವಿದ್ದರೂ, ಸ್ವತಂತ್ರನಾಗಿದ್ದನು. ಆತ್ಮವಿಶ್ವಾಸ ಆತನಲ್ಲಿ ಸ್ಥೈ ವನ್ನು ತುಂಬಿ ಯಾವ ಟೀಕೆ ಮಾಡುವವನೂ, ಹಿಂಬಾಲಕನೂ ಆತ ಪ್ರಭಾವಕ್ಕೊಳಗಾಗದಿರಲು ಸಾಧ್ಯವಿರಲಿಲ್ಲ.

ಗಾಂಧಿಯ ಮಾತು ನಿಜವಾಯಿತು. ಪ್ರಜಾಪರಿಷತ್ತಿನಲ್ಲಿ ಸ್ಮಟ್ಸ್ ಮೂರು ಪೌಂಡುಗಳ ತೆರಿಗೆ ತೆಗೆಯಲು ನೆಟಾಲಿನ ಯೂರೋಪಿಯನ ಯಜಮಾನರು ಒಪ್ಪಲಿಲ್ಲವೆಂದು ಹೇಳಿದನು. ಇದು ಬೋಥ, ಸ್ಮಟ್ಸ್ ಗೋಖಲೆಗೆ ಕೊಟ್ಟ ವಚನಕ್ಕೆ ತಪ್ಪಿದಂತಾಗಲು ಕೂಲಿಗಾಗಿ ಬಂದಿ ಇಂಡಿಯನ್ನರೆಲ್ಲಾ ಸತ್ಯಾಗ್ರಹ ಸೇರಲು ಒಪ್ಪಿದರು.

ಈ ತೆರಿಗೆ ವಲಸೆಯ ವಿರೋಧದ ಕಾನೂನುಗಳ ಜತೆಗೆ, ಕೇಪ

ಕಾಲೊನಿಯ ಸುಪ್ರೀಂ ಕೋರ್ಟಿನ ನ್ಯಾಯಾಧೀಶನೊಬ್ಬನು ಕ್ರಿಶ್ಚಿಯನ್ ಮದುವೆಗಳು ಮಾತ್ರ ನ್ಯಾಯಬದ್ಧವಾದುವೆಂದು ಸಾರಿದನು. ಕಸ್ತೂರಿ ಬಾಯಿ ಗಾಬರಿಯಿಂದ, "ಹಾಗಾದರೆ ನಾನು, ನಿಮ್ಮ ಹೆಂಡತಿಯಲ್ಲವೇ ?" ಎಂದಳು. ಇದರ ಫಲಿತಾಂಶವಾಗಿ ಹಿಂದೂ, ಮುಸ್ಲಿಂ, ಪಾರ್ಸಿ ಮದುವೆ ಗಳು ನ್ಯಾಯಬದ್ಧವಲ್ಲವಾಗಿ ಇಂಡಿಯನ್ ವಧುಗಳೆಲ್ಲಾ ವೇಶ್ಯೆಯರಾದಂತಾ ಯಿತು. ಅನೇಕ ಜನ ಹೆಂಗಸರೂ ಸತ್ಯಾಗ್ರಹಿಗಳ ತಂಡವನ್ನು ಸೇರಿದರು.

ಗಾಂಧಿ ಸಮರಕ್ಕೆ ಸಿದ್ಧಪಡಿಸಿದನು. ಮೊದಲನೆಯದಾಗಿ ಒಂದು ಗುಂಪು ನೆಟಾಲಿನ "ಸಹೋದರಿಯರು" ಅಪ್ಪಣೆಯಿಲ್ಲದೆ ಟ್ರಾನ್ಸ್‌ವಾಲಿಗೂ ಟ್ರಾನ್ಸ್‌ವಾಲಿನ "ಸಹೋದರಿಯರು" ನೆಟಾಲಿಗೂ ಪ್ರವೇಶಿಸಬೇಕಾಗಿತ್ತು. ನೆಟಾಲಿನ ಸಹೋದರಿಯರು ಬಂಧಿಸಲ್ಪಟ್ಟರು; ಅಸಮಾಧಾನ ಹೊತ್ತಿ ಹೊಸಬರೆಲ್ಲಾ ಚಳುವಳಿಗೆ ಸೇರಿದರು. ಟ್ರಾನ್ಸ್‌ವಾಲಿನ ಸಹೋದರಿ ಯರನ್ನು ಬಂಧಿಸಲಿಲ್ಲ. ಮೊದಲೇ ಗೊತ್ತುಮಾಡಿಕೊಂಡಿದ್ದಂತೆ ನ್ಯೂಕಾ ಸಲಿನ ಕಲ್ಲಿದ್ದಲು ಗಣಿಗಳಿಗೆ ಹೋಗಿ ಅಲ್ಲಿಯ ಇಂಡಿಯನ್ ಕೆಲಸಗಾರ ರನ್ನು ಮುಷ್ಕರ ಹೂಡುವಂತೆ ಒತ್ತಾಯಪಡಿಸಿದರು. ಆಗ ಸರ್ಕಾರ ಆ ಹೆಂಗಸರನ್ನು ಬಂಧಿಸಿ, ಮೂರು ತಿಂಗಳು ಸಜಾ ವಿಧಿಸಿದರು. ಮುಷ್ಕರ ಹರಡಿತು. ಗಾಂಧಿ ನ್ಯೂಕ್ಯಾಸಲಿಗೆ ಹೋದನು. ಇಂಡಿಯನ್ ಮುಷ್ಕರಕಾರರಿದ್ದ ಮನೆಗಳಿಗೆ ನೀರು ದೀಪಗಳಿಲ್ಲದಂತೆ ಗಣಿಯ ಯಜ ಮಾನರು ತಡೆಗಟ್ಟಿದರು.

ಮುಷ್ಕರ ಬಹಳ ಕಾಲ ನಡೆಯಬಹುದೆಂದು ನಂಬಿ ಗಾಂಧಿ ಮುಷ್ಕರ ಕಾರರನ್ನು ಮನೆ ಬಿಟ್ಟು, ಹೊದೆಯಲು, ಉಡಲು, ಬಟ್ಟೆಗಳನ್ನು ತೆಗೆದು ಕೊಂಡು ಬಯಲಿನಲ್ಲಿ ಇರಬೇಕೆಂದು ಹೇಳಿದನು. ಕೆಲವು ದಿನಗಳಲ್ಲಿ ಸುಮಾರು ಐದು ಸಾವಿರ ಜನ ಇಂಡಿಯನ್ನರು ಬಯಲಿನಲ್ಲಿ ವಾಸಮಾಡು ತ್ತಿದ್ದರು.

ಗಾಂಧಿಗೆ ಅವರನ್ನೇನು ಮಾಡಬೇಕೆಂದು ತಿಳಿಯಲಿಲ್ಲ. ಇಷ್ಟು ಜನರಿಗೆ ಅನ್ನವಸ್ತ್ರಗಳನ್ನೆಲ್ಲಿಂದ ತರುವುದು ? ಕಡೆಗೆ ಅವರನ್ನೆಲ್ಲಾ ಟ್ರಾನ್ಸ್ ವಾಲಿಗೆ ಕರೆದೊಯ್ದು, "ಸುಖವಾಗಿ ಜೈಲಿನಲ್ಲಿ" ಇರುವಂತೆ ಮಾಡ ಬೇಕೆಂದುಕೊಂಡನು. ಹಾಗೆ ಮಾಡುವುದಕ್ಕೆ ಮೊದಲು, ಆ ಶಾಂತಿಸೈನ್ಯ

ವನ್ನು ಟ್ರಾನ್ಸ್‌ವಾಲಿಗೆ ಹೊರಡುವಮೊದಲೇ ಬಂಧಿಸಬಹುದೆಂದು ಸರ್ಕಾರಕ್ಕೆ ತಂತಿಕೊಟ್ಟನು. ಸರ್ಕಾರ ಆತನಿಗೆ ಆ ಉಪಕಾರಮಾಡಲು ಇಷ್ಟಪಡಲಿಲ್ಲ. ಒಂದು ವಾರದನಂತರ ಪ್ರಿಟೋರಿಯದಲ್ಲಿದ್ದ ಸ್ಮಟ್ಸನಿಗೆ, ಪುನಃ ತಂತಿ ಕೊಟ್ಟು, ನೆಟಾಲಿನಲ್ಲೇ ಅವರನ್ನು ಬಂಧಿಸಬಹುದೆಂದೂ, ಮೂರು ಪೌಂಡಿನ ತೆರಿಗೆಯನ್ನು ತೆಗೆದುಹಾಕಿದರೆ ಮುಷ್ಕರ ನಿಲ್ಲಿಸುವುದಾಗಿಯೂ ತಿಳಿಸಿದನು. ಸ್ಮಟ್ಸನ ಕಾರ್ಯದರ್ಶಿ, " ಜನರಲ್ ಸ್ಮಟ್ಸರಿಗೆ ನಿಮ್ಮೊಡನೆ ಸಂಬಂಧ ಬೇಕಾಗಿಲ್ಲ. ನೀವು ಇಷ್ಟ ಬಂದಹಾಗೆ ಮಾಡಬಹುದು " ಎಂದು ಹೇಳಿ ಕಳುಹಿಸಿದನು.

ನೆಟಾಲಿನಿಂದ ಟ್ರಾನ್ಸ್‌ವಾಲಿಗೆ ಹೋಗಿ, ಅಲ್ಲಿ ಆ ಸರ್ಕಾರವೂ ತನ್ನ ಸೈನ್ಯಕ್ಕೆ ಸೆರೆಮನೆಯ ಬಾಗಿಲು ತೆರೆಯದಿದ್ದರೆ, ಎಂಟು ದಿನ ಇಪ್ಪತ್ತು ಮೈಲಿಗಳಂತೆ ನಡೆದು ಟಾಲ್‌ಸ್ಟಾಯ್ ಫಾರಂ ಸೇರಬೇಕೆಂದೂ ಗಾಂಧಿ ನಿರ್ಧರಿಸಿದನು. ಆ ಏರ್ಪಾಟುಗಳನ್ನು ಮಾಡಿ, ನಿಲುಗಡೆಯ ಸ್ಥಳಗಳಲ್ಲಿ ಊಟದ ಸೌಕರ್ಯ ಮಾಡುತ್ತಿರುವಾಗ ಗಾಂಧಿ ಮುಂದೆ ಬರಬಹುದಾದ ಕಷ್ಟಗಳನ್ನೆಲ್ಲಾ ಸತ್ಯಾಗ್ರಹಿಗಳಿಗೆ ವಿವರಿಸಿ, ಧೈರ್ಯವಿಲ್ಲದವರು ಮನೆಗೆ ಹೋಗಬೇಕೆಂದು ಬೇಡಿದನು.

೧೯೧೩ರ ನವೆಂಬರ್ ೬ರ ಪ್ರಾತಃಕಾಲ ೬-೩೦ ಘಂಟೆಗೆ, ಗಾಂಧಿ ತನ್ನ ಸೈನ್ಯವನ್ನೆಣಿಸಿದನು. ೨೦೩೭ ಜನ ಗಂಡಸರು, ೧೨೭ ಜನ ಹೆಂಗಸರು, ೫೭ ಜನ ಮಕ್ಕಳು ಇದ್ದರು. " ನಾವು ಪ್ರಾರ್ಥನೆ ಮಾಡಿ ದೇವರ ಹೆಸರಿನಲ್ಲಿ ಪ್ರಯಾಣ ಹೊರಟೆವು " ಎಂದು ಗಾಂಧಿ ಬರೆದಿದ್ದಾರೆ.

ಟ್ರಾನ್ಸ್‌ವಾಲ್‌ಗಡಿಯ ಪೋಲೀಸರು, ಸತ್ಯಾಗ್ರಹಿಗಳನ್ನು ತಡೆಯದೆ ಬಿಟ್ಟರು. ಕೆಲವು ಜನ ಹೆಂಗಸರು, ಮಕ್ಕಳನ್ನು ಹೊತ್ತಿದ್ದರು. ಅನೇಕರು ಬರಿಕಾಲಿನಲ್ಲಿದ್ದರು. ತಮಿಳು, ತೆಲುಗು, ಗುಜರಾತಿ, ಹಿಂದಿ ಮೊದಲಾದ ಭಾಷೆಗಳನ್ನಾಡುತ್ತಾ ಬೇರೆ ಬೇರೆ ವೇಷಗಳನ್ನು ಧರಿಸಿದ್ದರೂ ಎಲ್ಲರಿಗೂ ಶಾಂತಿ ನಾಯಕನಲ್ಲಿ ಅಕೃತ್ರಿಮ ಭಕ್ತಿಯಿತ್ತು. ಅವನು, " ಸೆರೆಹಿಡಿದರೆ ಎದುರಿಸಬೇಡಿ. ಹೊಡೆದರೆ ತಲೆಬಾಗಿ ; ನೀತಿವಂತರಾಗಿ, ಶುಚಿಯಾಗಿರಿ " ಎಂದು ಯುದ್ಧಸಂದೇಶ ನೀಡಿದನು.

ಮೊದಲನೆಯ ದಿನ ಗಾಂಧಿ ಸೆರೆಯಾದನು. ಆದರೆ ಸತ್ಯಾಗ್ರಹಿಗಳ

ಹೊಣೆ ಆತನು ಹೊತ್ತಿದ್ದುದರಿಂದ ಜಾಮೀನಿನ ಮೇಲೆ ಬಿಡುಗಡೆ ಮಾಡಿದರು. ಮಾರನೆಯ ರಾತ್ರಿ ಪುನಃ ಸೆರೆಹಿಡಿದು, ನ್ಯಾಯಸ್ಥಾನಕ್ಕೆ ಕರೆದೊಯ್ದು ಬಿಡುಗಡೆ ಮಾಡಿದರು. ನಾಲ್ಕನೆಯ ರಾತ್ರಿ ಸೆರೆಯಾದನು. ಆತನಿಲ್ಲದೆ ಮಿಕ್ಕವರು ಟಾಲ್‌ಸ್ಟಾಯ್ ಫಾರಂಗೆ ನಡೆದರು.

ಮಾರನೆಯ ದಿನ ಅವರು ಬಾಲಫರನ್ನು ಸೇರಿದಾಗ ಎಲ್ಲರನ್ನೂ ರೈಲಿನಲ್ಲಿ ಹಾಕಿ ಪುನಃ ನೆಟಾಲಿನ ಗಣಿಗಳಿಗೆ ಸಾಗಿಸಿದರು. ಅವರನ್ನೆಲ್ಲಾ ತಂತಿಗಳಿಂದ ಸುತ್ತುವರಿಯಲ್ಪಟ್ಟ ಪ್ರದೇಶದಲ್ಲಿ ಸೇರಿಸಿ ಪೋಲೀಸು ಕಾವಲು ಹಾಕಿದರು. ಆದರೆ ಅವರು ಗಣಿಯಲ್ಲಿಳಿಯಲು ನಿರಾಕರಿಸಿದರು.

ಇವರಿಗೆ ಸಹಾನುಭೂತಿ ತೋರಲು ಬೇರೆ ಕೂಲಿಯಾಳುಗಳೂ ಕೆಲಸಬಿಟ್ಟರು. ಮುಷ್ಕರ ಹೂಡುವ ಅಧಿಕಾರವಿಲ್ಲದ ಗುಲಾಮರೆಂದು ಅವರನ್ನು ತಿಳಿದಿದ್ದ ಸರ್ಕಾರ ಅಡಗಿಸಲು ಸೈನ್ಯ ಕಳುಹಿಸಿತು. ಒಂದು ಸ್ಥಳದಲ್ಲಿ ಈ ಸೈನ್ಯ ಗುಂಡು ಹಾರಿಸಿ ಅನೇಕ ಇಂಡಿಯನ್ನರನ್ನು ಗಾಯಪಡಿಸಿ ಕೊಂದುಹಾಕಿತು.

ಐವತ್ತು ಸಾವಿರ ಜನ ಕೂಲಿಯಾಳುಗಳು ಈಗ ಮುಷ್ಕರ ಹೂಡಿದ್ದರು. ಅನೇಕ ಸಾವಿರ ಜನ ಸ್ವತಂತ್ರ ಇಂಡಿಯನ್ನರು ಸೆರೆಮನೆಯಲ್ಲಿದ್ದರು. ಈ ವಿಚಾರಗಳೆಲ್ಲಾ ತಂತಿಯ ಮೂಲಕ ತಿಳಿದು ಇಂಡಿಯಾದಲ್ಲಿ ಕೋಲಾಹಲ ಉಂಟಾಯಿತು. ಬ್ರಿಟಿಷ್ ವೈಸರಾಯಿ ಲಾರ್ಡ್ ಹಾರ್ಡಿಂಗ್ ಮದರಾಸಿನಲ್ಲಿ ಭಾಷಣ ಮಾಡುತ್ತಾ ದಕ್ಷಿಣ ಆಫ್ರಿಕದ ಸರ್ಕಾರವನ್ನು ಬಲವಾಗಿ ಟೀಕಿಸಿ, ವಿಚಾರಿಸಲು ಒಂದು ಸಮಿತಿಯನ್ನು ಕಳುಹಿಸಬೇಕೆಂದು ಹೇಳಿದನು. ಇಂಡಿಯಾ ಮತ್ತು ಲಂಡನ್, ಲಂಡನ್ ಮತ್ತು ದಕ್ಷಿಣ ಆಫ್ರಿಕಾಗಳ ನಡುವೆ ಅನೇಕ ಸಂದೇಶಗಳು ತಂತಿಯ ಮೂಲಕ ಹೋದುವು. ೧೯೧೩ರ ಡಿಸೆಂಬರ್ ಹದಿನೆಂಟರಲ್ಲಿ ಸರ್ಕಾರ ಗಾಂಧಿ, ಪೋಲಕ್ ಮತ್ತು ಕಲೆನ್‌ಬಾಕರನ್ನು ಬಿಡುಗಡೆ ಮಾಡಿತು. ಗಾಂಧಿ "ನಮಗೆಲ್ಲಾ ಬಿಡುಗಡೆ ನಿರಾಸೆಯನ್ನುಂಟುಮಾಡಿತು" ಎಂದನು. ಸರಿಯಾಗಿ ಪ್ರಾರಂಭಿಸಿದ ರಾಜಕೀಯ ಅವಿಧೇಯತೆಗೆ ನಾಯಕರ ಅಗತ್ಯವಿಲ್ಲ.

ಈ ಸಮಯದಲ್ಲಿ ದಕ್ಷಿಣ ಆಫ್ರಿಕ ಸರ್ಕಾರ ಇಂಡಿಯನ್ನರ ಕುಂದು ಕೊರತೆಗಳನ್ನು ವಿಚಾರಿಸಲು ಒಂದು ಸಮಿತಿಯನ್ನು ಏರ್ಪಡಿಸಿತು. ಗಾಂಧಿ ತಕ್ಷಣ ಅದನ್ನು " ಇಂಗ್ಲೆಂಡು ಮತ್ತು ಇಂಡಿಯದ ಜನರನ್ನೂ, ಸರ್ಕಾರವನ್ನೂ ಮೋಸಗೊಳಿಸಲು ರಚಿಸಿದ ಸಮಿತಿ " ಎಂದು ಕರೆದನು. ಸಮಿತಿಯ ಅಧ್ಯಕ್ಷ ಸರ್ ವಿಲಿಯಂ ಸಾಲೊಮನ್‌ನಲ್ಲಿ "ಪ್ರಾಮಾಣಿಕತೆ, ನಿಷ್ಪಕ್ಷಪಾತಭಾವಗಳಿದ್ದುವು. ಆದರೆ ಈವಲ್ಡ್ ಎಸ್ಸೆಲೆನ್ ಪ್ರತಿಕೂಲನಾಗಿದ್ದನು ; ಮೂರನೆಯವನಾದ ಕರ್ನಲ್ ಜೆ. ಎಸ್. ವೈಲಿ ಡರ್ಬಾನಿನಲ್ಲಿ ೧೮೯೭ರ ಜನವರಿಯಲ್ಲಿ ಎಂಟುನೂರು ಜನ ಇಂಡಿಯನ್ನರಿಂದ ಹಡಗು ಬಂದಾಗ ಗಾಂಧಿಯನ್ನು ತರಿದು ಕೊಲ್ಲಲು ಬಂದು ನಿರಾಶರಾದವರಲ್ಲೊಬ್ಬನು. ಗಾಂಧಿ ಸಮಿತಿಯಲ್ಲಿ ಇಂಡಿಯನ್ನರನ್ನೂ, ಕೆಲವು ಇಂಡಿಯನ್ ಪಕ್ಷಪಾತಿಗಳನ್ನೂ ಸೇರಿಸಬೇಕೆಂದು ಸೂಚಿಸಿದನು.

ತೊಂದರೆಗಳನ್ನು ನಿರೀಕ್ಷಿಸಿ ಗಾಂಧಿ ಯುದ್ಧಕ್ಕೆ ಅಣಿಯಾದರು. ಒಂದು ಸಾರ್ವಜನಿಕ ಸಭೆಯಲ್ಲಿ ಮೊಣಕಾಲಿನವರೆಗೂ ಬಟ್ಟೆ ಜೋಡುಗಳನ್ನು ಧರಿಸಿದ್ದರು. ಪಾಶ್ಚಾತ್ಯ ವೇಷವನ್ನು, ಮುಷ್ಕರದಲ್ಲಿ ಸತ್ತ ಗಣಿ ಕೆಲಸಗಾರರ ಶೋಕದ ಸಲುವಾಗಿ ಬಿಟ್ಟುಬಿಟ್ಟುದಾಗಿ ಹೇಳಿದರು. " ತಣ್ಣನೆಯ ಕಲ್ಲಿನ ಕೆಳಗೆ ಮಲಗಿರುವ ನಮ್ಮ ದೇಶೀಯರ ಗತಿಯನ್ನು ಹೊಂದಲು ಸಿದ್ಧರಾಗಿರುವಿರಾ ? " ಎಂದು ಕೇಳಿದನು.

ಸಭೆ, " ಹೌದು " ಎಂದು ಪ್ರತಿಜ್ಞೆಮಾಡಿತು.

" ಪ್ರತಿಯೊಬ್ಬ ಗಂಡಸೂ, ಹೆಂಗಸೂ, ಬೆಳೆದ ಮಗು, ಸಂಬಳ, ಕೆಲಸ, ಸಂಸಾರ ದೇಹಗಳನ್ನೂ ಲಕ್ಷ್ಯಮಾಡುವುದಿಲ್ಲವೆಂದು ನಂಬಿದ್ದೇನೆ." ಆತನು ಸಾಧಾರಣ ಜನರಿಂದ ಗೀತೆಯ ಸ್ವಾರ್ಥತ್ಯಾಗವನ್ನು ನಿರೀಕ್ಷಿಸಿದನು. ಅವರಿಗೆಲ್ಲಾ ಧರ್ಮದಲ್ಲಿ ವಿಶ್ವಾಸವಿದ್ದುದರಿಂದ ಆತನಿಗೆ ಅದು ದಕ್ಕಿತು. " ಈ ಹೋರಾಟ ಮಾನವ ಸ್ವಾತಂತ್ರ್ಯಕ್ಕಾಗಿ ; ಆದುದರಿಂದ ಧರ್ಮಕ್ಕಾಗಿ " ಎಂದು ಆತನು ಒತ್ತಿ ಹೇಳಿದನು.

ಸ್ಮಟ್ಸ್ ಸಮಿತಿಯನ್ನು ಬದಲಾಯಿಸುವುದಕ್ಕಾಗಲಿ, ಹೆಚ್ಚಿಸುವುದಕ್ಕಾಗಲಿ ಒಪ್ಪದಿರಲು ಗಾಂಧಿ, ತಾನೂ, ತನ್ನೊಡನೆ ಬರಲು ಬಯಸುವವರೂ ಡರ್ಬಾನಿನಿಂದ ನೆಟಾಲಿಗೆ ೧೯೧೪ನೆಯ ವರ್ಷಾರಂಭದ ದಿನ

ನಡೆದು ಸೆರೆಗೀಡಾಗುವುದಾಗಿ ಪ್ರಕಟಿಸಿದನು.

ಈ ಇಂಡಿಯನ್ ಸಾರ್ವಜನಿಕ ಪ್ರಯಾಣದ ಹೆದರಿಕೆಯಿರುವಾಗಲೇ ದಕ್ಷಿಣ ಆಫ್ರಿಕದ ರೈಲಿನ ಬಿಳಿಯ ನೌಕರರೆಲ್ಲಾ ಮುಷ್ಕರ ಹೂಡಿದರು. ಗಾಂಧಿ ತಕ್ಷಣ ತನ್ನ ಪ್ರಯಾಣವನ್ನು ನಿಲ್ಲಿಸಿದನು. ಎದುರು ಪಕ್ಷದ ದೌರ್ಬಲ್ಯದಿಂದ ಆತ್ಮ ಶಕ್ತಿ ಲಾಭ ಪಡೆಯುವುದಿಲ್ಲವೆಂದೂ, ಅಸ್ವಾಭಾವಿಕ ಸ್ನೇಹಗಳನ್ನು ಮಾಡಿಕೊಳ್ಳುವುದಿಲ್ಲವೆಂದೂ ಹೇಳಿದನು. ಸತ್ಯಾಗ್ರಹಿಗಳು ಬುದ್ಧಿ, ಸತ್ಯವನ್ನು ಅರಿಯುವಂತೆ ಮಾಡಬೇಕೆಂದೂ, ಕಷ್ಟದಿಂದಲೂ, ಪ್ರಾಮಾಣಿಕತೆಯಿಂದಲೂ, ಸಹಾನುಭೂತಿಯಿಂದಲೂ ಹೃದಯವನ್ನು ಗೆಲ್ಲಬೇಕೇ ಹೊರತು, ನೋವುಂಟುಮಾಡಿ ವೈಷಮ್ಯವನ್ನುಂಟುಮಾಡಕೂಡದೆಂದು ಹೇಳಿದನು. ಇಂಡಿಯಾದಿಂದ, ಇಂಗ್ಲೆಂಡಿನಿಂದ, ದಕ್ಷಿಣ ಆಫ್ರಿಕದಿಂದ ಗಾಂಧಿಗೆ ಅಭಿನಂದನೆಯ ಪತ್ರಗಳು ಬಂದುವು. ರೈಲ್ವೆ ಮುಷ್ಕರದ ತೊಂದರೆಯಲ್ಲಿದ್ದರೂ ಸ್ಮಟ್ಸ್ ಗಾಂಧಿಯನ್ನು ಮಾತುಕತೆಗಳಿಗಾಗಿ ಕರೆದನು. ಮೋಸಹೋಗಕೂಡದೆಂದು ಗಾಂಧಿಯನ್ನೆಚ್ಚರಿಸಿ, ಇಂಡಿಯನ್ನರು ೧೯೦೮ರಲ್ಲಿ ಮಾತಿಗೆ ತಪ್ಪಿದುದನ್ನೂ, ಗೋಖಲೆಗೆ ಕೊಟ್ಟ ಪ್ರಮಾಣ ಮುರಿದುದನ್ನೂ ನೆನಪಿಗೆ ತಂದರು. ಉತ್ತರವಾಗಿ ಆತನು "ಕ್ಷಮೆ ಶೂರರ ಆಭರಣ" ಎಂಬ ಸಂಸ್ಕೃತ ಗಾದೆಯನ್ನು ಹೇಳಿದರು. ಸ್ಮಟ್ಸ್ ಮತ್ತು ಗಾಂಧಿಯ ಮಾತುಕತೆಗಳು ಸಂಧಾನಗಳಾಗಿ ಪರಿಣಮಿಸಿದುವು. ಒಂದು ಭೇಟಿಯಲ್ಲಿ ಸ್ಮಟ್ಸ್ "ಗಾಂಧಿ, ಈ ಸಲ ನಮಗೆ ಅಪಾರ್ಥಗಳು ಬೇಡ. ಮನಸ್ಸಿನಲ್ಲಿ ಏನನ್ನೂ ಮರೆಸುವುದು ಬೇಡ. ಧಾರಾಳವಾಗಿ ಮಾತನಾಡೋಣ" ಎಂದನು. ಈ ಸ್ನೇಹ ವಾತಾವರಣದಿಂದ ನಿಧಾನವಾದರೂ ಏಕರೀತಿಯ ಪ್ರಗತಿಗೆ ದಾರಿಯಾಯಿತು. ಒಪ್ಪಂದದ ಪ್ರತಿ ಮಾತನ್ನೂ ವಿವರವಾಗಿ ಚರ್ಚಿಸಿದರು. ೧೯೧೪ರ, ೩೦ನೇ ಜೂನಿನಲ್ಲಿ, ಈ ಇಬ್ಬರು ಚತುರರೂ ಒಪ್ಪಂದದ ನಿಯಮಗಳನ್ನು ಸ್ಥಿರೀಕರಿಸುವ ಕಾಗದಗಳನ್ನು ಪರಸ್ಪರ ಕೊಟ್ಟರು. ಅದು "ಇಂಡಿಯನ್ ರಿಲೀಫ್ ಬಿಲ್" ಎಂಬ ಹೆಸರಿನಲ್ಲಿ ಕೇಪ್‌ಟೌನಿನ ಪಾರ್ಲಿಮೆಂಟಿಗೆ ಕಳುಹಿಸಲ್ಪಟ್ಟು ಜುಲೈನಲ್ಲಿ ಸ್ಮಟ್ಸ್ ಕೇಳಿಕೊಂಡಂತೆ ವಾಗ್ವಾದವಿಲ್ಲದೆ ಅಂಗೀಕರಿಸಲ್ಪಟ್ಟಿತು.

ಆ ಒಪ್ಪಂದದಿಂದ ಇಂಡಿಯನ್ ಕೂಲಿಯಾಳುಗಳಮೇಲೆ ಹಾಕಿದ್ದ ಮೂರು ಪೌಂಡು ತೆರಿಗೆ ತೆಗೆಯಲ್ಪಟ್ಟಿತು. ಹಿಂದಿನ ಬಾಕಿಯೆಲ್ಲಾ ರದ್ದಾಯಿತು; ಹಿಂದೂ, ಮುಸ್ಲಿಂ, ಮತ್ತು ಪಾರ್ಸಿ ಮದುವೆಗಳು ನ್ಯಾಯ ಬದ್ಧವಾದುವೆಂದು ನಿರ್ಧರಿಸಲ್ಪಟ್ಟಿತು. ದಕ್ಷಿಣ ಆಫ್ರಿಕದಲ್ಲಿ ಹುಟ್ಟಿದ ಇಂಡಿಯನ್ನರು ಕೇಪ್ ಕಾಲೊನಿಯನ್ನು ಪ್ರವೇಶಿಸಬಹುದಾಗಿತ್ತು ; ಆದರೆ ಬೇರೆ ಸಂಸ್ಥಾನಗಳಲ್ಲಿ ಹಾಗೆ ಸ್ವತಂತ್ರವಾಗಿ ಓಡಾಡುವ ಹಕ್ಕಿರಲಿಲ್ಲ. ೧೯೨೦ರಿಂದ ಇಂಡಿಯಾದಿಂದ ಕೂಲಿಯಾಳುಗಳನ್ನು ಕರೆತರುವ ಪದ್ಧತಿ ನಿಲ್ಲಿಸಲ್ಪಟ್ಟಿತು. ಸ್ವತಂತ್ರ ಇಂಡಿಯನ್ನರು ಮಾತ್ರ ಬರಬಹುದಾಗಿತ್ತು. ಇಂಡಿಯಾದಿಂದ ಗಂಡಂದಿರನ್ನು ಸೇರಲು ಹೆಂಗಸರು ಬರಬಹುದಾಗಿತ್ತು.

ಅನೇಕ ಅಭಿನಂದನಾ ಸಭೆಗಳಲ್ಲಿ ಗಾಂಧಿ ಈ ಕಾನೂನನ್ನು ದಕ್ಷಿಣ ಆಫ್ರಿಕಾ ಇಂಡಿಯನ್ನರ ' ಮ್ಯಾಗ್ನ ಚಾರ್ಟ ' ಎಂದು ಕರೆದನು. ಇಂಡಿಯನ್ನರು ಈಗಲೂ ತಮ್ಮ ಸಂಸ್ಥಾನಗಳಲ್ಲೇ ಹುದುಗಿರಬೇಕಾಗಿದ್ದರೂ ಟ್ರಾನ್ಸ್‌ವಾಲಿನಲ್ಲಿ ಭೂಮಿ ಪಡೆಯುವ ಅಧಿಕಾರವಿಲ್ಲದಿದ್ದರೂ, ಚಿನ್ನಕೊಳ್ಳ ಕೂಡದಾಗಿದ್ದರೂ, ಜನಾಂಗ ಸಮತೆಯನ್ನು ಸಾಧಿಸಿ ವರ್ಣದೋಷವನ್ನು ನಿರ್ಮೂಲಮಾಡಿದಂತಾಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಅದು ಆತ್ಮ ಶಕ್ತಿಯ ವಿಜಯವಾಗಿತ್ತು. ಇಂಡಿಯನ್ ಒಪಿನಿಯನ್ನಿನಲ್ಲಿ ಗಾಂಧಿ, "ಆತ್ಮಶಕ್ತಿ ಸರ್ವವ್ಯಾಪಿಯಾದರೆ, ಸಮಾಜಧ್ಯೇಯಗಳನ್ನೇ ಬದಲಾಯಿಸಿ, ಪಾಶ್ಚಾತ್ಯ ರಾಷ್ಟ್ರಗಳನ್ನು ಗೋಳಾಡಿಸುತ್ತಿರುವ ಆಧಿಪತ್ಯಗಳನ್ನೂ, ಯುದ್ಧ ಲಾಲಸೆಯನ್ನೂ ನಾಶಮಾಡುವುದು" ಎಂದು ಬರೆದನು.

೧೯೧೪ರ ೧೮ನೇ ಜುಲೈ ದಿನ ಕೆಲಸ ಮುಗಿಸಿ ಆಯಾಸವಾಗಿದ್ದರೂ ಸಂತೋಷದಿಂದ ಹೂವುಗಳ ಚಿತ್ರಗಳಿದ್ದ ಬಿಳೀ ಸೀರೆಯಲ್ಲಿ ಸುಂದರವಾಗಿ ಕಾಣುತ್ತಿದ್ದ ಹೆಂಡತಿಯೊಡನೆಯೂ, ಹರ್ಮನ್ ಕೆಲೆನ್‌ಬಾಕನೊಡನೆಯೂ, ಇಂಗ್ಲೆಂಡಿಗೆ ಹೊರಟನು. ಹೊರಡುವಮೊದಲು ಜನರಲ್ ಸ್ಮಟ್ಸನಿಗೆ, ತಾನು ಸೆರೆಮನೆಯಲ್ಲಿ ತಯಾರಿಸಿದ್ದ ಸೊಗಸಾದ ಜೋಡುಗಳನ್ನು ಬಹು ಮಾನಪೂರ್ವಕವಾಗಿ ಕಳುಹಿಸಿಕೊಟ್ಟನು. ಪ್ರಿಟೋರಿಯ ಬಳಿಯ ತನ್ನ ಫಾರಮ್ಮಿನಲ್ಲಿ ೧೯೩೯ರವರೆಗೆ ಸ್ಮಟ್ಸ್ ಅವುಗಳನ್ನು ಉಪಯೋಗಿಸುತ್ತಿದ್ದು, "ಅಂತಹ ಮಹಾತ್ಮನ ಜೋಡನ್ನು ಧರಿಸುವ ಯೋಗ್ಯತೆ ನನಗಿಲ್ಲವೆನ್ನಿಸಿದರೂ

ಇವುಗಳನ್ನು ನಾನು ಅನೇಕ ವರ್ಷ ಉಪಯೋಗಿಸಿದೆ" ಎಂದು ಬರೆದು ಸ್ನೇಹಪೂರ್ವಕವಾಗಿ ಗಾಂಧಿಗೆ ಕಳುಹಿಸಿಕೊಟ್ಟನು. ಈ ಹಾಸ್ಯಪ್ರವೃತ್ತಿ, ಔದಾರ್ಯಗಳಿಂದ ಆತನು ಗಾಂಧಿಗೆ ತಕ್ಕ ಎದುರಾಳಿಯೆನಿಸಿದನು. ಗಾಂಧಿ ಸಂಪಾದಿಸಿದ್ದು ಸ್ಮಟ್ಸನಮೇಲೆ ವಿಜಯವನ್ನಲ್ಲ ; ಅವನನ್ನೇ ಗೆದ್ದಿದ್ದನು. ಸ್ಮಟ್ಸ್ ಯುದ್ಧ ಮಾಡುವ ಶಕ್ತಿಯಿಲ್ಲದೆ ಸಮಾಧಾನ ಮಾಡಿಕೊಳ್ಳಲಿಲ್ಲ ; ಯುದ್ಧ ಮಾಡುವ ಮನಸ್ಸಿಲ್ಲದೆ ಮಾಡಿಕೊಂಡನು. ಆಗ ಸ್ಮಟ್ಸ್, "ಇಪ್ಪತ್ತು ಸಾವಿರ ಇಂಡಿಯನ್ನರನ್ನು ಸೆರೆಯಲ್ಲಿಡಲು ಸಾಧ್ಯವಿಲ್ಲ" ಎಂದನು. ಹೋರಾಟ ಮುಗಿದಾಗ ಆತನಿಗೆ ಸಂತೋಷವುಂಟಾಯಿತು. ೧೯೩೯ರಲ್ಲಿ ಗಾಂಧಿಯ ೭೦ನೇ ಹುಟ್ಟುಹಬ್ಬದ ಸ್ಮಾರಕ ಗ್ರಂಥದಲ್ಲಿ, ಅಷ್ಟು ಹೊತ್ತಿಗೆ ದೊಡ್ಡ ರಾಜಕೀಯ ವ್ಯಕ್ತಿಯೆನಿಸಿಕೊಂಡಿದ್ದ ಸ್ಮಟ್ಸ್, "ಗಾಂಧಿಯಂತಹ ವ್ಯಕ್ತಿಗಳು ನಮ್ಮನ್ನೆಲ್ಲಾ ಸಾಧಾರಣ ನಿಷ್ಪ್ರಯೋಜಕ ವಿಚಾರಗಳಿಂದ ಉದ್ಧರಿಸಿ, ಲೋಕಕಲ್ಯಾಣ ಕಾರ್ಯಗಳಲ್ಲಿ ಬೇಸರವುಂಟಾಗದಂತೆ ಪ್ರೇರಿಸುತ್ತಾರೆ. ಅಂತಹ ಮಾನಿತ ವ್ಯಕ್ತಿಯೊಡನೆ ಹೋರಾಡುವ ದುರ್ವಿಧಿ ನನಗುಂಟಾಯಿತು. ಆತನು ಹೋರಾಟದ ಹಿನ್ನೆಲೆಯಲ್ಲಿದ್ದ ಮಾನವಿಕಪ್ರಶ್ನೆ ಎಂದೂ ಮರೆಯುತ್ತಿರಲಿಲ್ಲ; ಎಂದೂ ಕೋಪದಿಂದ ಬುದ್ಧಿಗೆಟ್ಟು ದ್ವೇಷಕ್ಕೆ ಎಡೆಕೊಡುತ್ತಿರಲಿಲ್ಲ. ಆಗಲೂ, ಮುಂದೆಯೂ ಆತನ ನಡತೆ, ಶಕ್ತಿಗಳು ನಮ್ಮ ಕಾಲದ ಕಾಠಿಣ್ಯ, ಪಾಶವೀಶಕ್ತಿಗಳಿಗೆ ತೀರ ವ್ಯತಿರಿಕ್ತವಾಗಿದ್ದುವು" ಎಂದು ಬರೆದಿದ್ದಾನೆ.

ಆ ಕಾಲದ ಅನುಭವಕ್ಕಿಂತ ಇಪ್ಪತ್ತೈದು ವರ್ಷಗಳನಂತರ ಆ ವಿಚಾರ ಬರೆಯುವುದು ಸುಲಭವಾಗಿತ್ತು. ಸ್ಮಟ್ಸ್ ಮುಂದುವರಿಯುತ್ತಾ "ಆತನ ಕಾರ್ಯಗಳು ಆ ಕಾಲದಲ್ಲಿ ತುಂಬಾ ತೊಂದರೆಯನ್ನುಂಟುಮಾಡಿದುವೆಂದು ಒಪ್ಪಿಕೊಳ್ಳಬೇಕಾಗಿದೆ. ಗಾಂಧಿಯದೇ ಹೊಸ ರೀತಿಯ ಪ್ರಯೋಗ. ಬೇಕೆಂದು ಕಾನೂನು ಮುರಿದು ತನ್ನ ಜನರನ್ನು ದಂಗೆಯನ್ನೆಬ್ಬಿಸುತ್ತಿದ್ದನು. ಇವರಲ್ಲನೇಕರು ಸೆರೆಮನೆ ಸೇರಿದರು. ಗಾಂಧಿ ಕೂಡ ಸೆರೆಮನೆಯಲ್ಲಿ ಕೆಲವು ಕಾಲ ಶಾಂತವಾದ ವಿಶ್ರಾಂತಿ ಪಡೆದನು. ಅದು ಆತನಿಗೂ ಇಷ್ಟವಾಗಿದ್ದಿರಬೇಕು. ಆತನು ಆಲೋಚಿಸಿದಂತೆಯೇ ಎಲ್ಲವೂ ನಡೆಯಿತು. ಕಾನೂನು ರಕ್ಷಿಸಬೇಕಾಗಿದ್ದ ನನಗೆ, ಕಷ್ಟಸಂದರ್ಭವಾಗಿತ್ತು. ಜನರಿಗಿಷ್ಟ

ವಿಲ್ಲದ ಕಾನೂನನ್ನು ಸಾಧಿಸಬೇಕಾಗಿತ್ತು. ಕಡೆಗೆ ಆ ಕಾನೂನು ರದ್ದಾದ ಅವಮಾನವನ್ನೂ ಅನುಭವಿಸಬೇಕಾಯಿತು", ಎಂದು ಬರೆದಿದ್ದಾನೆ.

೧೯೧೪ ರ ದಕ್ಷಿಣ ಆಫ್ರಿಕದ ವಿಜಯಕ್ಕೆ ಮೂರು ಜನ ಕಾರಣ ರಾಗಿದ್ದರು ; ಮೊದಲನೆಯದಾಗಿ ಗಾಂಧಿ. ಹಿಬರ್ಟ್‌ಜರ್ನಲಿನಲ್ಲಿ ಗಾಂಧಿಯನ್ನು ಮನ್ನಿಸುತ್ತಾ ಆಕ್ಸ್‌ಫರ್ಡಿನ ಪ್ರೊಫೆಸರ್ ಗಿಲ್ಬರ್ಟ್ ಮರೇ, "ಇಂದ್ರಿಯ ಸುಖಗಳ ಆಸೆ, ಸುಖ, ಮೆಚ್ಚಿಕೆ ಮುಂತಾದುವುಗಳನ್ನು ಪರಿಗಣಿಸದೆ, ತನಗೆ ಸರಿಯೆಂದು ತೋರಿದುದನ್ನು ಸಾಧಿಸುವ ವ್ಯಕ್ತಿಯೊಡನೆ ಜಾಗರೂಕತೆಯಿಂದ ವರ್ತಿಸಿ. ನೀವು ಜಯಿಸಬಹುದಾದ ದೇಹದಿಂದ, ಆತನ ಆತ್ಮ ವಿಜಯಕ್ಕೆ ಏನೂ ಸಹಾಯವಿಲ್ಲದುದರಿಂದ ಆತನು ಅಪಾಯಕರನಾದ ಶತ್ರು" ಎಂದು ಬರೆದರು. ಅದೇ ಆ ವಿಜಯದಲ್ಲಿ ಗಾಂಧಿಯ ಪಾತ್ರ. ಎರಡನೆಯದಾಗಿ ಇಂಡಿಯಾ ಸತ್ಯಾಗ್ರಹಿಗಳು. ಅವರು, ಗಾಂಧಿ ಇಂಡಿಯಾದಲ್ಲಿ ಒಂದು ಕ್ರಿಶ್ಚಿಯನ್ ಸಭೆಯಲ್ಲಿ ಓದಿದ್ದ ಷೆಲ್ಲಿ ಕವಿಯ ಪದ್ಯದ ಅತಿಮಾನುಷ ವ್ಯಕ್ತಿಗಳನ್ನು ನೆನಪಿಗೆ ತರುತ್ತಿದ್ದರು. "ಅಗಾಧ ನಿಶ್ಶಬ್ದ ಅರಣ್ಯದಂತೆ, ಕೈಕಟ್ಟಿ, ವಿಜಯ ದೃಷ್ಟಿಯೊಡನೆ, ಶಾಂತರಾಗಿ ಸ್ಥೈರ್ಯದಿಂದ ನಿಲ್ಲಿ........ಆಗ ಧೈರ್ಯವಿದ್ದರೆ ಪೀಡಕರು ನಿಮ್ಮ ನಡುವೆ ಬಂದು ಕಡಿದು ಕೊಚ್ಚಲಿ; ಬೇಕಾದ್ದು ಮಾಡಲಿ; ಕೈಕಟ್ಟಿ ಸ್ಥಿರ ದೃಷ್ಟಿಯಿಂದ ಹೆದರದೆ, ಬೆಚ್ಚದೆ ಅವರ ಕೋಪವಿಂಗುವವರೆಗೂ ಅವರ ಕೊಲೆಯನ್ನು ನೋಡುತಿರಿ."

ಮೂರನೆಯವನೇ ಸ್ಮಟ್ಸ್. ನಿರಂಕುಶಾಧಿಕಾರಿ; ಇಪ್ಪತ್ತು ಸಾವಿರ ಇಂಡಿಯನ್ನರನ್ನು ಸೆರೆಯಲ್ಲಿಡುವುದಕ್ಕಾಗಲಿ, ಗುಂಡಿಟ್ಟು ಕೊಲ್ಲುವುದಕ್ಕಾಗಲೀ, ಗಾಂಧಿಯನ್ನು ಸೆರೆಯಲ್ಲಿಟ್ಟು ಕೊಲ್ಲುವುದಕ್ಕಾಗಲೀ ಹಿಂಜರಿಯುತ್ತಿರಲಿಲ್ಲ. ಪ್ರಜಾಪ್ರಭುತ್ವವಿಲ್ಲದೆ ಗಾಂಧಿಯಿಲ್ಲ. ಆತನನ್ನು ನಾಶಮಾಡದಿದ್ದುದರಿಂದ ಸ್ಮಟ್ಸ್ ಗಾಂಧಿಯ ಸೃಷ್ಟಿಗೆ ಸಹಾಯಕನಾದನು. ಸ್ಮಟ್ಸ್‌ನಿಂದ ಗಾಂಧಿಯ ನಿಲುವು ಹೆಚ್ಚಿತು.

# ಇಂಡಿಯಾದಲ್ಲಿ ಗಾಂಧಿ

**(೧೯೧೫ ರ ಜನವರಿ ೯ ರಿಂದ ೧೯೪೬ ರ ಮಾರ್ಚ್ ೨೩)**

## ೧೦. ತೆರೆದ ಕಿವಿ, ಬಾಯಿ

ಇಂಡಿಯಾದಲ್ಲಿ ಗಾಂಧಿಯ ಆಧ್ಯಾತ್ಮಿಕ ಪ್ರವೃತ್ತಿಗೆ ಬೇಗ ಮನ್ನಣೆ ದೊರಕಿತು. ೧೯೧೫ ರ ಜನವರಿಯಲ್ಲಿ ಆತನು ಹಿಂದಿರುಗಿದಾಗ ಸಭಿಕರು "ಮಹಾತ್ಮಾ, ಮಹಾತ್ಮಾಜಿ" ಎಂದು ಅರಚುತ್ತಿದ್ದರು. ಕೆಲವು ಕಾಲದ ಮೇಲೆ, ೧೯೧೩ ರಲ್ಲಿ ಸಾಹಿತ್ಯಕ್ಕಾಗಿ ನೊಬೆಲ್ ಬಹುಮಾನಗಳಿಸಿದ ರವೀಂದ್ರನಾಥ ಠಾಕೂರರು ಆತನನ್ನು ಮಹಾತ್ಮ ಎಂದು ಕರೆದರು. "ರೈತನ ವೇಷದಲ್ಲಿರುವ ಮಹಾತ್ಮ" ಎಂದು ಆ ಕವಿ ಬರೆಯಲು ಆ ರಾಜಕೀಯ ಸಂತನ ತಲೆಯ ಮೇಲೆ ಆ ಕಿರೀಟ ಚಿರಕಾಲ ನಿಂತಿತು.

೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ಇಂಡಿಯದ ಮಹಾ ವ್ಯಕ್ತಿಗಳು ಠಾಕೂರರು, ಗಾಂಧಿ. ಅವರಿಗೆ ಪರಸ್ಪರ ಗೌರವವಿತ್ತು. ಗಾಂಧಿಯಂತೆ ಠಾಕೂರರು, "ಸದಾಕಾಲವೂ ಬೇರೆಯವರು ಬಿಸಾಡಿದ ಅನ್ನಕ್ಕಾಗಿ ಬಾಯಿಬಿಡುವ" ಇಂಡಿಯಾವನ್ನು ನೋಡಿ ಮರುಗಿದರು. ಮಹಾತ್ಮನಂತೆ ಆತನೂ ಜಗತ್ತಿನ ಐಕ್ಯತೆಗಾಗಿ ದೇವರಲ್ಲಿ ಮೊರೆಯಿಟ್ಟನು. ಅವರಿಬ್ಬರೂ ದೇಶಪ್ರೇಮಿಗಳಾದರೂ, ಅಂತರ್ರಾಷ್ಟ್ರೀಯತೆಯಲ್ಲಿ ವಿಶ್ವಾಸವಿಟ್ಟವರು; ಅವರ ಭಾವಗಳು ಒಂದೇ; ಕಡೆಯವರೆಗೂ ಆತ್ಮ ಪ್ರಪಂಚದಲ್ಲಿ ಒಂದಾಗಿದ್ದರು ಆದರೂ ಇಬ್ಬರ ಭಾವನೆಗಳಲ್ಲೂ ವ್ಯತ್ಯಾಸವಿದ್ದು ಆಗಾಗ ವಾಗ್ಯುದ್ಧಗಳನ್ನು ನಡೆಸುತ್ತಿದ್ದರು. ಗಾಂಧಿಯದು ಹಿಡಿತದ ಸ್ವಾಭಾವ; ಠಾಕೂರ್ ಧಾರಾಳಿ, ಗಾಂಧಿ ತಲೆ, ಮುಖಗಳನ್ನು ಬೋಳಿಸಿಕೊಂಡ ಕೃಶನಾದ ಸನ್ಯಾಸಿ; ಠಾಕೂರ್ ಸೊಂಪು ಕೂದಲಿನ, ಬಿಳಿ ಗಡ್ಡದ, ಸುಂದರ ಮುಖದ ಸಂಪದ್ಯುಕ್ತ ಕಲಾವಿದ. ಗಾಂಧಿ ಬತ್ತದ ಪೈರಾದರೆ, ಠಾಕೂರ್ ಹೂದೋಟ; ಗಾಂಧಿ ನಾಯಕರಾದರೆ ಠಾಕೂರ್ ಭವಿಷ್ಯವಾದಿ; ಗಾಂಧಿ ಕೆಲಸ ಮಾಡುವ ಕೈಯ್ಯಾದರೆ ಠಾಕೂರ್ ಹಾಡುವ ಕಂಠ; ಗಾಂಧಿ, ಹತ್ತು ಸಾವಿರ ಜನ ಗಾಡಿಗಳೊಡನೆ ತಾಪತ್ರಯಗಳೊಡನೆ ಚಿಂತೆಗಳೊಡನೆ ತಿರುಗುತ್ತಿರುವ

ಮೂರುಕಟ್ಟೆಯಲ್ಲಿ ಕುಳಿತಿದ್ದರೂ ಮೌನವಾಗಿ ಮನಸ್ಸಿನಲ್ಲಿ ಶಾಂತಿಯನ್ನನು ಭವಿಸುತ್ತಿದ್ದನು. ಆತನನ್ನು ಬೆಟ್ಟದಮೇಲೆ ದಂತದ ಕೋಟೆಯಲ್ಲಿ ಕೂಡಿಸಿದ್ದರೆ ಉಸಿರು ಕಟ್ಟಿಸಾಯುತ್ತಿದ್ದನು. ಠಾಕೂರ್ " ನಾನೊಂದು ಗೀತವನ್ನು ಕೇಳಿದರೆ, ಆ ಗಾನವನ್ನು ನನ್ನ ಸಿತಾರ್ ಹಿಡಿಯಬಲ್ಲುದು, ಮೇಳದೊಡನೆ ನನ್ನ ದನಿ ಕೂಡಿಸಬಲ್ಲೆ; ನಾನೊಬ್ಬ ಗಾಯಕ. ಆದರೆ ಗುಂಪಿನ ಗಲಾಟೆಯಲ್ಲಿ ನನ್ನ ತಲೆ ತಿರುಗುತ್ತೆ. ನನ್ನ ಧ್ವನಿ ಹಿಂಗುತ್ತೆ", ಎಂದನು. ಗಾಂಧಿ, ಠಾಕೂರನಿಗೆ. "ನೊಂದ ಸಹಸ್ರಾರು ಜೀವಿಗಳಿಗೆ ಬೇಕಾಗಿರುವುದು ಒಂದೇ ಆಹಾರ; ಶಕ್ತಿದಾಯಕವಾದ ಆಹಾರ", ಎಂದನು. ಠಾಕೂರರು ಅವರಿಗೆ ಸಂಗೀತ ಕೊಟ್ಟರು. ಶಾಂತಿನಿಕೇತನದಲ್ಲಿ ಠಾಕೂರರ ಶಿಷ್ಯರು ಹಾಡಿ ಕುಣಿದರು; ಪುಷ್ಪಮಾಲೆಗಳನ್ನು ಕಟ್ಟಿದರು; ಜೀವನವನ್ನು ಸೌಂದರ್ಯದಿಂದ ತುಂಬಿದರು. ಗಾಂಧಿ, ಅಲ್ಲಿಗೊಂದು ಬಾರಿ ಹೋದಾಗ, ಅಲ್ಲಿದ್ದ ಅಧ್ಯಾಪಕರನ್ನೂ, ಶಿಷ್ಯರನ್ನೂ ಅಡಿಗೆ ಮಾಡಲು, ಕಸ ತೆಗೆಯಲು, ಕಕ್ಕಸು ಶುದ್ಧಿಮಾಡಲು ಹೇಳಿದನು. ಠಾಕೂರರೂ ಒಪ್ಪಿ, "ಈ ಪ್ರಯೋಗದಲ್ಲಿ ,ಸ್ವರಾಜ್ಯದ ಬೀಗದ ಕೈ ಅಡಗಿದೆ", ಎಂದರು. ಗಾಂಧಿ ಅಲ್ಲಿಂದ ಹೊರಟ ಕೂಡಲೇ ಪ್ರಯೋಗ ನಿಂತಿತು. ಇಂಡಿಯಾದಲ್ಲಿ ಭಾಷಾವ್ಯತ್ಯಾಸಗಳಿಂದಲೂ, ಪ್ರಯಾಣದ ಅನಾನುಕೂಲತೆಯಿಂದಲೂ, ಪ್ರಾಂತ್ಯಗಳಿಗೆ ಹೆಚ್ಚು ಪ್ರಾಶಸ್ತ್ಯವಿದೆ. ಅವರಿಬ್ಬರಲ್ಲಿದ್ದ ಭೇದ, ಸಂಪರ್ಕ ದೂರವಾದ ಕಾಥೇವಾಡಕ್ಕೂ, ವಿಶಾಲ ಬಂಗಾಳಕ್ಕೂ ಇದ್ದ ವ್ಯತ್ಯಾಸವೆನ್ನಬಹುದು. ಠಾಕೂರರು ಆಧುನಿಕ ಪ್ರಪಂಚದಲ್ಲಿ ಪಾಶ್ಚಾತ್ಯ ಸಂಸ್ಕೃತಿ ಯಂತ್ರಗಳನ್ನೂ ಒಪ್ಪಿ ಮತ ಬಂಧನದಿಂದ ಮುಕ್ತರಾಗಿದ್ದರು. ಗಾಂಧಿಗೆ ಹಿಂದೂ ಧರ್ಮ ರಕ್ತಗತವಾಗಿದ್ದು ಇಂಡಿಯದ ಪುರಾತನ ಸಂಸ್ಕೃತಿ ಸ್ಫೂರ್ತಿ ದಾಯಕವಾಗಿದ್ದು, ದೇವರು ಸದಾ ಒಡನಾಡಿಯಾಗಿದ್ದನು. ಆತನು ಬುದ್ಧನಂತೆ ಹಿಂದೂ ಧರ್ಮ ಸುಧಾರಕನಾಗಿದ್ದನು. ಆತ ಹಿಂದೂ ಧರ್ಮಕ್ಕೆ ಸೇರಿದ್ದರೂ ಅದರ ಅನಿಷ್ಟಗಳನ್ನು ಖಂಡಿಸುತ್ತಿದ್ದನು. ಪಾಶ್ಚಾತ್ಯ ಸಂಸ್ಕೃತಿಯ ಫಲವೂ, ವಿಮರ್ಶಕನೂ ಆಗಿದ್ದನು. ಪಾಶ್ಚಾತ್ಯ ದೇಶಗಳಲ್ಲಿ ಅಭಿಮಾನವಿದ್ದರೂ, ಇಂಡಿಯಾದ ಮೇಲೆ ಅವು ಪ್ರಭಾವ ಬೀರಕೂಡದೆಂದು ಹೊಡೆದಾಡಿದನು; ತನ್ನ ದೇಶದಮೇಲೆ ಪ್ರೇಮವಿದ್ದರೂ ಅದರ ಕೊರತೆಗಳನ್ನು

ಕಟುವಾಗಿ ಖಂಡಿಸಿದನು. ಯೂರೋಪಿನ ಹತ್ತೊಂಬತ್ತನೆಯ ಶತಮಾನದ ವೈಯಕ್ತಿಕ ದೇಶೀಯತೆಗಳಲ್ಲಿ ಒಂದು ಕಾಲನ್ನೂ, ಹಿಂದೂಸ್ಥಾನದ ಪುರಾತನ ವೈಭವ ಕಾಲವಲ್ಲಿ ಮತ್ತೊಂದು ಕಾಲನ್ನೂ ಇಟ್ಟು ನಿಂತಿದ್ದನೆಂದು ಹೇಳಬಹುದು. ಆ ಎರಡು ಪ್ರವಾಹಗಳೂ ಆತನಲ್ಲಿ ಸೇರಿರಲು ಇಂಡಿಯಾ ಸ್ವಾತಂತ್ರ್ಯ ಚಳುವಳಿಯಲ್ಲೂ ಅವೆರಡನ್ನೂ ಸೇರಿಸಲು ಪ್ರಯತ್ನಪಟ್ಟನು. ಪಾಶ್ಚಾತ್ಯರಲ್ಲಿ ಅತ್ಯುತ್ತಮರಾದ ಥೋರೋ, ಎಮರ್ಸನ್, ರಸ್ಕಿನ್, ಮ್ಯಾಜಿನಿ ಮತ್ತು ಸಮಾನವಾದಿಗಳ ಧ್ಯೇಯಗಳ ಕಡೆ ತಿರುಗಿಸಲು ಪ್ರಯತ್ನಿಸಿದನು. ಅವರಿಂದ ಮನುಷ್ಯರನ್ನು ಯಂತ್ರಗಳಿಂದ ಉದ್ಧರಿಸುವ ಅಭಿಪ್ರಾಯವನ್ನು ತೆಗೆದುಕೊಂಡು ಅದನ್ನು ಹಿಂದೂ ಧರ್ಮದ ಬೇರುಗಳೊಡನೆ ಸೇರಿಸಿದನು. ಅವರಿಂದಲೇ ಸಮಾಜದಿಂದ ವ್ಯಕ್ತಿಯನ್ನು ರಕ್ಷಿಸಬೇಕೆಂಬ ಅಭಿಪ್ರಾಯವನ್ನು ತೆಗೆದುಕೊಂಡನು. ಆದರೆ ಇದಕ್ಕೆ ಇಂಡಿಯಾ ದೇಶದ ಸಾಮಾಜಿಕ ಪದ್ಧತಿಗಳಲ್ಲಿ ಸ್ಥಳವಿರಲಿಲ್ಲ.

ಗಾಂಧಿಗೆ ಬೇಕಾಗಿದ್ದುದು ಇಂದೇ ಒಬ್ಬ ಹೊಸ ಇಂಡಿಯಾ ದೇಶೀಯ ; ನಾಳಿನ ಸ್ವತಂತ್ರ ಇಂಡಿಯಾ ಅಲ್ಲ. ಇಂಡಿಯಾ ದೇಶದ ನಿಜವಾದ ಸ್ವಾತಂತ್ರ್ಯವೆಂದರೆ, ಹೊಸ, ಸ್ವತಂತ್ರ, ಇಂಡಿಯಾದ ವ್ಯಕ್ತಿಯೆಂದು ಆತನ ಭಾವನೆ. ಠಾಕೂರರಂತೆ ಆತನೂ ಇಂಡಿಯಾದ ಸಂಕೋಲೆಗಳು ಸ್ವಯಂಕೃತವಾದುವೆಂದು ನಂಬಿದ್ದನು. ಠಾಕೂರರು, "ಸೆರೆಯಾಳೇ, ಈ ಅಭೇದ್ಯ ಸಂಕೋಲೆಗಳನ್ನು ತಂದವರಾರು ? ಸೆರೆಯಾಳು—ನಾನಾ ಜಾಗರೂಕತೆಯಿಂದ ಈ ಸಂಕೋಲೆಯನ್ನು ಸಿದ್ಧಪಡಿಸಿದೆ" ಎಂದು ಬರೆದರು.

ಇಂಡಿಯಾದ ಸ್ವಾತಂತ್ರ್ಯ ವಿಚಾರವಾದ ಸಾಂಪ್ರದಾಯಿಕವಲ್ಲದ ಭಾವನೆಗಳು ಗಾಂಧಿಗೆ ತನ್ನ ವ್ಯಕ್ತಿತ್ವದಿಂದಲೇ ಉದ್ಭವಿಸಿದುವು. ಇಂಡಿಯಾದಲ್ಲಿ ಹೆಚ್ಚು ಅನುಭವವುಂಟಾಗುವ ಮೊದಲೇ ಅವೇನೆಂದು ವಿವರಿಸಿದ್ದರು. ಹಿಂದ್ ಸ್ವರಾಜ್, ಅಥವಾ ಇಂಡಿಯಾದ ಸ್ವಾತಂತ್ರ್ಯ ಎಂಬ ಪುಸ್ತಕವನ್ನು ೧೯೦೯ರಲ್ಲಿ ಇಂಗ್ಲೆಂಡಿನಿಂದ ಹಿಂದಿರುಗುವಾಗ ಬಲಗೈ ಎಡಗೈಗಳಿಂದ ಬರೆದು ಈ ಅಭಿಪ್ರಾಯಗಳನ್ನು ವಿವರಿಸಿದ್ದಾರೆ. ಬದಲಾಯಿಸದೆ ಅದನ್ನು ೧೯೨೧ರಲ್ಲಿ ಪುನರ್ಮುದ್ರಣಮಾಡಿ, ೧೯೩೮ರ ಪ್ರತಿಯ

ಮುನ್ನುಡಿಯಲ್ಲಿ "ಇದರಲ್ಲಿರುವ ಅಭಿಪ್ರಾಯಗಳನ್ನು ಬದಲಾಯಿಸ ಬೇಕಾದ ಆವಶ್ಯಕತೆ ನನಗೆ ತೋರಲಿಲ್ಲ" ಎಂದು ಬರೆದಿದ್ದಾರೆ. ಈ ಎಪ್ಪತ್ತೈದು ಪುಟದ ಪುಸ್ತಕ ಆತನ ಧರ್ಮಗ್ರಂಥವಾಗಿದೆ.

ಗಾಂಧಿ "ಕೆಲವು ಜನ ಇಂಗ್ಲಿಷರು ಕತ್ತಿಯಿಂದ ತಾವು ಇಂಡಿಯಾ ವನ್ನು ಜಯಿಸಿದುದಾಗಿ ಹೇಳುತ್ತಾರೆ. ಇದು ನಿಜವಲ್ಲ, ಕತ್ತಿ ಇಂಡಿಯಾ ವನ್ನು ಹಿಡಿಯಲಾರದು. ಅವರಿರುವುದು ನಮ್ಮಿಂದಲೇ....ನಮಗೆ ಅವರ ವ್ಯಾಪಾರ ಬೇಕು; ಅವರು ನಮ್ಮ ಮನಸ್ಸನ್ನಪಹರಿಸಿ ಬೇಕಾದುದನ್ನು ಪಡೆಯುತ್ತಾರೆ. ನಾವು ಒಳಜಗಳಗಳಿಂದ ಅವರ ಹಿಡಿತವನ್ನು ಬಿಗಿ ಮಾಡುತ್ತೇವೆ" ಎಂದು ಬರೆದರು.

ತನ್ನ ಪ್ರಯತ್ನ ಯಾವ ಧ್ಯೇಯಗಳಿಂದ ನಡೆಸಲ್ಪಡುವುದೆಂದು ವಿವ ರಿಸಿದರು. "ನಾವು ನ್ಯಾಯದಿಂದ ನಡೆದರೆ ಇಂಡಿಯಾ ಬೇಗ ಸ್ವತಂತ್ರ ವಾಗುತ್ತದೆ. ನಾವು ಇಂಗ್ಲಿಷರನ್ನು ಶತ್ರುಗಳೆಂದು ದೂರಮಾಡಿದರೆ ಸ್ವಾತಂತ್ರ್ಯ ನಿಧಾನವಾಗುತ್ತದೆ. ಅವರೊಡನೆ ನ್ಯಾಯದಿಂದ ನಡೆದು ಕೊಂಡರೆ ಅವರೇ ಬೆಂಬಲ ಕೊಡುತ್ತಾರೆ" ಆತನು ಬ್ರಿಟಿಷರನ್ನು ಆಕ್ಷೇ ಪಿಸಲಿಲ್ಲ; ದೂಷಿಸಲಿಲ್ಲ; ಆದರೂ ಸ್ವತಂತ್ರ ಭಾರತ ಬ್ರಿಟಿಷ್ ಇಂಡಿಯಾ ದಂತಿರಕೂಡದೆಂದು ಆಶಿಸಿದರು. ಕೆಲವರು ಇಂಡಿಯಾ ಸ್ವತಂತ್ರವಾದ ಮೇಲೆ ಜಪಾನಿನಂತೆ, "ನಮ್ಮದೇ ನೌಕಾ ಸೈನ್ಯ, ಸೈನ್ಯ ಸಂಪತ್ತು" ಗಳಿಂದ ಕೂಡಿರಬೇಕೆಂದೂ, ಹಾಗಾದರೆ ಜಗತ್ತಿನಲ್ಲಿ ಇಂಡಿಯಾದ ಧ್ವನಿ ಮೊಳಗು ವುದೆಂದೂ ವಾದಿಸಿದರು. ಗಾಂಧಿ "ಅದು ಇಂಗ್ಲಿಷರು ಇಲ್ಲದ ಇಂಗ್ಲಿಷ್ ಸರ್ಕಾರ. ನಿಮಗೆ ಹುಲಿಯಿಲ್ಲದೆ ಅದರ ಸ್ವಭಾವ ಬೇಕಾಗಿದೆ. ಇಂಡಿಯಾ ವನ್ನು ಇಂಗ್ಲೆಂಡಾಗಿ ಮಾರ್ಪಡಿಸಬೇಕೆನ್ನುತ್ತೀರಿ. ಇದು ನನ್ನ ಆಸೆಯ ಸ್ವರಾಜ್ಯವಲ್ಲ" ಎಂದರು.

ಲಂಡನ್ನಿನಲ್ಲಿ ಅವರು ಕಲೆತು ಮಾತನಾಡಿದ ಇಂಡಿಯಾ ದೇಶೀಯ ವಾದಿಗಳು, ಆತನಿಗೆ ಸ್ವತಂತ್ರ ಭಾರತದ ನೈತಿಕ ಸಾಮಾಜಿಕ ಭವಿಷ್ಯ ದಲ್ಲಿದ್ದ ಕುತೂಹಲವನ್ನು ಅಲ್ಲಗಳೆದರು. ಇಟಲಿಯ ಹೊರದೇಶದ ಯಜ ಮಾನರನ್ನು ಓಡಿಸಿದ ಮ್ಯಾಜಿನಿ, ಗಾರಿಬಾಲ್ಡಿಯಂತೆ ಬ್ರಿಟಿಷರನ್ನು ಇಂಡಿಯಾದಿಂದ ಓಡಿಸುವುದೊಂದೇ ಅವರ ಉದ್ದಿಶ್ಯವಾಗಿತ್ತು. ಗಾಂಧಿ

ಒಪ್ಪಲಿಲ್ಲ. "ಇಟಾಲಿಯನ್ನರ ಆಡಳಿತದಿಂದ ಇಟಲಿ ಸುಖವಾಗಿರುವು ದೆಂದು ನೀವು ತಿಳಿದಿದ್ದರೆ ಅದು ತಪ್ಪು. ಮ್ಯಾಜಿನಿಯ ಅಭಿಪ್ರಾಯದಲ್ಲಿ ಸ್ವಾತಂತ್ರ್ಯವೆಂದರೆ ಇಟಲಿಯ ಜನಾಂಗ; ರೈತರು. ಮ್ಯಾಜಿನಿಯ ಇಟಲಿ ಇನ್ನೂ ಸ್ವತಂತ್ರವಾಗಿಲ್ಲ." ಮದರಾಸಿನ ಗವರ್ನರಾಗಿದ್ದ ಲಾರ್ಡ್ ಆಂಪ್ಟ್‌ಹಿಲ್‌ಗೆ ೧೯೦೯ರ ಅಕ್ಟೋಬರ್ ೯ ರಲ್ಲಿ ಬರೆಯುತ್ತಾ "ನನಗೆ ಆಳರಸರು ಯಾರೆಂಬುದರಲ್ಲಿ ಕುತೂಹಲವಿಲ್ಲ" ಎಂದರು. ಆತನು ಹೇಗೆ ಆಳುವನೆಂಬುದು ಮುಖ್ಯ. ಇಂಡಿಯದ ಅರಸರು ಬ್ರಿಟಿಷ್ ಅರಸರಿಗಿಂತ ಮೇಲಾಗಿರದಿರಬಹುದು. ಇಂಡಿಯಗಾ ಕೋಟ್ಯಾಧೀಶ್ವರ, ಅಮೆರಿಕ ಕೋಟ್ಯಾಧೀಶ್ವರನಿಗಿಂತ ಮೇಲಾಗಿರದೆ ಇರಬಹುದು. ರಾಜಕೀಯ ಸ್ವಾತಂತ್ರ್ಯದಾಚೆ, ಸಾಮಾಜಿಕ ಸ್ವಾತಂತ್ರ್ಯದ ಕಡೆ ಗಾಂಧಿಯ ದೃಷ್ಟಿ ಯಿತ್ತು. ಸ್ವಾತಂತ್ರ್ಯ ಬರುವ ಮೂವತ್ತೆಂಟು ವರ್ಷಗಳ ಮೊದಲೇ ಈ ಭವಿಷ್ಯವಾದಿಯ ದೃಷ್ಟಿ, ಈಗ ಸ್ವತಂತ್ರ ಭಾರತವನ್ನು ತಿನ್ನುತ್ತಿರುವ ಸಮಸ್ಯೆಗಳನ್ನು ಕಂಡಿತ್ತು. ಆಳರಸರ ದೇಶ ಯಾವುದೆಂಬ ಚಿಂತೆ ಆತನಿಗಿರ ಲಿಲ್ಲ. ಆತನ ದೃಷ್ಟಿ ಅವರ ರೀತಿ ನೀತಿಗಳ ಕಡೆಯಿತ್ತು. ಸ್ವಾತಂತ್ರ್ಯದ ತಿರುಳಿನ ಈ ಆಲೋಚನೆ, ಧ್ವಜ, ಕೋಟೆಗಳ ಹಿಂದಿನ ಸತ್ಯದ ಕಡೆಗೆ ಇದ್ದ ಈ ದೃಷ್ಟಿ ೧೯೧೫ ರಿಂದ ೧೯೪೮ರ ೩೦ನೇ ಜನವರಿಯವರೆಗಿನ ಆತನ ಪ್ರಯತ್ನಗಳನ್ನು ರೂಪಿಸಿದುವು. ಬ್ರಿಟಿಷರನ್ನು ಓಡಿಸುವ ಕೆಲಸ ಬಿಟ್ಟು ಒಂದು ಧ್ಯೇಯದ ಬೆನ್ನು ಹತ್ತಿಹೋದ ಅನೇಕ ದೃಷ್ಟಾಂತಗಳಿಗೆ ಇದು ವಿವರಣೆ ಕೊಡಬಲ್ಲುದು.

ಇಂಡಿಯಾದಲ್ಲಿ ಮೊದಲ ವರ್ಷಗಳಲ್ಲಿ ಗಾಂಧಿ ಈ ಅಭಿಪ್ರಾಯ ಗಳನ್ನು ಪ್ರಚಾರ ಮಾಡಿದನು. ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಅಧ್ಯಕ್ಷ ಜಿ. ಕೆ. ಗೋಖಲೆ, "ಕಿವಿ ತೆರೆದು, ಬಾಯಿಮುಚ್ಚಿ" ಕೊಂಡು ಆ ವರ್ಷ ಕಳೆಯಬೇಕೆಂದು ಗಾಂಧಿಗೆ ಆಜ್ಞೆ ಮಾಡಿದ್ದನು. ದೇಶೀಯರು ಕೃತಜ್ಞತೆಯಿಂದ ದಕ್ಷಿಣ ಆಫ್ರಿಕದಲ್ಲಿ ಗಾಂಧಿ ಮಾಡಿದ ಕೆಲಸ ಗಳನ್ನು ಸಭೆಗಳಲ್ಲಿ ಸ್ಮರಿಸಿದಾಗ ಸಹಜವಾಗಿ ಗಾಂಧಿ ಮಾತನಾಡಿದನು; ಮೆಲ್ಲಗೆ ಮಾತನಾಡಿದನು. ಕೆಲವರಿಗೆ ನಿರಾಸೆಯಾಯಿತು. ಅವರು ಸ್ಮಟ್ಸನನ್ನು ಸೋಲಿಸಿದ ಅತಿಮಾನುಷ ವ್ಯಕ್ತಿಯನ್ನು ನಿರೀಕ್ಷಿಸಿದ್ದರು.

ಬದಲಾಗಿ, ದೊಡ್ಡ ರುಮಾಲಿನ, ದಟ್ಟಿ ಪಂಚೆಯ, ಕೇಳಿಸಿಯೂ ಕ ದಂತೆ ಮಾತನಾಡುವ ಕೃಶನಾದ ವ್ಯಕ್ತಿ ವಿಚಿತ್ರವಾಗಿ ಮಾತನಾ ದ್ದನು. ಆ ವರ್ಷ ತೆಗೆದ ಒಂದು ಛಾಯಾ ಚಿತ್ರದಲ್ಲಿ ಪದ್ಮಾಸನ ಕೊಂಡು, ದಟ್ಟಿಯನ್ನು ಮಾತ್ರ ಉಟ್ಟು, ಪಾಶ್ಚಾತ್ಯ ವಸ್ತ್ರಗಳನ್ನು ಧ ರಾಜಕೀಯ ತಜ್ಞರು ಸುತ್ತುವರಿದಿರಲು, ಗಾಂಧಿ ಒಂದು ವೇದಿಕೆಯ ಕುಳಿತಿದ್ದಾನೆ. ಆ ಬಟ್ಟೆಗಳನ್ನು ಬಿಡಬೇಕೆಂದು ಅವರಿಗೆ ಹೇಳಿ ಪಾಶ್ಚಾತ್ಯ ವಸ್ತ್ರಗಳನ್ನು ಧರಿಸಿದ ನಾಯಕರು ರೈತರ ಹೃದಯವನ್ನು ವುದೆಂತು; ಆಂಗ್ಲ ಭಾಷೆಯನ್ನಾಡುವ ವಾಗ್ಮಿಗಳು ಅವರ ಮನಸ್ ಮುಟ್ಟುವುದು ಹೇಗೆ ?

ರೈತರು? ರಾಜಕೀಯ ವ್ಯಕ್ತಿಗಳಿಗೂ, ರೈತರಿಗೂ ಏತರ ಸಂಬ ಇಂಡಿಯಾದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಕಾಂಗ್ರೆಸ್, ಬ್ರಿ ರಿಂದ ಸ್ವಲ್ಪ ಆಡಳಿತ ಹಕ್ಕನ್ನು ಪಡೆಯಲು ಪ್ರಯತ್ನಿಸುತ್ತಿತ್ತು. ಕ್ಕಾಗಿ ಪಾಶ್ಚಾತ್ಯರಂತೆ, ಬಟ್ಟೆ ಧರಿಸಿ, ಸೊಗಸಾದ ಆಂಗ್ಲ ಭಾಷೆಯ ವಿ ಗಳನ್ನು ಆಂಗ್ಲ ಅಧಿಕಾರಿಗಳಿಗೆ ಒಪ್ಪಿಸುತ್ತಿದ್ದರು. ಇಂಡಿಯ ಸ್ವಾತಂತ್ರ್ಯ ಮಂದಿರದಲ್ಲಿ ಆಂಗ್ಲ ಸಾರ್ವಭೌಮನಿಗೂ, ಆತನ ನಿಧಿಗೂ ಒಪ್ಪಿಸಿದ ವಿನಂತಿ ಪತ್ರಗಳು ತುಂಬಿರುವುವೆಂದುಕೊಂಡಿದ್ದ ಇನ್ನು ಕೆಲವರು, ಅದರಲ್ಲೂ ಕೋಲಾಹಲದ ಬಂಗಾಳದಲ್ಲಿ ಆಂಗ್ಲ ಅಧಿ ಗಳನ್ನು ಗುಂಡಿಟ್ಟು ಕೊಲ್ಲಲು ತಯಾರಾಗುತ್ತಿದ್ದರು.

ಸ್ವಾತಂತ್ರ್ಯ ಹೆದರಿಸುವುದರಿಂದಾಗಲಿ, ಠಾಕೂರರು ಹೇಳಿ "ವ್ಯಾಕರಣ ಬದ್ಧ ಗೋಳಿನ" ಪ್ರಾರ್ಥನೆಗಳಿಂದಲಾಗಲಿ ದಕ್ಕುವು ವೆಂದು ಗಾಂಧಿ ಉಪದೇಶಿಸಿದರು. ೧೯೧೬ ರ ಫೆಬ್ರವರಿಯಲ್ಲಿ ಬನಾ ನಲ್ಲಿ ಹಿಂದೂ ಯೂನಿವರ್ಸಿಟಿ ಸೆಂಟ್ರಲ್ ಕಾಲೇಜನ್ನು ತೆಗೆಯುವಾಗ ಸೇರಿದ ಪಂಡಿತರನ್ನೂ, ವಿದ್ಯಾರ್ಥಿಗಳನ್ನೂ ಉದ್ದೇಶಿಸಿ ಮಾತನಾಡು "ಕಾಗದದ ಲೇಖನಗಳಿಂದ ನಮಗೆ ಸ್ವರಾಜ್ಯ ಸಿಕ್ಕುವುದಿಲ್ಲ. ನ ನಡತೆಯಿಂದ ನಾವು ಅದಕ್ಕೆ ಅರ್ಹರೆನ್ನಿಸಬೇಕು" ಎಂದರು. "ಈ ಯಲ್ಲಿ ಅನೇಕ ಜನ ರಾಜಮಹಾರಾಜರು ತಮ್ಮ ರತ್ನಾಭರಣಗಳ ಪ್ರದರ್ಶಿಸುತ್ತಿದ್ದಾರೆ. ಇವುಗಳನ್ನೆಲ್ಲಾ ನಿಮ್ಮ ದೇಶೀಯರಿಗೆ ಮ

ಷಾಗಿಡಿ". ಹಾಗೆ ಮಾಡುವರೆಂದು ಗಾಂಧಿ ನಿರೀಕ್ಷಿಸಲಿಲ್ಲ. "ನಮ್ಮ ಮುಕ್ತಿ ರೈತರಿಂದಲೇ ಸಾಧ್ಯ. ವಕೀಲರಿಂದ, ವೈದ್ಯರಿಂದ, ಹಣವಂತರಾದ ಭೂಸ್ವಾಮಿಗಳಿಂದ ನಮಗೆ ಅದು ಸಿಕ್ಕಲಾರದು."

ಗಾಂಧಿಯ ಮೊದಲನೆಯ ಸ್ವಾತಂತ್ರ್ಯ ಗ್ರಾಮೋದ್ಧಾರ. ಇಂಡಿಯಾ ದೇಶದ ಜನರಲ್ಲಿ ಸೇಕಡ ೮೦ ಕ್ಕಿಂತ ಹೆಚ್ಚಾಗಿ ಹಳ್ಳಿಗಳಲ್ಲಿ ವಾಸಮಾಡುತ್ತಾರೆ; ಅವರೆಲ್ಲಾ ಬಡವರು, ಅನಕ್ಷರಸ್ಥರು, ರೋಗಿಗಳು, ಆಸೆಬಿಟ್ಟವರು. ಬಡತನದಿಂದ ಈ ರೈತರನ್ನುದ್ಧರಿಸುವುದು ಕೆಲವು ಜನ ಮೇಲ್ತರಗತಿಯ ಜನರಿಂದಾಗಲಿ, ಪರರಾಷ್ಟ್ರದ ದಯೆಯಿಂದಾಗಲಿ, ಸಾಧ್ಯವಿರಲಿಲ್ಲ. ರೈತರೇ ಅದನ್ನು ಸಂಪಾದಿಸಬೇಕಾಗಿತ್ತು. ಜನರ ಮನಸ್ಸೇ ಮಾರ್ಪಟ್ಟು ಒಳ ಸ್ವಾತಂತ್ರ್ಯ ಲಭಿಸಿದರೆ, ಹೊರಸ್ವಾತಂತ್ರ್ಯ ದಕ್ಕುವುದೆಂದು ಗಾಂಧಿ ನಂಬಿದನು. ಜನರಲ್ಲಿ ಆತ್ಮಗೌರವವುಂಟಾದರೆ, ಜೀವನ ಮಟ್ಟ ಏರಲೇಬೇಕೆಂದು ಅವರು ಒತ್ತಾಯ ಪಡಿಸಿದರೆ, ಯಾರಿಗೂ ಅವರನ್ನು ದಾಸ್ಯದಲ್ಲಿಡಲು ಸಾಧ್ಯವಿಲ್ಲ.

ಇಂಡಿಯಾ ವಿಶಾಲ ದೇಶ. ವಾಹನ ಸೌಕರ್ಯ ಕಡಮೆ. ಓದು ಬರಹ ಬಲ್ಲವರು ಕಡಮೆ ; ರೇಡಿಯೋ ಹೊಂದಿರುವವರು ವಿರಳ. ಆದುದರಿಂದ ಇಂಡಿಯಾದ ಕೇಳುವ ಶಕ್ತಿ ಹೆಚ್ಚಾದುದು. ೧೯೧೬ ರಲ್ಲಿ ಆ ಕಿವಿಗೆ-ಒಬ್ಬ ಧೈರ್ಯಶಾಲಿಯಾದ, ಜಾಗರೂಕತೆಗೆ ಗಮನಕೊಡದೆ ಬಡವರನ್ನು ಪ್ರೀತಿಸಿ ಧನಿಕರಿಂದ ರಕ್ಷಿಸುವ, ಸಂತನಾದ ಒಬ್ಬ ಸಣ್ಣ ಮನುಷ್ಯನ ಧ್ವನಿ ಕೇಳಿಸಲಾರಂಭಿಸಿತು. ಗಾಂಧಿ ಇನ್ನೂ ರಾಷ್ಟ್ರವ್ಯಕ್ತಿಯಾಗಿರಲಿಲ್ಲ. ಲಕ್ಷಾಂತರ ಜನರಿಗೆ ಆತನ ಪರಿಚಯವಿರಲಿಲ್ಲ. ಆದರೆ ಈ ಹೊಸ ಮಹಾತ್ಮನ ಕೀರ್ತಿ ಹಬ್ಬುತ್ತಿತ್ತು. ಇಂಡಿಯಾದ ವಿಧೇಯತೆ ಪಡೆಯಲು ಶಕ್ತಿ, ಆಸ್ತಿ, ಆನೆ, ಆಭರಣ, ಸೈನ್ಯ, ಪೋಲೀಸು ಪಡೆಬೇಕು ; ಭಕ್ತಿ ಅದರ ಹೃದಯವನ್ನು ಗೆಲ್ಲುತ್ತದೆ.

ಗಾಂಧಿ ಆಶ್ರಮದಲ್ಲಿ ಕುಳಿತನು. ಪುರಾತನ ಇಂಡಿಯಾದ ಆಶ್ರಮಗಳಲ್ಲಿ ಸನ್ಯಾಸಿಗಳು ವಾಸಿಸುತ್ತಿದ್ದರು. ಆಶ್ರಮ ವಾಸಿಗಳು ಪ್ರಾಪಂಚಿಕ ವಿಚಾರಗಳನ್ನು ತೊರೆದು, ಧ್ಯಾನಮಾಡುತ್ತಾ ಮುಕ್ತಿಗಾಗಿ ಕಾಯುತ್ತಿದ್ದರು. ಗಾಂಧಿಯ ಆಶ್ರಮಕ್ಕಾದರೋ ಪ್ರಪಂಚದೊಡನೆ ಗಾಢ

ಸಂಪರ್ಕವಿತ್ತು. ಅದೇ ಇಂಡಿಯದ ಕೇಂದ್ರ ಸ್ಥಾನವಾಯಿತು. ಅದರ ವಿಚಾರ ತಿಳಿದು ಇಂಡಿಯನ್ನರು ಹೊಸ ಜೀವನವನ್ನಾರಂಭಿಸಿದರು.

ಈ ಸತ್ಯಾಗ್ರಹ ಆಶ್ರಮ ಮೊದಲು ಕೊಕ್ರಾಬಿನಲ್ಲೂ ಅನಂತರ ಶಾಶ್ವತವಾಗಿ ಜನನಿಬಿಡವಾದ ಅಹಮದಾಬಾದಿನ ಆಚೆ ಸಬರ್ಮತಿ ನದಿಯ ದಡದ ಸಬರ್ಮತಿಯಲ್ಲಿ ಸ್ಥಾಪಿತವಾಯಿತು. ಇಂಡಿಯಾದ ಮಣ್ಣು ಜನರಲ್ಲಿ ಭದ್ರವಾಗಿ ಬೇರುಬಿಟ್ಟು ಗಾಂಧಿ ತನ್ನ ಎತ್ತರದ ನಿಲುವಿಗೆ ಬೆಳೆದನು. ಮರದ ತೋಪಿನಲ್ಲಿ ಕೆಲವು ಸಣ್ಣ ಗುಡಿಸಲುಗಳು ಸೇರಿ ಆಶ್ರಮವಾಯಿತು. ಹತ್ತಿರದಲ್ಲಿಯೇ ಇದ್ದ ನದಿಯಲ್ಲಿ ಹೆಂಗಸರು ಬಟ್ಟೆಗಳನ್ನೊಗೆಯುತ್ತಾ, ಎಮ್ಮೆ ಹಸುಗಳು ಈಜುತ್ತಾ ಇದ್ದುವು. ಸುತ್ತಲೂ ನಿಸರ್ಗ ಸುಂದರವಾಗಿದ್ದರೂ ಹತ್ತಿರವೇ ಅಹಮದಾಬಾದಿನ ಬಟ್ಟೆಗಿರಣಿಗಳ ಕೂಲಿಗಳ ಹರಕುಗುಡಿಸಲುಗಳಿದ್ದುವು. ಈ ಗಿರಣಿಗಳ ಮಾಲೀಕರು ಆಶ್ರಮಕ್ಕೆ ಧನ ಸಹಾಯಮಾಡುತ್ತಿದ್ದರು. ಗಾಂಧಿಯ ಕೋಣೆ ಚಿಕ್ಕದಾಗಿತ್ತು. ಅಲ್ಲಿ ಮೊದಲು ವಾಸವಾಗಿದ್ದಾಗ ಕಿಟಕಿಗಳಿಗೆ ಕಬ್ಬಿಣದ ಸರಕುಗಳನ್ನು ಹಾಕಿಸಿದನು. ಸೆರೆಮನೆಯಲ್ಲಿ ಕಳೆದ ಕಾಲ ಬಿಟ್ಟು, ಗಾಂಧಿ ಆ ಕೋಣೆಯಲ್ಲಿ ಸುಮಾರು ಹದಿನಾರು ವರ್ಷಗಳನ್ನು ಕಳೆದನು. ಸ್ವಾತಂತ್ರ್ಯ ಚಳುವಳಿಯ ಅತ್ಯಂತ ಮೇಧಾವಿಗಳಾದ ನಾಯಕರು ಸಬರ್ಮತಿಯಲ್ಲಿ ಮಹಾತ್ಮನ ಅಡಿಯ ಬಳಿ ತಮ್ಮ ರಾಜಕೀಯ ಜೀವನವನ್ನಾರಂಭಿಸಿದರು. ಆಶ್ರಮವಾಸಿಗಳು ೩೦ ರಿಂದ ೨೩೦ ರ ವರೆಗೆ ಹೆಚ್ಚುಕಡಮೆ ಇರುತ್ತಿದ್ದರು. ಹಣ್ಣಿನ ಗಿಡಗಳನ್ನು ಬೆಳೆಸುವುದು, ನೂಲು ತೆಗೆಯುವುದು, ಧಾನ್ಯಗಳನ್ನು ಬಿತ್ತುವುದು, ಪ್ರಾರ್ಥನೆ, ಅಭ್ಯಾಸ, ವಿದ್ಯಾಪ್ರಚಾರ ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. ೧೯೩೦ ರಲ್ಲಿ ಗಾಂಧಿ ಆ ಸ್ಥಳ ಬಿಟ್ಟು ಹದಿನೈದು ವರ್ಷಗಳಾದನಂತರ, ನಾನು ಅಲ್ಲಿಗೆ ಹೋದಾಗ ಕೂಡ ಆಶ್ರಮದಲ್ಲಿ ಶಾಂತಿ ಸಮಾಧಾನಗಳು ನೆಲೆಸಿದಂತಿದ್ದವು.

ಇಂದಿಗೂ ಕಳೆದು ಹೋದ ತನ್ನ ದೇಶದ ವೈಭವಕ್ಕಾಗಿ ಭಾರತೀಯನ ಹೃದಯ ಮಿಡುಕುತ್ತದೆ. ಗಾಂಧಿ ಅದಕ್ಕೆ ಅಂಜನ ತಂದರು. ಕೆಲವರು ಸಿಂಹದ ಬಾಲವನ್ನು ತಿರುವಿ ಶಕ್ತಿಯ ಕಲ್ಪನೆ ಪಡೆಯಲು ಪ್ರಯತ್ನಿಸಿದರು. ಸಿಂಹ ಹೊರಟು ಹೋದ ಮೇಲೂ ಅವರ ಮನಸ್ಸಿ

ನಿಂದ ಈ ಕಲ್ಪನೆ ಮರೆಯಾಗಲಿಲ್ಲ. ಗಾಂಧಿ ಇಂತಹುದಕ್ಕೆ ಮರುಳಾಗಲಿಲ್ಲ. ಗಿಡಗಳ ನಡುವೆ ಕುಳಿತು, ಶಾಂತನಾಗಿ ಧ್ಯಾನಮಾಡುತ್ತಾ, ಬ್ರಿಟಿಷರನ್ನನುಕರಿಸದೆ, ಪುರಾತನ ಕಾಲದ ಋಷಿಗಳಂತಿದ್ದು, ಎಷ್ಟೋ ಜನ ಧಾಳಿಮಾಡಿದರೂ ತನ್ನ ಆತ್ಮವಿಶ್ವಾಸದಿಂದ ಭಾರತ ಅವರ ಮೇಲೆ ವಿಜಯ ಪಡೆಯಿತೆಂದು ಜನತೆಗೆ ನೆನಪನ್ನುಂಟುಮಾಡುತ್ತಿದ್ದನು. ಆತನ ವ್ಯಕ್ತಿತ್ವದ ಮಾಯಾದಂಡ ಜನತೆಯ ಊರುಗೋಲಾಯಿತು.

ಗಾಂಧಿಗಿಂತ ಮೊದಲೇ ಇಂಡಿಯಾದಲ್ಲಿ ಅನೇಕ ಜನ ಮಹನೀಯರು ಜನರ ಉನ್ನತಿಯ ಕನಸನ್ನು ಕಂಡು ಅದಕ್ಕಾಗಿ ಶ್ರಮಿಸಿದ್ದರು. ಅವರು ದೂರದ ಆಕಾಶದ ಬೆಳಕಿನ ಕಿಡಿಗಳಾಗಿದ್ದರು, ಕೆಲವರ ಮೇಲೆ ಪ್ರಭಾವ ಬೀರುವ ತಾರೆಗಳಾಗಿದ್ದರು. ಗಾಂಧಿ ಭದ್ರವಾಗಿ ಭೂಮಿಯನ್ನೂರಿ ನಿಂತಿದ್ದನು. ಅಲ್ಲಿನ ಜನರಿಂದ ಶಕ್ತಿ ಪಡೆದು ಜನರಲ್ಲಿ ಉತ್ಸಾಹ ತುಂಬುತ್ತಿದ್ದನು. ಜನರಲ್ಲಿ ಹುಟ್ಟಿ, ಜನರಿಂದ ಶಕ್ತಿಪಡೆದು, ಜನರಿಗಾಗಿ ದುಡಿದನು.

## ೧೧. ಮಹಾತ್ಮ ಗಾಂಧಿ ಮತ್ತು ಬ್ರಿಟಿಷರು

ಗಾಂಧಿ ಹಿಂದೂ ಮತಾರಾಧಕನೂ ಅಲ್ಲ ; ದೇಶಾರಾಧಕನೂ ಅಲ್ಲ. ಯಾವ ಒಂದು ವಿಶಿಷ್ಟತತ್ವದ ಹಿಡಿತಕ್ಕೂ ಆತನು ಸಿಕ್ಕಿರಲಿಲ್ಲ. ಯಾವೊಂದು ಗೆರೆಯನ್ನೂ ಅನುಸರಿಸಲಿಲ್ಲ. ಸ್ವತಂತ್ರನಾಗಿದ್ದುದರಿಂದ, ಹೀಗೆಯೇ ಮಾಡುವನೆಂದು ಯಾರೂ ನಿರ್ಧರಿಸಲಾಗುತ್ತಿರಲಿಲ್ಲ. ಆದುದರಿಂದ ಎಲ್ಲರಿಗೂ ಕುತೂಹಲ; ಬ್ರಿಟಿಷರಿಗೆ ತೊಂದರೆ. "ನನ್ನ ತತ್ವಕ್ಕೆ ನಾನೇ ವಿರೋಧವಾಗಿ ಹೋಗುವೆನೇ ? ಒಂದೇ ತತ್ವವನ್ನನುಸರಿಸುವುದು ದೆವ್ವ ಹಿಡಿದಂತೆ", ಎಂದು ಆತ ಹೇಳಿದರು. ಈ ದಿನ ಒಂದು ದಾರಿಯಲ್ಲಿ ನಡೆದು, ನಾಳೆ ಬೇರೆ ದಾರಿಯನ್ನನುಸರಿಸುವ ಕ್ರಾಂತಿಕಾರನ ಧೈರ್ಯ ಆತನಿಗಿತ್ತು. "ನನ್ನ ಗುರಿ, ಒಂದು ಪ್ರಶ್ನೆಗೆ ಹಿಂದೆ ಹೇಳಿದ ಉತ್ತರವನ್ನೇ ಹೇಳುವುದಲ್ಲ. ಆ ಕ್ಷಣದಲ್ಲಿ ಯಾವುದು ಸತ್ಯವಾಗಿ ಕಾಣುವುದೋ ಅದನ್ನು ಹೇಳುವುದು. ಹೀಗೆ ಸತ್ಯದಿಂದ ಸತ್ಯಕ್ಕೆ ಬೆಳೆಯುತ್ತಾ ಇದ್ದೇನೆ", ಎಂದು ಬರೆದನು. ಸಾಮಾಜಿಕ ವೇದಾಂತದಂತೆ ಆತನ ಶಾಂತಿಮಾರ್ಗವೂ ನಿಧಾನವಾಗಿ ಬೆಳೆಯಿತು. ೧೯೧೫ರಲ್ಲಿ ದಕ್ಷಿಣ ಆಫ್ರಿಕಾದಿಂದ ಇಂಡಿಯಾಕ್ಕೆ

ಬರುತ್ತಾ, ಕೆಲವು ಜನ ಭಾರತೀಯ ವಿದ್ಯಾರ್ಥಿಗಳನ್ನು ಸೇರಿಸಿ ಬ್ರಿಟಿಷ್ ಸೈನ್ಯಕ್ಕೆ ಸಹಾಯಮಾಡಲು ಒಂದು ವೈದ್ಯಕೀಯ ತಂಡವನ್ನೇರ್ಪಡಿಸಿದನು. ಅನಂತರ, "ಯುದ್ಧದಲ್ಲಿ ಗಾಯಗೊಂಡವರಿಗೆ ಸಹಾಯಮಾಡುವವರೂ ಯುದ್ಧ ಪಾಪಕ್ಕೆ ಹೊರಗಾದವರಲ್ಲ", ಎಂದು ಒಪ್ಪಿಕೊಂಡನು. ಇಂಡಿಯಾದಲ್ಲಿ ಭಾರತೀಯರು ಬ್ರಿಟಿಷರ ಯುದ್ಧ ಪ್ರಯತ್ನಕ್ಕೆ ಸಹಕಾರ ನೀಡಬೇಕೆಂದು ಹೇಳಿದನು. ಜನರಿಗೆ ಒಪ್ಪಿಗೆಯಿಲ್ಲದ ಈ ಕಾರ್ಯವನ್ನು ಸಮರ್ಥಿಸುತ್ತಾ, "ಬ್ರಿಟಿಷ್ ಸಾಮ್ರಾಜ್ಯದ ಕೆಲವು ಧ್ಯೇಯಗಳಲ್ಲಿ ನನಗೆ ವಿಶ್ವಾಸವಿದೆ. ಸಾಮ್ರಾಜ್ಯದ ಪ್ರತಿಯೊಬ್ಬ ಪ್ರಜೆಯ ಶಕ್ತಿಗೌರವಗಳಿಗೂ ಅವಕಾಶವಿದೆ ಎಂಬುದೊಂದು........ಹೆಚ್ಚು ಆತಂಕ ಪಡಿಸದ ಸರ್ಕಾರವೇ ಉತ್ತಮ ಸರ್ಕಾರವೆಂದು ನಾನು ಅನೇಕ ಸಲ ಹೇಳಿದ್ದೇನೆ. ಬ್ರಿಟಿಷ್ ಸಾಮ್ರಾಜ್ಯದಲ್ಲಿ ಇಂತಹ ಆಡಳಿತವನ್ನು ಕಂಡಿದ್ದೇನೆ. ಆದುದರಿಂದ ಅದರಲ್ಲಿ ನನಗೆ ನಿಷ್ಠೆಯಿದೆ", ಎಂದರು.

೧೯೧೮ ರ ಜುಲೈನಲ್ಲಿ ಸೈನ್ಯಕ್ಕೆ ಜನ ಸೇರುವಂತೆ, ಹಳ್ಳಿ ಪಟ್ಟಣಗಳಲ್ಲಿ ಪ್ರೇರೇಪಿಸಿದರು. ಶಕ್ತರಿಗೂ, ಹೇಡಿಗಳಿಗೂ ಸಮಭಾಗವಿಲ್ಲ. ನಾವು ಹೇಡಿಗಳೆನ್ನುತ್ತಾರೆ. ಆ ಅಪಾದನೆಯಿಂದ ಬಿಡುಗಡೆ ಹೊಂದಬೇಕಾದರೆ, ಶಸ್ತ್ರಗಳನ್ನು ಹಿಡಿಯಲು ನಾವು ಕಲಿಯಬೇಕು."

ಹಳ್ಳಿಯ ಜನರು ಆತನನ್ನು ಆಕ್ಷೇಪಿಸಿದರು. "ನೀನು ಅಹಿಂಸೆಯ ಆರಾಧಕ. ಶಸ್ತ್ರಗಳನ್ನು ಹಿಡಿಯಬೇಕೆಂದು ಹೇಗೆ ಹೇಳುವೆ?"

"ಸಾಮ್ರಾಜ್ಯದಲ್ಲಿ ಸಮಪಾಲೇ ನಮ್ಮ ಗುರಿ", ಎಂದು ಉತ್ತರವಿತ್ತನು. ಕೆನಡಾದ, ನ್ಯೂಜಿಲೆಂಡಿನ, ಆಸ್ಟ್ರೇಲಿಯದ ಸ್ಥಿತಿಗೆ ಇಂಡಿಯಾ ಬರಬೇಕೆಂದು ಆತನ ಆಸೆ. ಪೂರ್ಣ ವಿಚ್ಛೇದನದ ಅಭಿಪ್ರಾಯ ಆತನ ತಲೆಗೆ ಬಂದಿರಲಿಲ್ಲ; ಬೇರೆ ನಾಯಕರಿಗೂ ಬಂದಿರಲಿಲ್ಲ. "ಸಾಮ್ರಾಜ್ಯ ನಾಶವಾದರೆ ನಮ್ಮ ಆಸೆಗಳೂ ನಾಶವಾದಂತೆ", ಎಂದು ವಾದಿಸುತ್ತಿದ್ದರು.

೧೯೧೪ ರಲ್ಲಿ ಮೊದಲನೆಯ ಮಹಾಯುದ್ಧ ನಡೆದಾಗ ಅದಕ್ಕೆ ಗಾಂಧಿ ಬೆಂಬಲಕೊಟ್ಟ ವಿಚಾರವನ್ನು ನಾನು ಪ್ರಸ್ತಾಪಿಸಿದೆ. "ನಾನು ಆಗತಾನೆ ದಕ್ಷಿಣ ಆಫ್ರಿಕಾದಿಂದ ಹಿಂದಿರುಗಿದ್ದೆ. ನನ್ನ ನೆಲೆ ನನಗೇ ತಿಳಿದಿರಲಿಲ್ಲ" ಎಂದು ವಿವರಿಸಿದರು. ಸಾಮ್ರಾಜ್ಯದಲ್ಲಿರಲು ದೇಶಪ್ರೇಮ

ವನ್ನು ಹೊಂದಿಸುತ್ತಿದ್ದಂತೆ ಶಾಂತಿಮಾರ್ಗವನ್ನು ಸೈನ್ಯ ಸಹಾಯಕ್ಕೆ ಹೊಂದಿಸಲು ಆತನ ಪ್ರಾಮಾಣಿಕತೆ ಒತ್ತಾಯಪಡಿಸಿತು. ವಸ್ತುಸ್ಥಿತಿ ಪರಿಜ್ಞಾನ ಮತಾಸಕ್ತಿಯನ್ನು ಗೆದ್ದಿತು. ರಾಜಕೀಯ, ಅಹಿಂಸಾವಾದದ ತೀಕ್ಷ್ಣತೆಯನ್ನು ಕಡಿಮೆಮಾಡಿತು.

ಇದುವರೆಗೆ ಬ್ರಿಟಿಷರೊಡನೆ ಒಂದೇ ಕಲಹ ನಡೆದಿತ್ತು. ೧೯೧೬ ರ ಡಿಸೆಂಬರಿನಲ್ಲಿ ಸಂಯುಕ್ತ ಪ್ರಾಂತ್ಯಗಳ ಲಕ್ನೋನಲ್ಲಿ ನಡೆದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಸಭೆಯಲ್ಲಿ ಈ ಘಟನೆ ಪ್ರಾರಂಭವಾಯಿತು. ಭಾರತದ ಎಲ್ಲ ರೈತರಂತೆ ಬಡಕಲಾದ ಒಬ್ಬ ರೈತ ಬಳಿಗೆ ಬಂದು— ನಾನು ರಾಜಕುಮಾರ ಶುಕ್ಲಾ. ಚಂಪಾರಣ್‌ನಿಂದ ಬಂದಿದ್ದೇನೆ. ನೀವು ನಮ್ಮ ಜಿಲ್ಲೆಗೆ ಬರಬೇಕು ", ಎಂದು ಗಾಂಧಿಗೆ ಹೇಳಿದನು. ಗಾಂಧಿಗೆ ಆ ಸ್ಥಳದ ಪರಿಚಯವೇ ಇರಲಿಲ್ಲ. ನೇಪಾಳದ ಹತ್ತಿರ ಬಿಹಾರಿನಲ್ಲಿ ಹಿಮಾಲಯದ ತಪ್ಪಲಿನಲ್ಲಿತ್ತು.

" ಬ್ರಿಟಿಷರಿಗೂ, ರೈತರಿಗೂ ಘರ್ಷಣೆಯುಂಟಾಗಿತ್ತು ! ಗಾಂಧಿ ಬಂದು ಅವರ ತೊಂದರೆ ವಿಚಾರಿಸಬೇಡವೆ ? " ಎಂದು ರೈತ ಕೇಳಿದನು. ಮಹಾತ್ಮ ಬೇರೆ ಕಡೆ ಕೆಲಸವಿದೆಯೆಂದು ಹೇಳಿದನು. ಶುಕ್ಲ ಆತನ ಹಿಂದೆ ತಿರುಗಿ ಕಡೆಗೆ ಆಶ್ರಮಕ್ಕೆ ಬಂದನು. ಅನೇಕ ವಾರಗಳ ಕಾಲ ಗಾಂಧಿಯನ್ನು ಬಿಟ್ಟು ಕದಲಲಿಲ್ಲ ". ಯಾವುದಾದರೂ ದಿನ ಗೊತ್ತುಮಾಡಿ ", ಎಂದು ಬೇಡಿದನು.

ಆತನ ಒತ್ತಾಯಕ್ಕೆ ಮನಸೋತು ಗಾಂಧಿ ಕೆಲವು ತಿಂಗಳ ನಂತರ ಕಲ್ಕತ್ತೆಗೆ ಒಂದು ದಿನ ಬರುವುದಾಗಿ ಹೇಳಿದನು. ಗಾಂಧಿ ಬಂದಾಗ ಅಲ್ಲಿ ಶುಕ್ಲ ಕುಳಿತಿದ್ದು ಅವರಿಗೆ ಬಿಡುವುಂಟಾಗುವವರೆಗೂ ಕಾದನು. ಅಲ್ಲಿಂದ ಚಂಪಾರಣ್ಯಕ್ಕೆ ಹೋದರು.

ಗಾಂಧಿ ಅಲ್ಲಿಯ ಸುದ್ದಿಯನ್ನೆಲ್ಲಾ ಸರಿಯಾಗಿ ತಿಳಿದುಕೊಂಡನು. ಮೊದಲು ಬ್ರಿಟಿಷ್ ಜಮೀನ್ದಾರರ ಸಂಘಕ್ಕೆ ಭೇಟಿಕೊಟ್ಟರು. ಹೊರಗಿನವರಿಗೆ ಸುದ್ದಿ ಹೇಳಲು ಅಲ್ಲಿಯ ಕಾರ್ಯದರ್ಶಿ ನಿರಾಕರಿಸಿದನು. ಗಾಂಧಿ ತಾನು ಹೊರಗಿನವನಲ್ಲವೆಂದು ಹೇಳಿದನು. ಅಲ್ಲಿಂದ ಬ್ರಿಟಿಷ್ ಕಮಿಷನರ್ ಬಳಿಗೆ ಹೋದನು. ಆತನು, " ಅವಮಾನಪಡಿಸಿ ಹೊರಡು

ವಂತೆ ಬುದ್ಧಿವಾದ ಹೇಳಿದನು........" ಗಾಂಧಿ ಹೊರಡಲಿಲ್ಲ.

ಕಡೆಗೆ ಗಾಂಧಿ ತಿಳಿದುಕೊಂಡಮಟ್ಟಿಗೆ ಮತ್ತು ಆಮೇಲಿನ ಚರಿತ್ರಕಾರರ ತಿಳುವಳಿಕೆಯ ಮೇರೆಗೆ ಸುದ್ದಿ ಹೀಗಿತ್ತು :—ಲಕ್ಷಕ್ಕೂ ಹೆಚ್ಚು ಜನ ರೈತರು ಬ್ರಿಟಿಷರಿಂದ ಭೂಮಿಯನ್ನು ಗೇಣಿಗೆ ಪಡೆದು ಉಳುಮೆ ಮಾಡುತ್ತಿದ್ದರು. ಅದರಲ್ಲಿ ಭತ್ತ, ಗೋಧಿ, ಧಾನ್ಯ, ಏನುಬೇಕಾದರೂ ಬೆಳೆಯಬಹುದಾಗಿತ್ತು. ಆದರೆ ಹೊಲದ ಶೇಕಡ ೧೫ ಭಾಗದಲ್ಲಿ ನೀಲಿ ಬೆಳೆದು ಯಜಮಾನರಿಗೆ ಬಾಡಿಗೆ ರೂಪದಲ್ಲಿ ಕೊಡಬೇಕಾಗಿತ್ತು. ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಜರ್ಮನಿಯಲ್ಲಿ ರಾಸಾಯನಿಕ ನೀಲಿ ತಯಾರಿಸಿದುದರಿಂದ ಈ ಬೆಳೆಯ ವ್ಯಾಪಾರ ನಾಶವಾಯಿತು. ಆಗ ನೀಲಿ ಬೆಳೆಯಕೂಡದೆಂದು ಆಜ್ಞೆಮಾಡಿ, ಗೇಣಿ ಹೆಚ್ಚಿಸಿದರು. ರೈತ ನೀಲಿ ಬೆಳೆಯದಿದ್ದರೆ ಗೇಣಿ ಹೆಚ್ಚಿಸಬಹುದೆಂದು ಒಂದು ಹಳೆಯ ಒಪ್ಪಂದವಿತ್ತು. ಆದರೆ ರೈತರಿಗೆ ನೀಲಿಬೆಳೆಯನ್ನೇಕೆ ನಿಲ್ಲಿಸಿದರೆಂಬುದು ತಿಳಿಯಿತು. ಆದುದರಿಂದ ಗೇಣಿ ಹೆಚ್ಚಿಸಕೂಡದೆಂದು ಅಡ್ಡಿಪಡಿಸಿದರು. ಜಮೀನುದಾರರು ಒತ್ತಾಯಪಡಿಸಿದರು. ರೈತರನ್ನು ಹೊಡೆದು, ಅವರ ಮನೆಗಳನ್ನು ಲೂಟಿಮಾಡಿ ದನಕರುಗಳನ್ನು ವಶಪಡಿಸಿಕೊಂಡರು. ಬಲವಂತಕ್ಕೆ ಹೆದರಿ ಸಾವಿರಾರು ಜನ ಹೆಚ್ಚುಗೇಣಿ ಕೊಡಲು ಒಪ್ಪಿ ಕರಾರುಪತ್ರಗಳನ್ನು ಬರೆದುಕೊಟ್ಟರು. ೧೯೧೨ ರಲ್ಲಿ ಈ ಗಲಾಟೆ ಪ್ರಾರಂಭವಾಯಿತು. ರೈತರಿಗೆ ಅಸಮಾಧಾನವಿದ್ದರೂ ಏನೂಮಾಡಲು ಶಕ್ತಿಯಿಲ್ಲದೆ ಇದ್ದರು. ಇದರಿಂದಲೇ ಬೇಸರಪಡದೆ ರಾಜಕುಮಾರ ಶುಕ್ಲ ಗಾಂಧಿಯನ್ನನುಸರಿಸಿ ೧೯೧೭ ರಲ್ಲಿ ಆತನನ್ನು ಚಂಪಾರಣ್ಯಕ್ಕೆ ಕರೆತಂದನು.

ಒಂದು ದಿನ ವಿಚಾರಣೆ ನಡೆಸಲು ಗಾಂಧಿ ಆನೆಯ ಮೇಲೆ ಕುಳಿತು ಒಂದು ಹಳ್ಳಿಗೆ ಹೋಗುತ್ತಿದ್ದಾಗ ಒಬ್ಬ ಪೋಲೀಸಿನವನು ಆತನನ್ನು ಹಿಂದ ಕ್ಕೋಡಿಸಿದನು. ತಕ್ಷಣ ಚಂಪಾರಣ್ಯವನ್ನು ಬಿಡಬೇಕೆಂದು ಗಾಂಧಿಗೆ ಅಪ್ಪಣೆಚೀಟಿ ಬಂತು. ಅದಕ್ಕೆ ಸಹಿ ಹಾಕಿದರೂ, ಹಿಂದುಗಡೆ ತಾನು ಆ ಅಪ್ಪಣೆ ಪಾಲಿಸುವುದಿಲ್ಲವೆಂದು ಆತನು ಬರೆದು ಕಳುಹಿಸಿದನು. ಮಾರನೆಯ ದಿನ ನ್ಯಾಯಸ್ಥಾನಕ್ಕೆ ಆತನನ್ನು ಕರೆಸಲಾಯಿತು.

ತಮ್ಮ ಸಹಾಯಕ್ಕೆ ಬಂದ ಮಹಾತ್ಮ ಸರ್ಕಾರದ ತೊಂದರೆಗೆ ಸಿಕ್ಕಿ

ದ್ದಾನೆಂದು ಕೇಳಿದ ಸಾವಿರಾರು ರೈತರು ನ್ಯಾಯಸ್ಥಾನದ ಸುತ್ತಲೂ ಸೇರಿದ್ದರು. ಆ ಗುಂಪನ್ನು ಶಿಸ್ತಿನಲ್ಲಿಡಲು ಗಾಂಧಿಯ ಸಹಾಯವನ್ನೇ ಕೋರಿದರು. ಆತನು ವಿಶ್ವಾಸದಿಂದ ಸಹಕರಿಸಿದನು. ಇಲ್ಲಿಯವರೆಗೂ ಎದುರಿಲ್ಲದೆ ನಡುಗಿಸುತ್ತಿದ್ದ ಅವರ ಶಕ್ತಿ ಎದುರಿಸಿದಾಗ ಪ್ರಯೋಜನವಿಲ್ಲದೆ ಹೋಗುವುದೆಂಬುದಕ್ಕೆ ಇದು ಸಾಕ್ಷಿಯಾಯಿತು.

ನ್ಯಾಯಸ್ಥಾನದಲ್ಲಿ ಗಾಂಧಿ ತನ್ನ ತಪ್ಪನ್ನೊಪ್ಪಿಕೊಂಡನು. ತಾನು ಚಂಪಾರಣ್ಯವನ್ನು ಬಿಡಲು ನಿರಾಕರಿಸಿದುದು ಸರ್ಕಾರದಲ್ಲಿ ಅಗೌರವದಿಂದಲ್ಲವೆಂದೂ, ತನ್ನ ಅಂತರಾತ್ಮನ ಮಾತಿಗೆ ವಿಧೇಯತೆ ತೋರಿಸುವುದಕ್ಕೆ ಮಾತ್ರವೆಂದೂ ಗಾಂಧಿ ನ್ಯಾಯಾಧಿಪತಿಗೆ ತಿಳಿಸಿದನು. ತಕ್ಕ ಶಿಕ್ಷೆ ಕೊಡಬೇಕೆಂದು ಕೇಳಿದನು.

ಎರಡು ಗಂಟೆಗಳನಂತರ ತೀರ್ಪನ್ನು ಕೊಡುವುದಾಗಿಯೂ, ಅದುವರೆಗೆ ಗಾಂಧಿಯನ್ನು ಜಾಮೀನಿನ ಮೇಲೆ ಬಿಡುಗಡೆಮಾಡುವುದಾಗಿಯೂ ನ್ಯಾಯಾಧಿಪತಿ ಹೇಳಿದನು. ಗಾಂಧಿ ಜಾಮೀನಿಗೆ ಒಪ್ಪಲಿಲ್ಲ. ಹಾಗೆಯೆ ಬಿಡುಗಡೆ ಮಾಡಿದರು. ಪುನಃ ನ್ಯಾಯಾಧಿಪತಿ ಕೆಲವು ದಿನಗಳ ಮೇಲೆ ತೀರ್ಪು ಕೊಡುವುದಾಗಿ ಹೇಳಿದನು. ಅದುವರೆಗೆ ಗಾಂಧಿಯನ್ನು ಸ್ವತಂತ್ರವಾಗಿರಲು ಬಿಡುಗಡೆ ಮಾಡಿದರು. ಅನೇಕ ದಿನಗಳ ಮೇಲೆ, ಮೇಲಿನಿಂದ ಬಂದ ಆಜ್ಞೆಯ ಮೇರೆಗೆ ಗಾಂಧಿಯ ಮೇಲಿನ ಆರೋಪಣೆಯನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು. ಅಸಹಕಾರಕ್ಕೆ ಮೊದಲನೆಯ ವಿಜಯವುಂಟಾಯಿತೆಂದು ಗಾಂಧಿ ಹಿಗ್ಗಿದನು.

"ನಾನು ಮಾಡಿದುದು ಬಹಳ ಸಾಧಾರಣ ಕೆಲಸ. ನನ್ನ ದೇಶದಲ್ಲಿ ಓಡಾಡಲು ಬ್ರಿಟಿಷರು ಅಡ್ಡಿಪಡಿಸಕೂಡದೆಂದು ಹೇಳಿದೆ" ಎಂದು ಗಾಂಧಿ ಹೇಳಿದನು. ಅದೇನೂ ಅಷ್ಟು ಅಲ್ಪಕಾರ್ಯವಲ್ಲ.

ಗಾಂಧಿ ಚಂಪಾರಣ್ಯದಲ್ಲಿ ಏಳುತಿಂಗಳ ಕಾಲವಿದ್ದು ಪುನಃ ಎರಡು ಸಲ ಬಂದು ಹೋದನು. ಯಾರೋ ಒಬ್ಬ ರೈತನ ಬೇಡಿಕೆಯ ಮೇರೆಗೆ ಒಂದೆರಡು ದಿನವಿದ್ದು ಹೋಗಲು ಬಂದು, ಗಾಂಧಿ ಜೀವನದ ಒಂದು ವರ್ಷವನ್ನೇ ಅಲ್ಲಿ ಕಳೆಯಬೇಕಾಯಿತು. ಕಡೆಗೆ ಜಮೀನ್ದಾರರು ಗೇಣಿ ಹೆಚ್ಚಿಸುವುದಿಲ್ಲವೆಂದು ಒಪ್ಪಿಕೊಂಡು, ವಸೂಲು ಮಾಡಿದ್ದ ಗೇಣಿಯಲ್ಲಿ ಶೇಕಡ

ಶಿಃ ರಷ್ಟು ಹಿಂದಕ್ಕೆ ಕೊಟ್ಟರು. ಅವರು ಕೊಟ್ಟ ಹಣಕ್ಕಿಂತ ಜಮೀನ್ದಾರರು ಒಪ್ಪಿದುದು ಹೆಚ್ಚೆಂದು ಗಾಂಧಿ ಭಾವಿಸಿದನು.

ಆ ಜಿಲ್ಲೆಯಲ್ಲಿದ್ದಾಗ ಗಾಂಧಿ ರೈತರಿಗಾಗಿ ಒಬ್ಬ ವೈದ್ಯನನ್ನೂ, ಅವರ ಮಕ್ಕಳಿಗಾಗಿ ಒಬ್ಬ ಉಪಾಧ್ಯಾಯನನ್ನೂ ಕರೆತಂದನು. ಕಸ್ತೂರಿಬಾಯಿಯೂ ಬಂದು ಹೆಂಗಸರಿಗೆ ಶುಚಿಯಾಗಿರಲು ಕಲಿಸಿದಳು.

ಚಂಪಾರಣ್ಯದ ಅನುಭವ ಗಾಂಧಿಯ ರೀತಿಯಲ್ಲಿಯೇ ನಡೆಯಿತು. ಆತನು ಅಲ್ಲಿಗೆ ಹೋದುದು ಬ್ರಿಟಿಷರನ್ನೆದುರಿಸುವುದಕ್ಕಲ್ಲ. ಬಡರೈತರ ಸ್ಥಿತಿಯನ್ನುತ್ತಮಪಡಿಸುವುದಕ್ಕಾಗಿ. ನೊಂದ ಲಕ್ಷಾಂತರ ಜನರ ಸಮಸ್ಯೆಗಳಿಂದ ಗಾಂಧಿಯ ರಾಜಕೀಯ ಜೀವನ ಪ್ರಾರಂಭವಾಯಿತು. ಆತನ ನಿಷ್ಠೆ ಅನಿರ್ದಿಷ್ಟಧ್ಯೇಯಗಳಲ್ಲಿ ಅಲ್ಲ; ದಿನವಹಿ ಜೀವನದಲ್ಲಿ ನರಳುವ ಮಾನವರಲ್ಲಿ; ಆತನ ಅಭಿಪ್ರಾಯಗಳು ಚಿಂತಿಸಿಬಂದುವಲ್ಲ; ಮಾಡಿನೋಡಿ ತಿಳಿದುವು. ಚಂಪಾರಣ್ಯವನ್ನು ಬಿಡುವ ಮೊದಲು ಬಿಹಾರಿನ ಮುಖ್ಯ ಲಾಯರುಗಳನ್ನು ಸೇರಿಸಿ ರೈತರ ಕ್ಷೇಮ ನೋಡಿಕೊಳ್ಳಲು ಒಂದು ಸಮಿತಿಯನ್ನೇರ್ಪಡಿಸಿದನು. ಇವರಲ್ಲಿ ಮುಂದೆ ಸ್ವತಂತ್ರ ಭಾರತದ ಅಧ್ಯಕ್ಷನಾಗಲಿದ್ದ ರಾಜೇಂದ್ರಪ್ರಸಾದರೂ ಇದ್ದರು. ಈ ಭಾರತೀಯ ಲಾಯರುಗಳು ಮಹಾತ್ಮನ ಶಿಷ್ಯನಾಗಿದ್ದ ಚಾರ್ಲ್ಸ್‌ಫ್ರೀರ್ ಆಂಡ್ರೂಸ್ ಎಂಬ ಇಂಗ್ಲಿಷ್ ಮತಪ್ರಚಾರಕನ ಸಹಾಯವನ್ನು ಕೋರಿದರು. ಆಂಡ್ರೂಸ್ ಒಪ್ಪಿದರೂ ಗಾಂಧಿ ಒಪ್ಪಲಿಲ್ಲ. ಲಾಯರುಗಳನ್ನು ಆಕ್ಷೇಪಿಸುತ್ತಾ, "ಈ ಸಮವಲ್ಲದ ಹೋರಾಟದಲ್ಲಿ ನಿಮ್ಮ ಕಡೆ ಒಬ್ಬ ಇಂಗ್ಲಿಷಿನವನಿದ್ದರೆ ಸಹಾಯವಾಗುವುದೆಂದು ನೀವು ಭಾವಿಸುತ್ತೀರಿ. ಇದು ನಿಮ್ಮ ಹೃದಯದ ದೌರ್ಬಲ್ಯವನ್ನು ತೋರಿಸುತ್ತದೆ. ನಮ್ಮಕಡೆ ನ್ಯಾಯವಿದೆ. ವಿಜಯ ಸಿಕ್ಕಬೇಕಾದರೆ ನಿಮ್ಮಲ್ಲಿ ನಿಮಗೆ ನಂಬಿಕೆಯಿರಬೇಕು" ಎಂದನು.

ರಾಜೇಂದ್ರ ಪ್ರಸಾದರೂ, "ಆತನಿಗೆ ನಮ್ಮ ಮನಸ್ಸು ಚನ್ನಾಗಿ ಅರ್ಥವಾಗಿತ್ತು. ಉತ್ತರ ಹೇಳಲೂ ನಮಗೇನೂ ತೋರಲಿಲ್ಲ. ಹೀಗೆ ಗಾಂಧಿ ನಮಗೆ ಸ್ವಾವಲಂಬನೆಯ ಪಾಠ ಹೇಳಿಕೊಟ್ಟರು," ಎಂದನು.

ಚಂಪಾರಣ್ಯದ ಕಾಲದಲ್ಲಿ ಗಾಂಧಿ ತನ್ನ ಜನರ ಮಾರ್ಪಾಟಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟನು. ರಾಜಕೀಯದಲ್ಲಿ ಹೊಂದಿಕೊಂಡು ಹೋಗುವ

ಶಕ್ತಿ ಬ್ರಿಟಿಷರಲ್ಲಿತ್ತೆಂಬ ನಂಬಿಕೆ ಆತನಿಗಿತ್ತು. ಶಿಸ್ತಿನಿಂದ, ಒಗ್ಗಟ್ಟಿನಿಂದ, ಗೌರವದಿಂದ, ವಿಶ್ವಾಸದಿಂದ ತಮಗೆ ಸ್ವಾತಂತ್ರ್ಯದ ಅರ್ಹತೆಯಿದೆಯೆಂದು ಭಾರತೀಯರು ತೋರಿಸಿಕೊಂಡರೆ ಇಂಗ್ಲೆಂಡ್ ಅದನ್ನು ಕೊಡುವುದು. ೧೯೧೬ ರ ಡಿಸೆಂಬರಿನಲ್ಲಿ ಹಿಂದೂಗಳು ಹೆಚ್ಚಾಗಿದ್ದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮತ್ತು ಜಿನ್ನಾ ಅಧ್ಯಕ್ಷನಾಗಿದ್ದ ಮುಸ್ಲಿಂಲೀಗ್, ಲಕ್ನೋ ಒಪ್ಪಂದ ಮಾಡಿಕೊಂಡು, ಜಿನ್ನಾ ತನ್ನ ಸಂಸ್ಥೆ ಕಾಂಗ್ರೆಸ್ಸಿನೊಡನೆ ನಿಂದು ದೇಶದ ಉನ್ನತಿಗಾಗಿ ದುಡಿಯುವುದೆಂದು ಭರವಸೆ ಕೊಟ್ಟಾಗ ಗಾಂಧಿಯ ಈ ಅಭಿಪ್ರಾಯಕ್ಕೆ ಅದ್ಭುತಶಕ್ತಿ ದೊರೆತಂತಾಯಿತು. ಹಿಂದೂ ಮುಸ್ಲಿಮರು ರಾಜಕೀಯ ಸುಧಾರಣೆಗಳ ವಿಚಾರದಲ್ಲಿ ಒಪ್ಪಂದಕ್ಕೆ ಬಂದು, ಅದರಿಂದ ಎರಡು ಮತೀಯರಿಗೂ ಹಿತವಾಗುವುದೆಂದು ಒಪ್ಪಿದುದರಿಂದ— "ಇಂಡಿಯಾದ ಪಾರತಂತ್ರ್ಯ ತಪ್ಪಿಸಿ ಮಿಕ್ಕ ಸ್ವತಂತ್ರ ರಾಷ್ಟ್ರಗಳೊಡನೆ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಸಮಾನಸ್ಥಾನ ಕೊಡಬೇಕೆಂಬ ಬೇಡಿಕೆಗೆ" ಮನ್ನಣೆ ಸಿಕ್ಕುವುದೆಂದು ನಿರೀಕ್ಷಿಸಿದರು. ಸರ್ ಎಡ್ವಿನ್ ಎಸ್. ಮಾಂಟೆಗು ಇಂಡಿಯಾ ಕಾರ್ಯದರ್ಶಿಯಾದುದು ಈ ಆಸೆಗೆ ಬೆಂಬಲ ಕೊಟ್ಟಂತಾಯಿತು. ಈತನು ೧೯೧೭ ರ ಆಗಸ್ಟ್ ೨೦ ರಲ್ಲಿ ಹೌಸ್ ಆಫ್ ಕಾಮನ್ಸ್‌ನಲ್ಲಿ ರಾಜಕೀಯದಲ್ಲಿ ಭಾರತೀಯರಿಗೆ ಹೆಚ್ಚು ಹೆಚ್ಚು ಸ್ಥಾನ ಕೊಡುವುದಾಗಿಯೂ, ಇಂಡಿಯಾ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಸ್ವತಂತ್ರವಾಗಿರುವ ಅವಕಾಶ ಕಲ್ಪಿಸಲು ಸ್ವತಂತ್ರ ಸಂಸ್ಥೆಗಳಿಗೆ ಉತ್ತೇಜನ ಕೊಡುವುದಾಗಿಯೂ ಹೇಳಿದನು. ತಕ್ಷಣ ಸ್ವತಂತ್ರಸ್ಥಾನ ಕೊಡುತ್ತೇವೆಂದು ವಚನ ಕೊಟ್ಟಂತೆ ಈ ಮಾತುಗಳಿಗೆ ಅರ್ಥಮಾಡಿದರು.

ಜನರ ಈ ಸ್ವಾಭಾವಿಕವಾದ, ನ್ಯಾಯವಾದ, ರಾಜಕೀಯ ಆಸೆಗಳನ್ನು ತೃಪ್ತಿಪಡಿಸಲು ಬ್ರಿಟನ್ನಿನಲ್ಲಿ ಅನೇಕರಿಗೆ ಆಸೆಯಿತ್ತು. ಲಕ್ಷಾಂತರ ಭಾರತೀಯರು ಶೌರ್ಯದಿಂದ ಕಾದಿದ ಯುದ್ಧ, ಪ್ರೆಸಿಡೆಂಟ್ ವುಡ್ರೋವಿಲ್ಸನರ ಸ್ವಾತಂತ್ರ್ಯ ಘೋಷಣೆ ಇವುಗಳಿಂದ ಎಚ್ಚೆತ್ತ ವಸಾಹತುಗಳ ಜನರಿಗೆ ಚಕ್ರಾಧಿಪತ್ಯದಲ್ಲಿ ಭಕ್ತಿ ಕಡಮೆಯಾಯಿತೆಂದು ಇತರರು ಭಾವಿಸಿದರು.

ರಾಬರ್ಟ್ ಕ್ಲೈವ್ ಯುದ್ಧ, ಉಪಾಯ, ಮೋಸ, ಒಳಸಂಚುಗಳಿಂದ ಭಾರತದ ಮೇಲೆ ಇಂಗ್ಲೆಂಡ್ ಅಧಿಕಾರ ಸಂಪಾದಿಸಿದ ಕಾಲ,

ವಾರೆನ್ ಹೇಸ್ಟಿಂಗ್ಸ್ ನಿಸ್ಸಂಕೋಚದಿಂದ ಮೋಸಮಾಡಿದ ಕಾಲ ಮುಗಿದಿತ್ತು. ೧೮೫೭ ರ ದಂಗೆಯಾದ ನಂತರ ಈಸ್ಟ್ ಇಂಡಿಯಾ ಕಂಪೆನಿಯ ಆಳ್ವಿಕೆ ಕೊನೆಗಂಡಿತು. ವಿಕ್ಟೋರಿಯಾ ರಾಣಿ, ಸರ್ಕಾರ ವಹಿಸಿಕೊಂಡು ಕ್ಯಾನಿಂಗನನ್ನು ಮೊದಲನೆಯ ವೈಸರಾಯಿಯಾಗಿ ನಿಯಮಿಸಿದಳು. ಆಗಿನಿಂದ ನಿಧಾನವಾಗಿ ಭಾರತದ ಆಡಳಿತದಲ್ಲಿ ಇಂಗ್ಲೆಂಡಿನ ಆಡಳಿತ ನೈರ್ಮಲ್ಯದ ಧ್ಯೇಯಗಳು ಕಾಣಿಸಿಕೊಳ್ಳಲಾರಂಭಿಸಿದುವು.

ಆದರೆ ಬ್ರಿಟಿಷ್ ಚಕ್ರಾಧಿಪತ್ಯ ತನ್ನ ಹೆದರಿಕೆಯನ್ನು ಮರೆಯಲಾಗಲಿಲ್ಲ. ೧೯೩೨ ರಲ್ಲಿ ಬ್ರಿಟಿಷ್ ವೈಸರಾಯಿ ಲಾರ್ಡ್ ಲಿನ್‌ಲಿತ್‌ಗೋ ನನ್ನೊಡನೆ " ನಾವು ಶಕ್ತಿ ಪ್ರದರ್ಶನದಿಂದ ಆಕ್ರಮಣ ಮಾಡಿರುವವರು. ದಂಗೆ ನಡೆದಾಗಿನಿಂದ ಇಂಡಿಯನ್ನರ ಕೈಗೆ ಆಯುಧಗಳನ್ನು ಕೊಡಲು ಹೆದರುತ್ತಿದ್ದೇವೆ " ಎಂದು ಹೇಳಿದನು. ೧೮೫೮ ರಿಂದ ೧೯೪೭ರ ವರೆಗೆ ಬ್ರಿಟಿಷ್ ಆಡಳಿತವೆಂದರೆ ಪರರಾಷ್ಟ್ರದ ಆಕ್ರಮಣವಾಗಿತ್ತು. ಬ್ರಿಟಿಷರು ಇಂಡಿಯಾದಲ್ಲಿದ್ದರೂ ಅದಕ್ಕೆ ಸೇರಿದವರಾಗಲಿಲ್ಲ. ಅನೇಕಜನ ಬ್ರಿಟಿಷ್ ಅಧಿಕಾರಿಗಳಿಗೆ ಈ ದೇಶದ ಹಿತದಲ್ಲಿ ನಿಷ್ಠೆಯಿತ್ತು. ಇಪ್ಪತ್ತು ವರ್ಷಗಳ ಕಾಲ ಇಲ್ಲಿ ಕೆಲಸ ಮಾಡಿ ಇದನ್ನೇ ಮನೆಯಾಗಿ ಭಾವಿಸಿ, ಇಂಗ್ಲೆಂಡಿಗೆ ಹೋದಾಗ ಪರಕೀಯರಂತೆ ಇರುತ್ತಿದ್ದರು. ಮನಸ್ಸು ಆರೋಗ್ಯಗಳನ್ನು ಕೆಡಿಸಿಕೊಂಡು, ಕಷ್ಟತರವಾದ ಸಮಸ್ಯೆಗಳನ್ನು ಬಿಡಿಸುತ್ತಾ, ವಿಶ್ವಾಸ ತೋರದ ಜನರಿಂದ ಕೃತಜ್ಞತೆಗಾಶಿಸುತ್ತಿದ್ದರು.

ಬೇರೆಯವರ ಮನೆಯಲ್ಲಿ ಬ್ರಿಟಿಷರು ಯಾಜಮಾನ್ಯ ನಡೆಸುತ್ತಿದ್ದರು. ಅವರ ಇರುವಿಕೆಯೇ ಅಪಮಾನವಾಗಿತ್ತು. ಚಕ್ರಾಧಿಪತ್ಯವೆಂದರೆ ಹೆರರ, ಹೆರರಿಂದ ಹೆರರಿಗಾಗಿ ಸರ್ಕಾರ. ಸ್ವತಂತ್ರವಾಗಿ ರಾಜ್ಯ ನಡೆಸಲಾರದವರ ಮೇಲೆ ತಮಗೆ ಆಡಳಿತದ ಹಕ್ಕಿರುವುದೆಂಬ ಭಾವನೆ ನಿರಂತರ ಅಪಮಾನ. ಭಾರತದಲ್ಲಿ ಹಾಲು ಜೇನಿನ ಹೊಳೆ ಹರಿಸಿದ್ದರೂ—ಕೆಲವು ಮರುಭೂಮಿಗಳಲ್ಲಿ ನೀರನ್ನೇನೋ ಹರಿಸಿದರು—ಅವರು ದ್ವೇಷಕ್ಕೆ ಪಾತ್ರರಾಗುತ್ತಿದ್ದರು. ಅಧೀನತೆ ಸ್ವಾತಂತ್ರ್ಯದ ಹಂಬಲವನ್ನು ಹುಟ್ಟಿಸುತ್ತದೆ. ಅದರಿಂದ ಆಧಿಪತ್ಯ ತನ್ನ ನಾಶಕ್ಕೆ ತಾನೇ ಕಾರಣವಾಗುತ್ತದೆ. ವಸಾಹತುಗಳನ್ನು ಪಡೆದವರು ಯಾರೂ ಒಳ್ಳೆಯವರಾಗಲಾರರು.

ಇಪ್ಪತ್ತನೆಯ ಶತಮಾನದಲ್ಲಿ ವಿದ್ಯಾವಂತ ಭಾರತೀಯರ ಸಂಖ್ಯೆ ಹೆಚ್ಚಿತು. ಮಧ್ಯಮವರ್ಗದ ಜನ ಉದ್ಭವಿಸಿದ್ದರು. ಕೈಗಾರಿಕೆ, ವ್ಯಾಪಾರಗಳಿಂದ ಧನಿಕರಾದ ಅನೇಕ ಭಾರತೀಯರಿಗೆ ಆರ್ಥಿಕಸ್ಥಾನ ಬೇಕಾಗಿತ್ತು. ದೇಶೀಯ ಅಧಿಕಾರಾಕಾಂಕ್ಷಿಗಳಿಗೆ ಪರರ ಆಡಳಿತದಿಂದ ತೊಂದರೆಯಾಗಿತ್ತು. ೧೯೦೪–೫ ರಲ್ಲಿ ಜಪಾನು, ರಷ್ಯಾವನ್ನು ಸೋಲಿಸಲು, ಮೊದಲ ಬಾರಿಗೆ ಏಷ್ಯದ ರಾಷ್ಟ್ರ ಶ್ವೇತವರ್ಣೀಯರನ್ನು ಸೋಲಿಸಲು ಇಂಗ್ಲೆಂಡಿನ ಮೇಲೆ ಇಂಡಿಯಾದ ವಿರೋಧ ಪ್ರಬಲವಾಯಿತು.

ಕೆಲವು ಜನ ಬ್ರಿಟಿಷ್ ರಾಜಕಾರಣಿಗಳು ಭಾರತೀಯ ವಿರೋಧವನ್ನು ರಕ್ತ ಕಬ್ಬಿಣಗಳಿಂದ ಎದುರಿಸಬೇಕೆಂದರು; ಮತ್ತೆ ಕೆಲವರು ಸುಧಾರಣೆಗಳಿಂದ ಸಮಾಧಾನ ಮಾಡಬೇಕೆಂದರು. ೧೮೮೫ ರಲ್ಲಿ ಬ್ರಿಟಿಷ್ ವೈಸರಾಯಿ ಲಾರ್ಡ್ ಡಫರಿನ್ ಜನರ ವಿರೋಧವನ್ನು ನಿರೀಕ್ಷಿಸಿ, ಅದನ್ನು ಉಪಯೋಗಕರವಾದ ದಾರಿಗೆ ಎಳೆಯಲು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಹುಟ್ಟಿಗೆ ಕಾರಣವಾದನು. ಅನಂತರ ಬಂದ ವೈಸರಾಯಿಗಳೂ ಅದಕ್ಕೆ ಆಶೀರ್ವಾದವಿತ್ತರು. ಆದರೆ ರಕ್ತಕ್ಕೆ ಹಾತೊರೆಯುತ್ತಿದ್ದ ಸಾಮ್ರಾಜ್ಯ ಪ್ರೇಮಿಗಳು ಈ ಮಿತವಾದಿಗಳಿಗೆ ಸಹಾಯಮಾಡಲಿಲ್ಲ.

ರಾಜಕೀಯ ತಜ್ಞತೆ, ಅಧಿಕಾರ, ಲಾಲಸೆಗಳ ನಡುವೆ ಹೊಯ್ದಾಡಿ ಬ್ರಿಟಿಷರು ಸಮಯಕ್ಕನುಸಾರವಾಗಿ ಅಧಿಕಾರದ ಕೋರಿಕೆಯನ್ನು ಬಿಟ್ಟುಕೊಡುತ್ತಾ, ಸಾಧ್ಯವಾದಷ್ಟು ಯಥಾರ್ಥ ಅಧಿಕಾರವನ್ನು ಬಿಗಿಪಡಿಸಿಕೊಳ್ಳುತ್ತಾ ಇದ್ದರು. ಅವರು ಅಧಿಕಾರ ಬಿಟ್ಟುಕೊಟ್ಟಷ್ಟೂ, ಬಿಡಬೇಕೆಂಬ ಒತ್ತಾಯ ಹೆಚ್ಚುತ್ತಾ ಹೋಯಿತು. ತೀವ್ರವಾದಿಗಳು ರಾಜಕೀಯ ಸುಧಾರಣೆಗಳನ್ನು ಕಟುವಾಗಿ ಆಕ್ಷೇಪಿಸಿದರು. ೧೯೨೦ ನೇ ಹಂಟರ್ ವರದಿ ಈ ಹಠವಾದಿತ್ವವನ್ನು ಎತ್ತಿತೋರಿಸುತ್ತದೆ. ದೆಹಲಿಯ ಜನರಲ್ ಡ್ರೇಕ್ ಬ್ರಾಕ್ಮನ್ ಅದನ್ನು ವಿವರಿಸುತ್ತಾ, "ಏಷ್ಯದವರಿಗೆ ಅರ್ಥವಾಗುವುದು ಬಲಪ್ರಯೋಗವೊಂದೇ", ಎಂದನು. ಈ ಅಭಿಪ್ರಾಯ ಬ್ರಿಟಿಷ್ ಆಡಳಿತಗಾರರಲ್ಲಿ ಅನೇಕರಿಗಿತ್ತು. ಫೀಲ್ಡ್ ಮಾರ್ಷಲ್ ಲಾರ್ಡ್ ರಾಬರ್ಟ್ಸ್ "ಯೂರೋಪಿಯನ್ನನು ಹೆಚ್ಚೆಂಬ ಈ ಅಭಿಪ್ರಾಯದಿಂದಲೇ ಇಂಡಿಯಾ ನಮಗೆ ಸಿಕ್ಕಿದುದು. ದೇಶೀಯನು ಎಷ್ಟೇ ವಿದ್ಯಾವಂತ

ನಾಗಿರಲಿ, ವಿವೇಕಿಯಾಗಿರಲಿ, ಶಕ್ತನಾಗಿರಲಿ, ಅವನಿಗೆಷ್ಟೇ ದೊಡ್ಡ ಅಧಿಕಾರ ಕೊಟ್ಟರೂ ಅವನು ಬ್ರಿಟಿಷ್ ಅಧಿಕಾರಿಗೆ ಸಮನಾಗಲಾರ," ಎಂದನು.

ಭಾರತೀಯರಿಗೆ ಇವೆಲ್ಲಾ ತಿಳಿದು ತೀವ್ರ ಅಸಮಾಧಾನವಿತ್ತು. ಇಂಡಿಯಾದಲ್ಲಿ ಬ್ರಿಟಿಷರ ಆಡಳಿತವನ್ನು ಸರ್ ಎಡ್ವಿನ್ ಮಾಂಟೆಗೂ, "ಆಧುನಿಕ ಕಾಲಕ್ಕೆ ಹೊಂದಿಕೊಳ್ಳದ ಗಡಸು ಸರ್ಕಾರ," ವೆಂದು ವರ್ಣಿಸಿದನು. ಬದಲಾವಣೆ ಹೊಂದುವ ಶಕ್ತಿಯಿಲ್ಲದ, ಲಂಡನ್ನಿನ ತೀವ್ರವಾದಿಗಳಿಂದಲೂ, ದೆಹಲಿಯ ಬುದ್ಧಿಹೀನರಿಂದಲೂ ಜೀವದುಸಿರು ಪಡೆದ ಸರ್ಕಾರ. ಹೀಗಾಗಿ ಯುದ್ಧದಲ್ಲಿ ತಲೆತಗ್ಗಿದ ಕಾಲದಲ್ಲಿ ಬ್ರಿಟನ್ ಮಾಂಟೆಗೂ ಮೂಲಕ ಕೊಟ್ಟ ಸ್ವಾತಂತ್ರ್ಯದ ಆಶ್ವಾಸನೆ ಮೂಲೆಗೆ ಬಿದ್ದು, ಶಾಂತಿ ಬರಲು, ಆಸೆ ಮುರಿದ ಇಂಡಿಯಾ ಹುಚ್ಚೆದ್ದಿತು.

ಗಾಂಧಿಗೂ ಅಸಮಾಧಾನವಾಯಿತು. ಎಚ್ಚರಿಕೆ, ಉದ್ವೇಗದೊಡನೆ ಆತನ ಮನಸ್ಸಿನಲ್ಲಿ ಹೋರಾಡುತ್ತಿತ್ತು. ಧ್ಯೇಯಕ್ಕಾಗಿ ಜೀವಕೊಡಲು ಹಿಂಜರಿಯದ ಆತನು ಸಮಾಧಾನಮಾಡಿಕೊಳ್ಳಲು ಹವಣಿಸಿದನು. ಸ್ವಾಭಾವಿಕ ಯೋಧನಾದರೂ, ಹುಟ್ಟು ಶಾಂತಿದೂತನಾಗಿದ್ದನು. ಬ್ರಿಟಿಷರೊಡನೆ ಸಹಕರಿಸುವುದರಿಂದ ಇಪ್ಪತ್ತನೆಯ ಶತಮಾನದಲ್ಲಿ ಬ್ರಿಟಿಷರ ಅಧಿಕಾರ ಲಾಲಸೆಯ ಭೂತ ಅಡಗುವುದೆಂದುಕೊಂಡನು. ಸ್ವಾತಂತ್ರ್ಯ ದೊರಕದೆ ಹೋಗಲು, ಯುದ್ಧಕಾಲದ ಕಠಿಣ ಶಾಸನಗಳೇ ಶಾಶ್ವತವಾಗಿ ನಿಲ್ಲಲು ಮಹಾತ್ಮ, ಬ್ರಿಟಿಷ್ ಚಕ್ರಾಧಿಪತ್ಯವನ್ನೆದುರಿಸುವ ತನ್ನ ಮೊದಲ ಕಾರ್ಯಕ್ಕೆ ಕೈಹಾಕಿದನು.

## ೧೨. ರಕ್ತ :

ಇಂಡಿಯಾದಲ್ಲಿ ಎಲ್ಲಾ ಕಡೆಯೂ, ದ್ರೋಹಿಗಳೆಂದು ಜನರನ್ನು ಗುಟ್ಟಾಗಿ ಶಿಕ್ಷೆಗೆ ಗುರಿಮಾಡುತ್ತಿದ್ದರು. ಇಂಡಿಯಾದ ಪ್ರಸಿದ್ಧ ದೇಶಭಕ್ತ ಬಾಲಗಂಗಾಧರ ತಿಲಕರನ್ನೂ, ಇಂಡಿಯಾದಲ್ಲಿ ನೆಲೆಸಿ ಅದಕ್ಕಾಗಿ ಕೆಲಸ ಮಾಡುತ್ತಿದ್ದ ಐರ್ಲೆಂಡಿನಲ್ಲಿ ಹುಟ್ಟಿದ ಥಿಯಾಸೊಫಿಸ್ಟ್, ವಾಗ್ಮಿ ಆನಿಬೆಸೆಂಟರನ್ನೂ ಸೆರೆಯಲ್ಲಿಟ್ಟರು. ಮುಸ್ಲಿಂ ನಾಯಕರು ಷೌಕತ್ ಮತ್ತು ಮಹಮದ್ ಆಲಿಗಳು ಅನೇಕ ಜನ ದೇಶಭಕ್ತರೂ ಸೆರೆಯಲ್ಲಿದ್ದರು.

ತ್ತಾಂತ ಪತ್ರಿಕೆಗಳು ಯುದ್ಧಕಾಲದ ನಿರ್ಬಂಧಗಳಿಂದ ವಿಚಾರಗಳನ್ನು ಹೊರಗೆಡಹುವಂತಿರಲಿಲ್ಲ.

೧೯೧೮ ರಲ್ಲಿ ಮಹಾಯುದ್ಧ ಕೊನೆಗಾಣಲು, ಇಂಡಿಯನ್ನರು ಮೊದ ಲಿನ ನೆಮ್ಮದಿ ಪುನಃ ಬರುವುದೆಂದು ನಿರೀಕ್ಷಿಸಿದ್ದರು. ಆದರೆ ೧೯೧೯ ರ ಮಾರ್ಚ್ ೧೮ ರಲ್ಲಿ ಹೊಸ ದೆಹಲಿಯ ಲೆಜಿಸ್ಲೆಟಿವ್ ಸಭೆ ಜಾರಿಗೆ ತಂದ ರೌಲತ್ ಕಾನೂನುಗಳಿಂದ ಯುದ್ಧಕಾಲದ ನಿರ್ಬಂಧಗಳೆ ಮುಂದುವರಿಯು ವವೆಂದು ತಿಳಿದು ಆಶಾಭಂಗವಾಯಿತು. ಗಾಂಧಿ ಈ ಕಾನೂನನ್ನು, "ಅನ್ಯಾಯ, ಸ್ವಾತಂತ್ರ್ಯಕ್ಕೆ ಧಕ್ಕೆ ತರುವಂತಹುದು, ವ್ಯಕ್ತಿ ಸ್ವಾತಂತ್ರ್ಯ ವನ್ನು ನಾಶಮಾಡತಕ್ಕಂತಹುದು; ಇದರಿಂದ ಸಮಾಜಕ್ಕೂ, ದೇಶಕ್ಕೂ ಹಾನಿ," ಎಂದು ಹೇಳಿ ಎದುರಿಸಿದನು. ದೌರ್ಬಲ್ಯ ಆತನನ್ನು ರೇಗಿಸು ತ್ತಿತ್ತು. ದುರ್ಬಲವಾದ ಜನತೆಗೆ ಮಹಾತ್ಮ ಶಕ್ತಿಯ ಸಂಕೇತವಾಗಿ ದ್ದನು. ಅಶಕ್ತನಾದರೂ ಆತನು ಶಕ್ತಿಯ ಅವತಾರವಾಗಿದ್ದನು; ಕೆಲಸ ನಡೆಯುವಂತೆ ಪ್ರೇರೇಪಿಸುತ್ತಿದ್ದನು. ಆತನ ಭಾವನೆಗಳು ತೀಕ್ಷ್ಣವಾಗಿ ದ್ದವು. ಇಂಡಿಯಾ ತನ್ನ ಮೊದಲಿನ ಶಕ್ತಿಯನ್ನು ಕಳೆದುಕೊಂಡಿತ್ತೆಂದು ಭಾರತೀಯರು ತಿಳಿದಿದ್ದರು. ಗಾಂಧಿ ಅದರ ಶಕ್ತಿಯನ್ನು ಪುನರುಜ್ಜೀವನ ಗೊಳಿಸುತ್ತಿದ್ದನು. ರೌಲತ್ ಕಾನೂನಿಗೆ ತೋರಿದ ವಿರೋಧವನ್ನು ಆಳರ ರು ಲಕ್ಷ್ಯಮಾಡಲಿಲ್ಲ. ಭಾರತೀಯರಿಗೆ ಬೆಲೆಯಿರಲಿಲ್ಲ; ಮಾಡು ವುದೇನು ?

ತನ್ನ ಪ್ರಯೋಗಗಳಿಂದ ಸ್ವತಃ ತಂದುಕೊಂಡ ಅನುಶಂಕೆಯಿಂದ ಬದರಾಸಿನಲ್ಲಿ ಗುಣ ಹೊಂದುತ್ತಾ, ಗಾಂಧಿ ಉತ್ತರಕ್ಕಾಗಿ ತಡಕಾಡಿದನು. ಒಂದು ಪ್ರಾತಃಕಾಲ ಇಂಡಿಯಾ ಗವರ್ನರ್ ಜನರಲ್ಲಾಗಿದ್ದ ಚಕ್ರವರ್ತಿ ರಾಜಗೋಪಾಲಾಚಾರಿಯವರೊಡನೆ, "ಕನಸಿನಲ್ಲಿ, ನಾವು ದೇಶವನ್ನೆಲ್ಲಾ ಹರತಾಳವಾಚರಿಸುವಂತೆ ಮಾಡಬೇಕೆಂಬ ಕಲ್ಪನೆ ನನಗೆ ರಾತ್ರಿ ಬಂತು." ಎಂದು ಹೇಳಿದನು. ಸಂಪೂರ್ಣ ಆರ್ಥಿಕ ವಿರಾಮ—ಅಂಗಡಿಗಳಿಲ್ಲ, ಕಾರ್ಖಾನೆಗಳಲ್ಲಿ ಕೆಲಸವಿಲ್ಲ, ಹಡಗಿನ ಸಾಮಾನು ಇಳಿಸುವವರಿಲ್ಲ, ಬ್ಯಾಂಕುಗಳಿಲ್ಲ—ಹರತಾಳದಿಂದ ಜನತೆಯ ಒಗ್ಗಟ್ಟು, ಶಿಸ್ತು, ಶಕ್ತಿ ಪ್ರದರ್ಶಿಸಿದಂತಾಗುವುದು.

ಹರತಾಳ ಒಂದು, ಎರಡು, ಮೂರು ದಿನಗಳು ನಡೆಯಬಹುದು. ಅದಕ್ಕೆ ಪದಕವಿಟ್ಟಂತೆ ರೌಲತ್ ಕಾನೂನಿನ ವಿರುದ್ಧವಾಗಿ ಸತ್ಯಾಗ್ರಹ ನಡೆಸಬೇಕೆಂದು ಗಾಂಧಿ ಹೇಳಿದರು. ಮೊದಲನೆಯದಾಗಿ ಸರ್ಕಾರ ನಿಷೇಧಿಸಿದ್ದ ರಾಜಕೀಯ ಸಾಹಿತ್ಯ ಮಾರಲು ನಿರ್ಧರಿಸಿದರು. ಬೊಂಬಾಯಿಯಲ್ಲಿ ೬೦೦ ಜನ ಸ್ತ್ರೀ ಪುರುಷರು ಸತ್ಯಾಗ್ರಹ ವಚನಕ್ಕೆ ಸಹಿಹಾಕಲು ಗಾಂಧಿಗೆ ಸಂತೋಷವಾಯಿತು. ಸ್ವಲ್ಪ ಜನರೆಂದು ಭಾರತೀಯರೇ ಪರಿಹಾಸ್ಯಮಾಡಿದರು. “ಫಲಿತಾಂಶದಿಂದ ತಿಳಿಯುತ್ತದೆ,” ಎಂದು ಗಾಂಧಿ ಉತ್ತರವಿತ್ತನು. ದಕ್ಷಿಣ ಆಫ್ರಿಕದಲ್ಲಿ ಇನ್ನೂ ಕಡಮೆ ಜನರಿಂದ ವಿಜಯಲಭಿಸಿತ್ತು. “ನಮ್ಮ ವಚನದಲ್ಲಿ ನಮಗೆ ನಿಷ್ಠೆಯಿದ್ದರೆ ಇಂಡಿಯಾ ಸರ್ಕಾರದಂತಹ ಮಹಾಸರ್ಕಾರವೂ ಸೋಲಬೇಕಾಗುತ್ತದೆ.” “ವಚನ ಸ್ವೀಕಾರ ರಾಜಕೀಯಕ್ಕೆ ಮತೀಯ ನಿಷ್ಠೆಯನ್ನು ಕೊಡುತ್ತದೆ. ನಮಗೆ ಮುಯ್ಯಿಗೆ ಮುಯ್ಯಿ ಬೇಕಾಗಿಲ್ಲ; ದ್ವೇಷವನ್ನು ದ್ವೇಷದಿಂದ, ಹಿಂಸೆಯನ್ನು ಹಿಂಸೆಯಿಂದ, ಕೇಡನ್ನು ಕೇಡಿನಿಂದ ಎದುರಿಸಬೇಕಾಗಿಲ್ಲ. ಕೇಡಿಗೆ ಪ್ರತಿಯಾಗಿ ಶುಭವನ್ನುಂಟುಮಾಡಿ, ಯಾವುದೂ ಅಸಾಧ್ಯವಲ್ಲ,” ಎಂದು ಮಾತು ಮುಗಿಸಿದನು. ಈ ಧೈರ್ಯ ತನ್ನಲ್ಲಿ, ಜನರಲ್ಲಿ, ದೇವರಲ್ಲಿ ಇದ್ದ ಅಪಾರ ನಂಬಿಕೆಯನ್ನು ತೋರಿಸುತ್ತಿತ್ತು.

ಹರತಾಳಕ್ಕೆ ಮಹಾ ವಿಜಯ ದೊರೆತಿತು. ಗಾಂಧಿ ಅದನ್ನು, “ಬಹಳ ಆಶ್ಚರ್ಯಕರ,” ವೆಂದನು. ಆದರೆ ಆತನಿಗಿನ್ನೂ ತನ್ನ ಜನರ ಪರಿಚಯವಿರಲಿಲ್ಲ. ಅವರಿಗೆ ಹಿಂಸೆಯಲ್ಲಿದ್ದ ಆಸಕ್ತಿಯ ಅರಿವು ಆತನಿಗಿರಲಿಲ್ಲ. ದೊಡ್ಡ ಪಟ್ಟಣಗಳಲ್ಲಿ ಹರತಾಳ ನಡೆದಾಗ ಮನೆಗಳನ್ನು ಸುಡುವುದು, ಟೆಲಿಗ್ರಾಫ್ ತಂತಿಗಳನ್ನು ಕೀಳುವುದು, ಅಂಗಡಿಗಳನ್ನು ಲೂಟಿಮಾಡುವುದು, ರೈಲುಗಳನ್ನು ತಡೆಯುವುದು, ಇಂಗ್ಲೀಷರನ್ನು ಬಡಿಯುವುದು ಮುಂತಾದುವೆಲ್ಲಾ ನಡೆದುವು. ಅದಕ್ಕೆ ಪ್ರಾಯಶ್ಚಿತ್ತವಾಗಿ ಗಾಂಧಿ ಮೂರು ದಿನ ಉಪವಾಸಮಾಡಿ ತನ್ನ ಅನುಯಾಯಿಗಳನ್ನು ೨೪ ಘಂಟೆ ಉಪವಾಸವಿರುವಂತೆ ಹೇಳಿದನು. ಅನಂತರ ಚಿಕ್ಕ ಪಟ್ಟಣಗಳಿಂದಲೂ ಹಿಂಸಾಕೃತ್ಯಗಳ ವರ್ತಮಾನ ಬಂತು. ೧೯೧೯ ಏಪ್ರಿಲ್ ೧೮ ರಲ್ಲಿ ರೇಗಿ ಸತ್ಯಾಗ್ರಹವನು ಸಂಪುರ್ಣವಾಗಿ ನಿಲ್ಲಿಸಿದನು. ತನ್ನಿಂದ ಹಿಮಾಲಯ

ದಂತಹ ತಪ್ಪಾಯಿತೆಂದು ಸ್ವದೇಶೀಯರಿಗೆ ತಿಳಿಸಿದನು. "ಈಗ ನಿಧಾನ ವಾಗಿ ಈ ಪರಿಸ್ಥಿತಿಯನ್ನು ಹೇಗೆ ಎದುರಿಸಬೇಕೆಂಬುದನ್ನು ನಿರ್ಧರಿಸ ಬೇಕು". ತಪ್ಪನ್ನೊಪ್ಪಿಕೊಳ್ಳುವುದು ಅಪಮಾನವೆಂದು ಆತನು ಎಣಿಸಲಿಲ್ಲ. ತಪ್ಪನ್ನೆ ಮಾಡುವುದಿಲ್ಲವೆನ್ನುವ ನಿರಂಕುಶಾಧಿಕಾರಿಯ ಆಸೆ ಆತನಿಗಿರ ಲಿಲ್ಲ. ಆತ್ಮಕಥೆಯಲ್ಲಿ, "ನಮ್ಮ ತಪ್ಪುಗಳನ್ನು ಹೊರಬಾಗಿನ ಗಾಜಿನಿಂದ ನೋಡಿ ಬೇರೆಯವರ ತಪ್ಪುಗಳನ್ನು ಅದಕ್ಕೆ ವ್ಯತಿರಿಕ್ತವಾಗಿ ನೋಡಿದರೆ ಮಾತ್ರ ಸಮತೂಕದ ನಿರ್ಧಾರಕ್ಕೆ ಬರಲು ಸಾಧ್ಯ," ಎಂದು ಬರೆದರು. ತನ್ನ ತಪ್ಪುಗಳನ್ನು ದೊಡ್ಡದುಮಾಡಿ, ನೆರೆಯುವರ ತಪ್ಪುಗಳನ್ನು ಕಡಮೆ ಮಾಡುತ್ತಿದ್ದನು. ನೈತಿಕ ಅಧಿಕಾರ ಅದರಿಂದ ನಾಶವಾಗಬಹುದೆಂದು ಯಾರೋ ಸೂಚಿಸಿದರು. "ಅದನ್ನು ಬಿಗಿಯಾಗಿ ಹಿಡಿಯುವುದರಿಂದ ಯಾರಿಗೂ ನೈತಿಕ ಅಧಿಕಾರ ದಕ್ಕುವುದಿಲ್ಲ. ಅದು ಸಿಕ್ಕುವುದಾದರೆ, ಹುಡುಕದೆ ಸಿಕ್ಕುತ್ತೆ; ಪ್ರಯತ್ನವಿಲ್ಲದೆ ನಿಲ್ಲುತ್ತದೆ," ಎಂದು ಉತ್ತರ ವಿತ್ತನು. ಆತನ ನೈತಿಕ ಅಧಿಕಾರ ಆತನಲ್ಲಿಯೇ ನೆಲೆಸಿತ್ತು; ಕಡೆಗೆ ಅದಕ್ಕೆ ಸ್ವತಂತ್ರ ಅಸ್ತಿತ್ವವುಂಟಾಯಿತು. ಆತನೇನು ಮಾಡಿದರೂ, ಎಷ್ಟೇ ದೊಡ್ಡ ತಪ್ಪು ಮಾಡಿದರೂ ಅದಕ್ಕೇನೂ ತೊಂದರೆಯಾಗಲಿಲ್ಲ.

ಹರತಾಳದ ಕ್ರೌರ್ಯದ ಅತ್ಯಂತ ನೀಚ ಕೃತ್ಯಗಳು ಪಂಜಾಬು ಪ್ರಾಂತ್ಯದಲ್ಲಿ ನಡೆದುವು; ಅದರಲ್ಲೂ ೧೫೦,೦೦೦, ಮಂದಿ ಗಡ್ಡ ರುಮಾಲು ಧರಿಸಿದ ಶೂರರಾದ ಸಿಕ್ಕರಿಗೆ ಪವಿತ್ರಸ ಳವಾದ ಅಮೃತಸರದಲ್ಲಿ ನಡೆದುವು. ಬ್ರಿಟಿಷ್ ಮತ್ತು ಇಂಡಿಯನ್ನರ ಹೃದಯಗಳಲ್ಲಿ ಎಂತಹ ಭಯಂಕರ ಕಿಚ್ಚು ಅಡಗಿತ್ತೆಂಬುದು ಕಾಣಿಸಿಕೊಂಡಿತು. ಮಾರ್ಚ್ ೩೦ ರಲ್ಲಿ, ಏಪ್ರಿಲ್ ೬ ರಲ್ಲಿ ನಡೆದ ಹರತಾಳಗಳು ಯಾವ ಪ್ರಸಂಗವೂ ಇಲ್ಲದೆ ನಡೆದು ಹೋದು ವೆಂದು ಬ್ರಿಟಿಷ್ ಸರ್ಕಾರದ ಹಂಟರ್ ಕಮಿಷನ್ ವರದಿ ಮಾಡಿತು. "ಯೂರೋಪಿಯನ್ನರು ಗುಂಪುಗಳ ನಡುವೆ ಯಾವ ತೊಂದರೆಯೂ ಇಲ್ಲದೆ ತಿರುಗಾಡಬಹುದಾಗಿತ್ತು." ಆಗಸ್ಟ್ ೯ ರಲ್ಲಿ ಅಧಿಕಾರಿಗಳು, ಡಾಕ್ಟರ್ ಸೈಫುದ್ದೀನ ಕಿಚ್ಲೂ ಎಂಬ ಮುಸ್ಲಿಂ ನಾಯಕನನ್ನೂ, ಡಾಕ್ಟರ್ ಸತ್ಯಪಾಲ್ ಎಂಬ ಹಿಂದೂ ನಾಯಕನನ್ನೂ ಪ್ರಾಂತ್ಯದಿಂದ ಹೊರಕ್ಕೋಡಿ ಸಿದರು. ಸ್ಟಾಲಿನ್ ಸಾಯುವ ಮೊದಲು ಮಾಸ್ಕೋನಲ್ಲಿ ಮಾರ್ಚ್

೧೯೫೩ ರಲ್ಲಿ ಕಂಡು ಮಾತನಾಡಿಸಿದ್ದು ಈ ಕಿಚ್ಲೂನೇ. ಹಂಟರ್ ವರದಿಯ ಪ್ರಕಾರ ಈ ಇಬ್ಬರು ರಾಜಕೀಯ ವ್ಯಕ್ತಿಗಳನ್ನು ಗಡೀಪಾರು ಮಾಡಿದುದರಿಂದ ರೇಗಿ ಜನರ ಗುಂಪು ರಸ್ತೆಗಳಲ್ಲಿ ಸೇರಿ ಮೂರು ಜನ ದೊಡ್ಡ ಇಂಗ್ಲಿಷ್ ಅಧಿಕಾರಿಗಳನ್ನು ಕೊಲೆಮಾಡಿತು.

ಎರಡು ದಿನಗಳಾದ ಮೇಲೆ ಇಂಡಿಯಾದಲ್ಲೇ ಹುಟ್ಟಿ, ಸೈನ್ಯಾಧಿಕಾರಿಯಾಗಿದ್ದ ಬ್ರಿಗೇಡಿಯರ್ ಜನರಲ್ ರೆಜಿನಾಲ್ಡ್ ಇ. ಎಚ್. ಡಯ್ಯರ್ ಎಂಬಾತನು ಅಮೃತಸರದಲ್ಲಿ ಅಧಿಕಾರವನ್ನು ವಹಿಸಿಕೊಂಡು ಏಪ್ರಿಲ್ ೧೨ ರಲ್ಲಿ ಮೆರವಣಿಗೆ, ಸಭೆಗಳು ನಡೆಯಕೂಡದೆಂದು ಆಜ್ಞೆ ಹೊರಡಿಸಿದನು. ಆದರೆ ಪಟ್ಟಣದ ಅನೇಕ ಕಡೆ ಯಾರೂ ಈ ಆಜ್ಞೆ ಓದಿ ಹೇಳಲಿಲ್ಲ ಎಂದು ಹಂಟರ್ ವರದಿಯಿಂದ ತಿಳಿಯುತ್ತದೆ.

ಅನಂತರ ಏಪ್ರಿಲ್ ೧೩ ರಲ್ಲಿ ನಡೆದ ಜೆಲಿಯನ್‌ವಾಲ ಬಾಗಿನ ಕೊಲೆಯನ್ನು ವರದಿ ಹೇಳುತ್ತದೆ. ಇದರಿಂದ ಮುಂದಿನ ಚರಿತ್ರೆ ರೂಪುಗೊಂಡಿತು. ಅದು ಎಂದೆಂದಿಗೂ ಮರೆಯಲಾರದ ಘಟನೆಯಾಗಿ ಇಂಡಿಯಾ ಚರಿತ್ರೆಯಲ್ಲಿ ಉಳಿಯಿತು. ಜನರು ಸಂಜೆ ನಾಲ್ಕುವರೆ ಘಂಟೆಗೆ ದೊಡ್ಡ ಸಭೆ ಸೇರುವರೆಂಬ ವರ್ತಮಾನ ಜನರಲ್ ಡಯ್ಯರ್‌ಗೆ ಸುಮಾರು ಒಂದು ಘಂಟೆಗೆ ತಿಳಿಯಿತು. ಅದನ್ನು ನಿಲ್ಲಿಸಲು ಏಕೆ ಪ್ರಯತ್ನಿಸಲಿಲ್ಲವೆಂದು ಕೇಳಿದಾಗ ಆತ "ಸಾಧ್ಯವಾದಷ್ಟು ಬೇಗ ಅಲ್ಲಿಗೆ ಹೋದೆ. ನಾನೂ ಆಲೋಚಿಸಬೇಕಾಗಿತ್ತು" ಎಂದು ಉತ್ತರ ವಿತ್ತನು. ಹಂಟರ್ ವರದಿಯಲ್ಲಿ, "ನಾವು ಪ್ರಶ್ನಿಸಿದಾಗ ಡಯ್ಯರ್ ತಾನು ಕಾರಿನಲ್ಲಿ ಬರುತ್ತಿದ್ದಾಗ ಸಭೆ ಸೇರಕೂಡದೆಂಬ ತನ್ನ ಆಜ್ಞೆಯನ್ನು ಉಲ್ಲಂಘಿಸಿದ ತಕ್ಷಣ ಗುಂಡು ಹಾರಿಸಬೇಕೆಂದು ನಿರ್ಧರಿಸಿದನೆಂದೂ ಹೇಳಿದನು," ಎಂದಿದೆ. "ಖಂಡಿತಮಾಡಿಕೊಂಡಿದ್ದೆ. ಎಲ್ಲರನ್ನೂ ಕೊಲ್ಲಬೇಕೆಂದು ನಿಶ್ಚಯಿಸಿದ್ದೆ."

"ಜಲಿಯನ್ ವಾಲಬಾಗ್ ಇಟ್ಟಿಗೆ, ಕಲ್ಲುಗಳಿಂದ ತುಂಬಿದ ಆಯಾಕಾರದ ಪ್ರದೇಶ. ಸುತ್ತಲೂ ಗೋಡೆಗಳೂ, ಕಟ್ಟಡಗಳೂ ಇವೆ. ಹೊರಗಡೆಗೆ ಬರುವ ದಾರಿಗಳು ಇಕ್ಕಟ್ಟಾಗಿವೆ. ಜನರಲ್ ಡಯ್ಯರ್ ಪ್ರವೇಶಿಸಿದ ಕಡೆ ಬಾಗಿಲಿನ ಬಳಿ ಎತ್ತರವಾದ ಕಟ್ಟೆ ಇದೆ. ಎದುರುಗಡೆ ದೊಡ್ಡ

ಗುಂಪು ಸೇರಿತ್ತು. ಡಯ್ಯರ್ ಮತ್ತು ಆತನ ಸೈನ್ಯದಲ್ಲಿ ನೂರೈವತ್ತು ಗಜಗಳ ದೂರದಲ್ಲಿ ಎತ್ತರವಾದ ಕಟ್ಟೆಯ ಮೇಲೆ ಒಬ್ಬ ಮನುಷ್ಯ ನಿಂತು ಮಾತನಾಡುತ್ತಿದ್ದನು. ಸುಮಾರು ಹತ್ತಿಪ್ಪತ್ತು ಸಾವಿರ ಜನ ಸೇರಿದ್ದರು. ಕೆಲವರ ಬಳಿ ಕೋಲುಗಳಿದ್ದುವೇ ಹೊರತು ಒಬ್ಬರ ಬಳಿಯೂ ಬಂದೂಕು ಗಳಿರಲಿಲ್ಲ," ಎಂದು ವರದಿ ಹೇಳುತ್ತದೆ. ಬಂದೂಕು ಹಿಡಿದಿದ್ದ ನೇಪಾಳದ ಇಪ್ಪತ್ತೈದು ಸೈನಿಕರು, ಚಾಕುಗಳನ್ನು ಹಿಡಿದಿದ್ದ ನಲವತ್ತು ಘೂರ್ಕರು, ಎರಡು ಶಸ್ತ್ರ ಸಜ್ಜಿತ ಕಾರುಗಳೊಡನೆ ಡಯ್ಯರ್ ಬಾಗಿಗೆ ಹೋದನು.

ಡಯ್ಯರ್‌ನ ವಿಚಾರಣೆಯ ವರದಿ ಹೀಗಿದೆ:- ಪ್ರಶ್ನೆ:-ಶಸ್ತ್ರಸಜ್ಜಿತ ಕಾರುಗಳು ಒಳಕ್ಕೆ ಹೋಗಬಹುದಾಗಿದ್ದರೆ ಮೆಷೀನ್ ಬಂದೂಕುಗಳಿಂದ ಹೊಡೆಯುತ್ತಿದ್ದಿರಾ ?

ಉತ್ತರ :-ಇದ್ದೆನೆಂದು ತೋರುತ್ತದೆ.

ಕಾರುಗಳು ತುಂಬಾ ದೊಡ್ಡವಾಗಿರುವುದರಿಂದ ಜನರಲ್ ಡಯ್ಯರ್ ಬಾಗಿನೊಳಗೆ ಹೋದ ತಕ್ಷಣ ಎತ್ತರ ಪ್ರದೇಶದ ಎರಡು ಕಡೆಯೂ ಇಪ್ಪತ್ತೈದು ಜನ ಸೈನಿಕರನ್ನು ನಿಲ್ಲಿಸಿದನು. ತನ್ನ ಅಪ್ಪಣೆಗೆ ವಿರುದ್ಧವಾಗಿ ಜನ ಸೇರಿದ್ದುದರಿಂದ, ಚದರುವಂತೆ ಎಚ್ಚರಿಕೆ ಕೊಡದೆ ಬಂದೂಕು ಹೊಡೆಯುವಂತೆ ಅಪ್ಪಣೆ ಕೊಟ್ಟನು. ಹತ್ತು ನಿಮಿಷಕಾಲ ಬಂದೂಕು ಹಾರಿಸಿದರು.

ಗುಂಡು ಹಾರಲು ಪ್ರಾರಂಭವಾದ ತಕ್ಷಣ ಜನ ಚದುರಲಾರಂಭಿಸಿದರು. ೧೬೫೦ ಗುಂಡುಗಳನ್ನು ಹಾರಿಸಿದರು. ಒಟ್ಟಿಗೆ ಹಾರಿಸದೆ ಒಂದೊಂದನ್ನೂ ಗುರಿಯಿಟ್ಟು ಹಾರಿಸಿದರು. ೩೭೯ ಜನ ಸತ್ತರು. ಆದರ ಮೂರರಷ್ಟು ಜನರಿಗೆ ಗಾಯಗಳಾದುವು. ೧೧೩೭ ಜನರಿಗೆ ಗಾಯ, ೩೭೯ ಜನರ ಸಾವು! ೧೬೫೦ ಗುಂಡುಗಳಿಗೆ ೧೫೧೬ ಸಾವು ನೋವುಗಳು. ಗುಂಪು ತಪ್ಪಿಸಿಕೊಳ್ಳುವಂತೆಯೇ ಇರಲಿಲ್ಲ. ಗೋಡೆ ೫ ಅಡಿ ತಗ್ಗಾಗಿದ್ದ ಕಡೆಗೆ ಜನರು ಓಡಿದರು. ಅಲ್ಲಿಗೇ ಗುರಿಯಿಡಬೇಕೆಂದು ಡಯ್ಯರ್ ಸೈನಿಕರಿಗೆ ಅಪ್ಪಣೆ ಮಾಡಿದನು.

ಪ್ರಶ್ನೆ :—ಜನ ಹೆಚ್ಚಾಗಿದ್ದ ಕಡೆಗೇ ಗುಂಡು ಹಾರಿಸುವಂತೆ ಹೇಳಿದಿರಾ ?

ಉತ್ತರ :—ಹೌದು.

ಡಯ್ಯರ್ ತನ್ನ ಮೇಲಿನ ಸೈನ್ಯಾಧಿಕಾರಿಗಳಿಗೆ ಬರೆಯುತ್ತಾ "ಜನ ರನ್ನು ಚದುರಿಸುವ ಪ್ರಶ್ನೆಯೇ ಇರಲಿಲ್ಲ. ಅಲ್ಲಿದ್ದವರಲ್ಲೂ, ಪಂಜಾಬಿನಲ್ಲಿ ಎಲ್ಲಾ ಕಡೆಯೂ ಮನಸ್ಸಿನ ಮೇಲೆ ಪರಿಣಾಮವುಂಟಾಗುವ ಹಾಗೆ ಮಾಡಬೇಕಾಗಿತ್ತು. ಅದರಲ್ಲಿ ಕಾಠಿಣ್ಯದ ಮಾತೇ ಇಲ್ಲ" ಎಂದನು. ಜಲಿ ಯನ್‌ವಾಲ ಬಾಗಿನ ಕೊಲೆವಿಚಾರವಾಗಿ ಹಗುರವಾಗಿ ಮಾತನಾಡುತ್ತ "ನಾನು ಒಳ್ಳೆಯ ಕೆಲಸವನ್ನೇ ಮಾಡಿದೆನೆಂದುಕೊಂಡೆ" ಎಂದನು. ಹಂಟರ್ ವರದಿಯಲ್ಲಿ ಮಾತ್ರ "ಇದು ದುರದೃಷ್ಟವಶಾತ್ ಕರ್ತವ್ಯದ ತಪ್ಪು ಭಾವನೆಯಾಗಿತ್ತು." ಎಂದಿದೆ.

## ೧೩. ಸೆರೆಮನೆಯ ಹಾದಿ.

ಅಮೃತಸರದ ಕೊಲೆಗೆ ಗಾಂಧಿಯ ಉತ್ತರ :—ಅಸಹಕಾರ ಚಳು ವಳಿ.

ಬ್ರಿಟಿಷ್ ಸಾಮಾನುಗಳನ್ನು, ಗೌರವ ಪ್ರಶಸ್ತಿಗಳನ್ನು, ನ್ಯಾಯ ಸ್ಥಾನಗಳನ್ನು, ಶಾಲೆಗಳನ್ನು, ನೌಕರಿಗಳನ್ನು ಬಹಿಷ್ಕರಿಸಿ, ೧೯೧೯ ರ ನವೆಂಬರಿನಲ್ಲಿ ಹೊಸ ದೆಹಲಿಯಲ್ಲಿ ನಡೆದ ಮುಸ್ಲಿಂ ಸಭೆಯಲ್ಲಿ ಗಾಂಧಿ ಈ ಕಾರ್ಯಕ್ರಮ ಕೈಗೊಳ್ಳಬೇಕೆಂದು ಹೇಳಿದನು.

೧೯೧೯ ರ ಡಿಸೆಂಬರಿನಲ್ಲಿ ಸರ್ಕಾರ ಕೊಲೆ ನಡೆದ ಕಡೆ ಕಾಂಗ್ರೆಸ್ ವಾರ್ಷಿಕ ಅಧಿವೇಶನ ನಡೆಸಲು ಅಪ್ಪಣೆ ಕೊಟ್ಟಿತು. ಮುಸ್ಲಿಂ ನಾಯಕರು ಷೌಕತ್ ಮತ್ತು ಮಹಮುದ್ ಆಲಿಗಳನ್ನು ಸೆರೆಯಿಂದ ಬಿಡುಗಡೆ ಮಾಡಿ ಅಧಿವೇಶನಕ್ಕೆ ಹೋಗಲು ಅನುಮತಿ ಕೊಟ್ಟರು. ಡಯ್ಯರ್‌ನಿಂದಾದ ಅನ್ಯಾಯವನ್ನು ಮರೆಸಲು ಅದೇ ತಿಂಗಳಲ್ಲಿ ಚಕ್ರವರ್ತಿ ಮಾಂಟೆಗೂ-ಚೆಲ್ಮ್ಸ್‌ಫರ್ಡ್ ಸುಧಾರಣೆಗಳನ್ನು ಪ್ರಕಟಿಸಿದನು. ಇದರಿಂದಾಗಿ ಕೆಲವು ಪ್ರಾಂತ್ಯ ಮಂತ್ರಿತ್ವಗಳು ಭಾರತೀಯರಿಗೆ ಕೊಡಲ್ಪಟ್ಟವು. ಚಕ್ರವರ್ತಿ "ಹೊಸಯುಗ ಆರಂಭವಾಗುತ್ತಿದೆ." ಎಂದು ಘೋಷಿಸಿದನು.

ಗಾಂಧಿ ಹಾಗೆಂದೇ ಆಶಿಸಿದನು. ಕಾಂಗ್ರೆಸ್ ಸಭೆ ಅದನ್ನು ಒಪ್ಪಿ, ಜಾರಿಗೆ ತರಬೇಕೆಂದು ಹೇಳಿದನು. ಒಂದು ತಿಂಗಳು ಮುಂಚೆ ಪ್ರಾರಂಭಿ ಸಿದ್ದ ಅಸಹಕಾರವನ್ನು ಬಿಟ್ಟು, ಸಹಕಾರ ನೀಡಬೇಕೆಂದು ಹೇಳಿದನು.

" ನಂಬಿಕೆ ಸದ್ಗುಣ. ದೌರ್ಬಲ್ಯದಿಂದ ಅಪನಂಬಿಕೆ ಹುಟ್ಟಿಕೊಳ್ಳುತ್ತದೆ." ಭಾರತೀಯರಿಗೆ ತಾವು ಅಶಕ್ತರೆಂದು ಒಪ್ಪಿಕೊಳ್ಳುವ ಮನಸ್ಸಿರಲಿಲ್ಲ ವೆಂಬುದು ಆತನಿಗೆ ತಿಳಿದಿತ್ತು.

ಗಾಂಧಿಯ ಅಧಿಕಾರ ಹೆಚ್ಚುತ್ತಿತ್ತು. ಆತನು ಮಧ್ಯಮ ವರ್ಗಕ್ಕೆ ಸೇರಿದವನು, ರಾಜಕೀಯದಲ್ಲಿ ಮಧ್ಯಮ ವರ್ಗದ ಜನ ಆತನಿಗೆ ಬೆಂಬಲ ವಾಗಿ ನಿಂತಿದ್ದರು. ೧೯೧೯ ರ ಮತ್ತು ಅನಂತರ ನಡೆದ ಕಾಂಗ್ರೆಸ್ ಸಭೆ ಗಳಲ್ಲಿ ಮಧ್ಯಮವರ್ಗದ ಪ್ರತಿನಿಧಿಗಳೇ ಹೆಚ್ಚಾಗಿರುತ್ತಿದ್ದರು. ಬಡವರೂ ಬರುತ್ತಿದ್ದರು.

ಕಾಂಗ್ರೆಸ್ ಮಾಂಟೆಗೂ ಚೆಲ್ಮ್ಸ್‌ಫರ್ಡ್ ಸುಧಾರಣೆಗಳನ್ನು ಒಪ್ಪಿತು. ಆದರೆ ತಿಲಕ್, ಜಿನ್ನಾ ಮುಂತಾದ ಪ್ರಮುಖ ಮುಂದಾಳುಗಳು ಈ ಸುಧಾರಣೆಗಳನ್ನು ತಿರಸ್ಕರಿಸಿದರು; ಯುದ್ಧಾನಂತರದ ಬ್ರಿಟಿಷ್ ಪ್ರಮಾಣಗಳಿಗೆ ಬೆಲೆಯಿಲ್ಲವೆಂಬ ಅಭಿಪ್ರಾಯವೂ ಹೆಚ್ಚುತ್ತಿತ್ತು; ಬ್ರಿಟಿಷ್ ಆಧಿಪತ್ಯದ ಸ್ವತಂತ್ರ ರಾಷ್ಟ್ರವಾಗುವ ಸೂಚನೆ ಈ ಸುಧಾರಣೆಗಳಲ್ಲಿರಲಿಲ್ಲ. ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಹೊಸ ತಲೆ ಮಾರಿನ ಜನಕ್ಕೆ ನಂಬಿಕೆಯಿರ ಲಿಲ್ಲ. ವೈಸರಾಯಿ ಲಾರ್ಡ್ ಚೆಲ್ಮ್ಸ್‌ಫರ್ಡ್ ಡಯ್ಯರನನ್ನು ನಿರಪರಾಧಿ ಯೆಂದು ತೀರ್ಪಿತ್ತನು. ಹಂಟರ್ ವರದಿ ಆತನು ತಪ್ಪಿತಸ್ಥನೆಂದು ಒಪ್ಪಿ ಕೊಂಡರೂ, ಆತನ ನಡತೆಗೆ ಪರಿಹಾರ ತೋರಲಿಲ್ಲ. ಇಸ್ಲಾಂ ಮತಕ್ಕೆ ಸೇರಿದ ಟರ್ಕಿ ಸುಲ್ತಾನ ಕಲೀಫನನ್ನು ಸಿಂಹಾಸನದಿಂದ ಇಳಿಸಿ, ಟರ್ಕಿಯ ಮೇಲೆ ಯುದ್ಧಾನಂತರ ತೀವ್ರ ಕ್ರಮ ಕೈಗೊಂಡುದರಿಂದ ಮುಸ್ಲಿಂ ಜನಾಂ ಗಕ್ಕೂ ಇಂಡಿಯಾ ಮೇಲೆ ದ್ವೇಷವುಂಟಾಗಿತ್ತು.

ಹಿಂದು ಮುಸ್ಲಿಮರ ಐಕ್ಯತೆಯೇ ಧ್ಯೇಯವಾಗುಳ್ಳವನು, ಯುವಕ ರಲ್ಲಿ ಸಹಾನುಭೂತಿಯುಳ್ಳವನು, ಉನ್ನತ ನೈತಿಕ ಧ್ಯೇಯಗಳುಳ್ಳವನು ಆದ ಗಾಂಧಿ ಪುನಃ ಅಸಹಕಾರವನ್ನು ಕೈಗೊಂಡನು. ೧೯೨೦ ರ ಡಿಸೆಂಬ ರಿನಲ್ಲಿ ನಾಗಪುರದಲ್ಲಿ ನಡೆದ ಕಾಂಗ್ರೆಸ್ ಸಭೆಯಲ್ಲಿ ಹಿಂದಿನ ವರ್ಷದ ಅಭಿಪ್ರಾಯವನ್ನು ಬದಲಾಯಿಸಿ ಅಸಹಕಾರಕ್ಕೆ ಬೆಂಬಲ ಕೊಟ್ಟನು. ದಕ್ಷಿಣ ಆಫ್ರಿಕದಲ್ಲಿ ತನಗೆ ದೊರೆತಿದ್ದ ಎರಡು ಪ್ರಶಸ್ತಿ ಪದಕಗಳನ್ನು ವೈಸರಾಯಿಗೆ ಕಳುಹಿಸಿ ಹೀಗೆಂದು ಪತ್ರ ಬರೆದನು, " ತನ್ನ ದುರ್ನೀತಿ

ಯನ್ನು ಒಪ್ಪವಿಟ್ಟುಕೊಳ್ಳಲು ಅನ್ಯಾಯದಿಂದ ಅನ್ಯಾಯಕ್ಕೆ ಸಾಗುತ್ತಿರುವ ಸರ್ಕಾರದ ವಿಚಾರದಲ್ಲಿ ಗೌರವವನ್ನಾಗಲೀ ಅಭಿಮಾನವನ್ನಾಗಲೀ ಇಟ್ಟುಕೊಳ್ಳಲು ನನಗೆ ಸಾಧ್ಯವಿಲ್ಲ."

ಅಭಿಮಾನದಿಂದ, ಚಕ್ರಾಧಿಪತ್ಯವನ್ನೇ ತಿರಸ್ಕರಿಸುವ ಗಾಂಧಿಯು ಮತ್ತು ಭಾರತದ ಜೀವನದಲ್ಲೇ ಮಹತ್ತರವಾದ ಈ ಬದಲಾವಣೆ ಜಲಿಯನ್‌ವಾಲಬಾಗಿನ ರಕ್ತಸ್ನಾನದಿಂದುಂಟಾದುದು. ಮಹಾತ್ಮನ ರಕ್ತಗತವಾಗಿದ್ದ ಶಾಂತಿ ಮಾರ್ಗವನ್ನು ಪ್ರತಿಬಿಂಬಿಸಿದ ವಿಶ್ವಾಸ ಸಹಕಾರದ ಅವಕಾಶ ದೇಶದ ಕ್ರೋಧದಲ್ಲಿ ಮುಚ್ಚಿಹೋಯಿತು. ತಾನು ಜನರ ಮುಂದಾಳಾಗಿ ನಿಲ್ಲದಿದ್ದರೆ ಕ್ರೋಧದ ಹಿಡಿತಕ್ಕೆ ಜನ ಸಿಕ್ಕುವರೆಂಬ ಭೀತಿ ಅನೇಕ ಸಲ ಗಾಂಧಿಯ ಕಾರ್ಯಗಳನ್ನು ರೂಪಿಸುತ್ತಿತ್ತು. ಅಂತಹ ಸಮಯಗಳಲ್ಲಿ ಆತನು ಜನರಿಗೆ ಪ್ರಿಯವಾದ ಗುರಿಗೆ ನಡೆದರೂ ತನ್ನದೇ ಆದ ರೀತಿಯಲ್ಲಿ ನಡೆಯುವಂತೆ ಒತ್ತಾಯಪಡಿಸುತ್ತಿದ್ದನು. ೧೯೨೨ರ ಡಿಸೆಂಬರಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧಿ ಇಂಡಿಯಾದ ಅಸಹಕಾರ ಅಹಿಂಸೆಯಿಂದ ಕೂಡಿದ್ದರೆ ಒಂದು ವರ್ಷದೊಳಗೆ ಸ್ವಾತಂತ್ರ್ಯ ದೊರಕುವುದಾಗಿ ವಚನವಿತ್ತನು.

ಗಾಂಧಿ ತನ್ನ ತತ್ವವನ್ನು ಜನರಿಗೆ ತಿಳಿಸಿದನು. ಮೋತಿಲಾಲ್ ನೆಹರು ವಕೀಲಿವೃತ್ತಿಯನ್ನು ಬಿಟ್ಟು ಮದ್ಯಪಾನವನ್ನು ತ್ಯಜಿಸಿ ಅಸಹಕಾರ ಚಳುವಳಿಗೆ ಸೇರಿದನು. ಕಲ್ಕತ್ತದ ಪ್ರಮುಖ ವಕೀಲ ಸಿ. ಆರ್. ದಾಸ್, ಅಹಮದಾಬಾದಿನ ಧನಿಕ ವಕೀಲ ವಲ್ಲಭಾಯ್ ಪಟೇಲ್, ಜವಾಹರ್ ಲಾಲ್ ನೆಹರು ಮತ್ತು ಬೇರೆ ನೂರಾರು ಜನರು ಬ್ರಿಟಿಷ್ ನ್ಯಾಯಸ್ಥಾನಗಳನ್ನು ಬಿಟ್ಟರು. ವಿಶ್ವವಿದ್ಯಾಲಯದ ತರುಣರು ಶಾಲೆಗಳನ್ನು ಬಿಟ್ಟರು. ಉಪಾಧ್ಯಾಯರು, ವಿದ್ಯಾರ್ಥಿಗಳು, ಅಸಹಕಾರ ಉಪದೇಶಿಸಲು ಹಳ್ಳಿಗಳಿಗೆ ಹೋದರು. ರೈತರ ಅಸಹಕಾರವೆಂದರೆ ತೆರಿಗೆ ಕೊಡದಿರುವುದು, ಹೆಂಡ ಕುಡಿಯದಿರುವುದು, ಎರಡರಿಂದಲೂ ಸರ್ಕಾರಕ್ಕೆ ತುಂಬಾ ನಷ್ಟ.

ಬಿಸಿಲುಕಾಲದಲ್ಲಿ ಏಳುತಿಂಗಳು ಕಾಲ ಕೊಳಕಾದ ರೈಲುಗಳಲ್ಲಿ ಪ್ರಯಾಣಮಾಡುತ್ತ, ಲಕ್ಷಾಂತರ ಜನರು ಸೇರುತ್ತಿದ್ದ ಸಭೆಗಳನ್ನುದ್ದೇಶಿಸಿ ಮಾತನಾಡುತ್ತ, ಗಾಂಧಿ ದೇಶದಲ್ಲೆಲ್ಲಾ ಪ್ರಯಾಣ ಮಾಡಿದನು. ಆಗಿನ

ಧ್ವನಿ ವರ್ಧಕಯಂತ್ರವಿಲ್ಲದ ಕಾಲದಲ್ಲಿ ಗಾಂಧಿಯ ಆತ್ಮಕ್ಕೆ ಮಾತ್ರ ಜನರನ್ನು ತಾಗುವ ಶಕ್ತಿಯಿತ್ತು. ಗುಂಪುಗುಂಪುಜನ ಕೋಲಾಹಲ ಮಾಡುತ್ತಿದ್ದರು. ಅದರಿಂದ ಅವರು ಪುನೀತರಾಗುತ್ತಿದ್ದರು. ಒಂದು ಸಣ್ಣ ಊರಿನ ಜನ, ಗಾಂಧಿ ಕುಳಿತಿದ್ದ ರೈಲು ತಮ್ಮ ಊರಿನಲ್ಲಿ ನಿಲ್ಲದಿದ್ದರೆ ತಾವು ಕಂಬಿಗಳ ಮೇಲೆ ಮಲಗುವುದಾಗಿ ಹೇಳಿಕಳುಹಿಸಿದರು. ರೈಲು ನಿಂತಿತು. ನಿದ್ರೆಯಿಂದೆದ್ದು ಗಾಂಧಿ ಬರಲು, ಅಲ್ಲಿಯವರೆಗೆ ಗಲಾಟೆ ಮಾಡುತ್ತಿದ್ದ ಗುಂಪು ರೈಲ್ವೆನಿಲ್ದಾಣದಲ್ಲಿ ಮೊಣಕಾಲೂರಿ ನಿಂತು ಕಣ್ಣೀರು ಸುರಿಸಿತು. ಏಳುತಿಂಗಳ ಪ್ರವಾಸದಲ್ಲಿ ಮೂರು ಹೊತ್ತಿನ ಊಟವೂ ಸೇರಿ ಹದಿನಾರು ಔನ್ಸು ಮೇಕೆ ಹಾಲು, ಮೂರು ಚೂರು ರೊಟ್ಟಿ, ಎರಡು ಕಿತ್ತಿಲೆ ಹಣ್ಣು ಸ್ವಲ್ಪ ದ್ರಾಕ್ಷಿ. ಆತನಲ್ಲಿ ಶಕ್ತಿ ಉಕ್ಕುತ್ತಿತ್ತು.

ಅಸಹಕಾರ ಚಳುವಳಿಗಾಗಿ ಗಾಂಧಿ ಕೈಗೊಂಡ ಈ ಪ್ರಯಾಣ ಮತೋದ್ಧಾರ ಪ್ರಚಾರಕ್ಕಾಗಿ ಕೈಗೊಂಡ ಪ್ರವಾಸದಂತಿತ್ತು. ಮುಸ್ಲಿಂ ಆಲಿ ಸಹೋದರರೂ ಗಾಂಧಿಯೊಡನೆ ಕೆಲಕಾಲ ಸಂಚರಿಸಿದರು. ಸಭೆಗಳಲ್ಲಿ ಪರದೇಶೀ ಬಟ್ಟೆ ಹಾಕಕೂಡದೆಂದು ಹೇಳುತ್ತಿದ್ದನು. ಅವರು ಮೆಚ್ಚಿಗೆ ಸೂಚಿಸಿದರೆ ಆ ಬಟ್ಟೆಗಳನ್ನು ತನ್ನೆದುರಿಗೆ ಗುಡ್ಡೆ ಹಾಕಬೇಕೆನ್ನುತ್ತಿದ್ದನು. ಈ ಷರ್ಟು, ಷರಾಯಿ, ಕೋಟು, ಟೋಪಿ, ಪೂಗಳ ಗುಡ್ಡೆಗೆ ಗಾಂಧಿ ಕಡ್ಡಿಗೀರಿ ಹಚ್ಚುವನು ಬೆಂಕಿ ಉರಿಯುತ್ತಿರಲು ಎಲ್ಲರೂ ತಮ್ಮ ಬಟ್ಟೆಗಳನ್ನು ನೇಯ್ದುಕೊಳ್ಳಬೇಕೆನ್ನುವನು. ತಾನು ಪ್ರತಿನಿತ್ಯ ಅರ್ಧ ಗಂಟೆ ನೂಲು ತೆಗೆಯುವನು. ಈ ನೂಲು ತೆಗೆಯುವುದು, ತೆಗೆಯುವವನ ಮನಸ್ಸನ್ನು ದೇವರೆಡೆಗೊಯ್ಯುವ ಪವಿತ್ರಸಂಸ್ಕಾರವೆಂದು ಕರೆಯುತ್ತಿದ್ದರು. ಅತ್ಯಲ್ಪಕಾಲದಲ್ಲಿ ಆತನೆದುರಿಗೆ ಯಾವ ಭಾರತೀಯನೂ ಪರದೇಶಿವಸ್ತ್ರವನ್ನುಟ್ಟು ಹೋಗುತ್ತಿರಲಿಲ್ಲ.

ವರ್ಷ ಕಳೆದರೂ ಗಾಂಧಿ ಭರವಸೆ ಕೊಟ್ಟ ಸ್ವರಾಜ್ಯ ಬರಲಿಲ್ಲ. ಅನೇಕಜನ ದೇಶಭಕ್ತರು ಬ್ರಿಟಿಷ್ ಆಧಿಪತ್ಯಕ್ಕೆ ವಿರುದ್ಧವಾಗಿ ದಂಗೆಯೇಳಬೇಕೆಂದು ಸಲಹೆ ಕೊಟ್ಟರು. ಕಾಂಗ್ರೆಸ್ಸಿನಲ್ಲಿ ಅಸಮಾಧಾನಗಳು ಹೆಚ್ಚಿದುವು. ನೂಲುವುದು, ಮದ್ಯಪಾನ ನಿಷೇಧ, ಬಾಯಿಮಾತಿನಲ್ಲಿ ಸರ್ಕಾರವನ್ನೆದುರಿಸುವುದು, ಮುಂತಾದ ಮಹಾತ್ಮನ ಕಾರ್ಯಗಳನ್ನು ಅಪಹಾಸ್ಯ

ಮಾಡಿದರು. ಯುವಕರು ಸುಮ್ಮನಿರಲು ಒಪ್ಪಲಿಲ್ಲ.

ಗಾಂಧಿ, "ಇಂಡಿಯಾ ಕತ್ತಿಯನ್ನೆತ್ತಿದರೆ ಕ್ಷಣಿಕವಿಜಯ ಸಿಕ್ಕಬಹುದು; ಆದರೆ ಇಂಡಿಯಾ ನನ್ನ ಹೃದಯದ ಹೆಮ್ಮೆಯ ಸ್ಥಾನವನ್ನು ಕಳೆದುಕೊಳ್ಳುವುದು," ಎಂದರು. ಅಹಿಂಸೆಯ ವಿಚಾರದಲ್ಲಿ ಆತನು ಬಗ್ಗುವಂತಿರಲಿಲ್ಲ. ಅಹಿಂಸೆಯೆಂದರೆ ಆತನಿಗೆ ಉನ್ಮತ್ತಾಭಿಮಾನ. ಆತನನ್ನು ಬಿಟ್ಟು ದೇಶದ ರಾಜಕೀಯ ಚಳುವಳಿ ನಡೆಯುವಂತಿರಲಿಲ್ಲವಾದುದರಿಂದ ೧೯೨೧ ರ ನವೆಂಬರ್ ೪ ರಲ್ಲಿ ದೆಹಲಿಯಲ್ಲಿ ಸೇರಿದ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿ, ಅಹಿಂಸಾ ಅಸಹಕಾರವನ್ನೊಪ್ಪಿ, ಆತನ ಇಚ್ಛೆಗೆ ವಿರೋಧವಾಗಿ ನಡೆಯುವುದಿಲ್ಲವೆಂದು ಒಪ್ಪಿಕೊಂಡಿತು. ಪರದೇಶೀ ಬಟ್ಟೆಗಳನ್ನು ಸುಡುತ್ತಿದ್ದ ಜ್ವಾಲೆ, ಜನರ ಮನಸ್ಸಿಗೂ ಹಬ್ಬಬಹುದೆಂದು ರವೀಂದ್ರನಾಥ ಠಾಕೂರರು ಗಾಂಧಿಯನ್ನು ಎಚ್ಚರಿಸಿದರು. ಗಾಂಧಿಗೂ ಹೆದರಿಕೆಯಾಯಿತು. ೧೯೨೧ ರ ಡಿಸೆಂಬರ್ ೨೨ ರ ಜನವರಿಯಲ್ಲಿ ರಾಜಕೀಯ ಅಪರಾಧಗಳಿಗಾಗಿ ಹತ್ತುಸಾವಿರ ಇಂಡಿಯನ್ನರು ಸೆರೆಮನೆ ಸೇರಿದರು. ಮೋತಿಲಾಲ್ ನೆಹರು, ಸಿ. ಆರ್. ದಾಸ್ ಮತ್ತು ನೂರಾರುಜನ ನಾಯಕರು ಆಗಲೇ ಸೆರೆಯಲ್ಲಿದ್ದರು. ಅನೇಕ ಪ್ರಾಂತ್ಯಗಳಲ್ಲಿ ರೈತರು ತೆರಿಗೆ ಕೊಡಲು ನಿರಾಕರಿಸಿದರು. ಇಂಡಿಯಾವನ್ನು ಕ್ರೋಧವಾವರಿಸಿತ್ತು.

೧೯೨೧ ರ ಡಿಸೆಂಬರಿನಲ್ಲಿ ಅಹಮದಾಬಾದಿನಲ್ಲಿ ನಡೆದ ವಾರ್ಷಿಕ ಕಾಂಗ್ರೆಸ್ ಸಭೆಯಲ್ಲಿ ಗಾಂಧಿ, ಬ್ರಿಟನ್ನಿಗೆ ಕಡೆಯ ಬೇಡಿಕೆಯನ್ನು ವಿನಯಪೂರ್ವಕವಾಗಿ ಅರ್ಪಿಸಿದನು. "ನೀವೇನು ಮಾಡಿದರೂ ಚಿಂತಿಯಿಲ್ಲ; ನಮ್ಮನ್ನು ಹೇಗೆ ಅಡಗಿಸಿದರೂ ಪರವಾಯಿಲ್ಲ; ಒಂದು ದಿನ ನೀವು ಪಶ್ಚಾತ್ತಾಪ ಪಡಬೇಕಾಯಿತು. ಮುನ್ನೂರು ಕೋಟಿ ಜನ ಭಾರತೀಯರನ್ನು ಶತ್ರುಗಳಾಗಿ ಮಾಡಿಕೊಳ್ಳಬೇಡಿ" ಬ್ರಿಟಿಷರ ವಿವೇಕಕ್ಕೆ ಮಾಡಿದ ಈ ವಿನಂತಿ, ಸಹಾಯದ ಬೇಡಿಕೆಯೂ ಆಗಿತ್ತು. ಭಾರತೀಯರು ದಬ್ಬಾಳಿಕೆಯನ್ನಡಗಿಸುವ ಉದ್ರೇಕದಲ್ಲಿ ಏನು ಮಾಡುವರೋ ಎಂದು ಗಾಂಧಿ ಹೆದರಿದರು.

ಬ್ರಿಟನ್ನಿನ ಮೇಲೆ ಪರಿಣಾಮವನ್ನುಂಟುಮಾಡಿ, ತನ್ನ ಮತ್ತು ಭಾರತದ ಕಾರ್ಯಾಭಿಲಾಷೆಯನ್ನು ತೃಪ್ತಿಪಡಿಸಲು ಗಾಂಧಿ ಬೊಂಬಾ

ಯಿಯ ಬರ್ದೋಲಿಯಲ್ಲಿ ಅಸಹಕಾರ ಚಳುವಳಿ ಪ್ರಾರಂಭಿಸಿದನು. ಅಲ್ಲಿ ತಾನೇ ಸ್ವತಃ ನಿಂತು ಪ್ರಯೋಗ ನಡೆಸಬಹುದಾಗಿತ್ತು. ೧೯೨೨ ರ ಫೆಬ್ರವರಿ ೧ ರಲ್ಲಿ ಹೊಸ ವೈಸರಾಯಿ ಲಾರ್ಡ್ ರೀಡಿಂಗಿಗೆ ತನ್ನ ಕಾರ್ಯ ಕ್ರಮವನ್ನು ತಿಳಿಸಿದನು.

ದೇಶದಲ್ಲೆಲ್ಲಾ ಅಸಹಕಾರವನ್ನು ಶಾಂತಿಯುತವಾಗಿ ನಡೆಸಲು ಸಾಧ್ಯವೋ, ಇಲ್ಲವೋ ಎಂಬ ಅನುಮಾನದಿಂದಲೂ, ಭಾರತೀಯರ ಸಂಶಯವನ್ನು ಕಂಡು ಬ್ರಿಟಿಷರು ಸ್ವಾತಂತ್ರ್ಯಕ್ಕೆ ಅರ್ಹರೆಂದು ತಿಳಿದು ಸ್ವರಾಜ್ಯ ಕೊಡಬಹುದೆಂದೂ ನಂಬಿ, ಅಸಹಕಾರವನ್ನು ಬರ್ದೋಲಿಗೆ ಕಟ್ಟುಮಾಡಿದನು.

ಬರ್ದೋಲಿಯಲ್ಲಿ ಅಸಹಕಾರ ಪ್ರಾರಂಭವಾಗುವ ವೇಳೆಗೆ, ಫೆಬ್ರವರಿ ೮ ರಲ್ಲಿ, ಬರ್ದೋಲಿಯಿಂದ ೮೦೦ ಮೈಲಿ ದೂರದಲ್ಲಿ ಸಂಯುಕ್ತ ಪ್ರಾಂತ್ಯ ಗಳ ಚೌರಿ ಚೌರ ಎಂಬ ಸಣ್ಣ ಪಟ್ಟಣದಲ್ಲಿ ಮೂರು ದಿನಗಳ ಕೆಳಗೆ ನಡೆದ ಹಿಂಸಾಕೃತ್ಯಗಳ ವರ್ತಮಾನ ಗಾಂಧಿಗೆ ತಲುಪಿತು. ನ್ಯಾಯಬದ್ಧವಾದ ಒಂದು ಮೆರವಣಿಗೆ ನಡೆಯಿತು. ಗಾಂಧಿ ಯಂಗ್ ಇಂಡಿಯಾದಲ್ಲಿ ಬರೆದರು, "ಆದರೆ ಮೆರವಣಿಗೆ ಮುಂದೆ ಹೋಗಲು, ಹಿಂದುಳಿದಿದ್ದ ಜನರ ಮೇಲೆ ಪೋಲೀಸರು ಕೈಮಾಡಿದರು. ಅವರು ಸಹಾಯಕ್ಕಾಗಿ ಕೂಗಿಕೊಂಡರು. ಜನರು ಹಿಂದಿರುಗಿದರು, ಪೋಲೀಸರು ಗುಂಡು ಹಾರಿಸಿದರು. ಮದ್ದು ಮುಗಿಯಲು, ರಕ್ಷಣೆಗಾಗಿ ಅವರು ಠಾಣೆಗೆ ಹಿಂದಿರುಗಿದರು- ನನಗೆ ವರ್ತಮಾನ ಬಂದಂತೆ ಜನರು ಠಾಣೆಗೆ ಬೆಂಕಿಯಿಟ್ಟರು. ಒಳಗೆ ಸೇರಿಕೊಂಡಿದ್ದ ಪೋಲೀಸರು ಪ್ರಾಣದಾಸೆಯಿಂದ ಹೊರಗೆ ಬರಲು ಅವರನ್ನು ಕಡಿದು ತುಂಡು ಮಾಡಿ, ದೇಹಗಳನ್ನು ಬೆಂಕಿಯೊಳಕ್ಕೆಸೆದರು."

ಇಪ್ಪತ್ತೆರಡು ಜನ ಪೋಲೀಸರ ಈ ಭೀಕರ ಕೊಲೆ, ಅಪಶಕುನವಾಯಿತೆಂದು ಗಾಂಧಿ ಹೇಳಿದನು. "ಒಂದು ವೇಳೆ ಬರ್ದೋಲಿಯ ಅಹಿಂಸಾ ಅಸಹಕಾರ ದೇವರ ದಯದಿಂದ ವಿಜಯ ಹೊಂದಿ, ಸರ್ಕಾರ ಅಧಿಕಾರ ಬಿಟ್ಟುಕೊಟ್ಟರೆ ಇಂತಹ ಘೋರಕೃತ್ಯ ಮಾಡುವವರನ್ನು ತಡೆಯುವರಾರು?" ತನ್ನಿಂದಾಗಬಹುದೆಂದು ಗಾಂಧಿಗೆ ನಿಶ್ಚಯವಿರಲಿಲ್ಲ. ಆದುದರಿಂದ ಬರ್ದೋಲಿಯ ಸತ್ಯಾಗ್ರಹವನ್ನು ನಿಲ್ಲಿಸಿ, ಇಂಡಿಯಾದ

ಲ್ಲೆಲ್ಲೂ ಸರ್ಕಾರದ ವಿರುದ್ಧ ಪ್ರದರ್ಶನಗಳು ನಡೆಯಕೂಡದೆಂದು ಹೇಳಿದನು.

"ನಮ್ಮ ಅವಮಾನವನ್ನು, ಸೋಲಿನ ತೋರಿಕೆಯನ್ನು ನೋಡಿ ಶತ್ರುಗಳು ಸಂತೋಷಪಡಲಿ. ವಚನ ಬಾಹಿರರಾಗಿ ಪಾಪಿಷ್ಠರಾಗುವುದಕ್ಕಿಂತ, ಹೇಡಿಗಳು, ದುರ್ಬಲರೆನ್ನಿಸಿಕೊಳ್ಳುವುದೇ ಮೇಲು. ಆತ್ಮದ್ರೋಹಿಗಳಾಗುವುದಕ್ಕಿಂತ, ವಚನ ಭ್ರಷ್ಟರಂತೆ ಕಾಣುವುದು ಸಾವಿರ ಪಾಲು ಮೇಲು," ಎಂದನು.

ಗಾಂಧಿಯು ಒಂದು ಮಾತಿಗೆ ಇಂಡಿಯಾ ದಂಗೆಯೇಳುತ್ತಿತ್ತು. ಬ್ರಿಟನ್ನನ್ನು ಇಂಡಿಯಾದಿಂದ ಓಡಿಸಬಹುದೆನ್ನುವ ತೀವ್ರವಾದಿಗಳಿದ್ದರು. ಯುದ್ಧದ ನೋವಿನಿಂದ ಪ್ರಪಂಚವಿನ್ನೂ ಚೇತರಿಸಿಕೊಂಡಿರಲಿಲ್ಲ; ಇಂಗ್ಲೆಂಡಿಗೆ ಜಗತ್ತಿನ ಅನೇಕ ಕಡೆ ತೊಂದರೆಯೊದಗಿತ್ತು. ಆದರೆ ಗಾಂಧಿಗೆ ದೇಶದ ರಕ್ತಸ್ನಾನದಿಂದ ಲಭಿಸುವ ಸ್ವಾತಂತ್ರ್ಯ ಬೇಕಾಗಿರಲಿಲ್ಲ. ಕೊಲೆಯಿಂದ ಜನಿಸಿದ ಸ್ವತಂತ್ರ ಭಾರತದ ನೆತ್ತಿಯ ಮೇಲೆ ಆ ಕಲೆ ಅನೇಕ ವರ್ಷಗಳವರೆಗೆ ಮಾಸುವುದಿಲ್ಲ. ಆಗಂತೂ ಸಂದೇಹಾಸ್ಪದವಾಗಿದ್ದ ಗುರಿಯನ್ನು, ಕೆಟ್ಟಮಾರ್ಗ ವಿಷಪೂರಿತವಾಗಿ ಮಾಡುವುದೆಂದು ಬಿಟ್ಟುಕೊಟ್ಟನು.

ಅಸಹಕಾರವನ್ನೂ, ದಂಗೆಯನ್ನೂ ತ್ಯಜಿಸಿ, ಸರ್ಕಾರವನ್ನು ಬಹಿರಂಗವಾಗಿ ಎದುರಿಸಕೂಡದೆಂದು ಕಟ್ಟುಮಾಡಿ ಗಾಂಧಿ ನಿಶ್ಶಸ್ತ್ರನಾದಾಗ, ಲಾರ್ಡ್ ರೀಡಿಂಗ್ ಆತನನ್ನು ಬಂಧಿಸಿದನು.

ಲಂಡನ್ನಿನಿಂದಲೂ, ಇಂಡಿಯಾದ ಪ್ರಾಂತ್ಯ ಗವರ್ನರುಗಳಿಂದಲೂ, ಗಾಂಧಿಯನ್ನು ಬಂಧಿಸಬೇಕೆಂದು ಲಾರ್ಡ್ ರೀಡಿಂಗಿಗೆ ಬಲವಂತ ಬಂದಿತ್ತು; ಆದರೆ ಆತನೇ ಒಪ್ಪಿರಲಿಲ್ಲ. ಹಡಗಿನ ಚೀಟಿ ಹುಡುಗನಾಗಿದ್ದು, ಮುಖ್ಯ ನ್ಯಾಯಾಧೀಶನಾಗಿ, ವಾಷಿಂಗ್‌ಟನ್ನಿನಲ್ಲಿ ರಾಯಭಾರಿಯಾಗಿ ಈಗ ವೈಸರಾಯಿಯಾಗಿದ್ದನು. ಬರಿಯ ಆಡಿದ ಬರೆದ ಮಾತುಗಳಿಗಾಗಿ ಬಂಧನವನ್ನು ನ್ಯಾಯ ತಿಳಿದ ಆತನ ಮನಸ್ಸು ಒಪ್ಪಲಿಲ್ಲ. "ಗಾಂಧಿ ಏನಾದರೂ ಅಕೃತ್ಯ ನಡೆಸಿದರೆ, ಆತನನ್ನು ಸೆರೆ ಹಿಡಿದುದರಿಂದಾಗುವ ಪರಿಣಾಮವನ್ನು ನಾನು ನೋಡಿಕೊಳ್ಳಬಲ್ಲೆ," ಎಂದನು. ಆದರೂ ಗಾಂಧಿ ಏನೂ ಕಾರ್ಯಕ್ರಮದಲ್ಲಿ ನಿರತನಾಗುವುದಿಲ್ಲವೆಂದು

ಖಂಡಿತವಾದಾಗ ಆತನನ್ನು ಸೆರೆಹಿಡಿದನು. ೧೯೨೨ ರ ಮಾರ್ಚ್ ೯ರ ಯಂಗ್ ಇಂಡಿಯಾ ಪತ್ರಿಕೆಯಲ್ಲಿ "ನಾನು ಸೆರೆಸಿಕ್ಕಿದರೆ," ಎಂಬ ಲೇಖನ ದಲ್ಲಿ ಗಾಂಧಿ, "ಸರ್ಕಾರ ರಕ್ತಕೋಡಿ ಹರಿಸಿದರೆ ನನಗೆ ಭೀತಿಯಿಲ್ಲ. ಆದರೆ ನನಗೋಸ್ಕರವಾಗಿಯಾಗಲಿ, ನನ್ನ ಹೆಸರಿನಲ್ಲಾಗಲಿ, ಜನ ಸರ್ಕಾರ ವನ್ನು ದೂಷಿಸಿದರೂ ನನಗೆ ತುಂಬಾ ನೋವುಂಟಾಗುತ್ತದೆ." "ನಾನು ಸೆರೆಸಿಕ್ಕಿದಾಗ ಜನ ಸಮತೆಯನ್ನು ಕಳೆದುಕೊಂಡರೆ ನನಗೆ ಅದು ಅಪ ಮಾನ," ಎಂದು ಬರೆದನು. ಮಾರ್ಚ್ ೧೦ ರಲ್ಲಿ ರಾತ್ರಿ ೧೦-೩೦ ಘಂಟೆ ಯಲ್ಲಿ ಆತನನ್ನು ಸೆರೆಹಿಡಿದರು.

ಗಾಂಧಿ ಹಾಗಾಗುವಂತೆ ಮಾಡಿದ್ದನು. ಮೂರು ರಾಜದ್ರೋಹ ಲೇಖನಗಳನ್ನು ಬರೆದನೆಂಬುದೇ ಆಪಾದನೆ. ೧೯೨೧ರ ಸಪ್ಟೆಂಬರ್ ೧೯ರ ಲೇಖನದಲ್ಲಿ ಆತನು, "ಸಿಪಾಯಿಗಾಗಲಿ, ಬೇರೆಯವರಿಗಾಗಲಿ ಈ ಸರ್ಕಾರದ ಸೇವೆ ಪಾಪಕರವೆಂದು ಹೇಳಲು ನನಗೆ ಯಾವ ಸಂದೇಹವೂ ಇಲ್ಲ. ಕಾಂಗ್ರೆಸ್ಸಿನ ಮತವೇ ರಾಜದ್ರೋಹ.........ಅಸಹಕಾರ, ಮತೀಯ ಮತ್ತು ನೈತಿಕ ಚಳುವಳಿಯಾದರೂ ಸರ್ಕಾರವನ್ನುರುಳಿಸುವುದೇ ಅವರ ಧ್ಯೇಯವಾದುದರಿಂದ, ನ್ಯಾಯ ಶಾಸ್ತ್ರದ ಪ್ರಕಾರ ರಾಜದ್ರೋಹವೆಂದು ಎಣಿಸಲ್ಪಡುತ್ತದೆ."

೧೯೨೧ ರ ಡಿಸೆಂಬರ್ ೨೧ರಲ್ಲಿ, "ಅಸಹಕಾರ ಕೈಗೊಂಡಿರುವವರು ಸರ್ಕಾರದೊಡನೆ ಹೋರಾಡುತ್ತಿರುವರೆಂದು ಲಾರ್ಡ್ ರೀಡಿಂಗ್ ತಿಳಿಯ ಬೇಕು. ಅವರು ದಂಗೆ ಹೂಡಿದ್ದಾರೆ. ಅವರಿಂದ ತೊಂದರೆಯಾಗದಂತೆ ಮಾಡಲು ಲಾರ್ಡ್ ರೀಡಿಂಗ್‌ಗೆ ಹಕ್ಕಿದೆ." ಎಂದು ಬರೆದನು.

೧೯೨೨ ರ ಫೆಬ್ರವರಿ ೨೩ ರಲ್ಲಿ ಗಾಂಧಿ, "ಬ್ರಿಟಿಷ್ ಸಿಂಹ ತನ್ನ ರಕ್ತಸಿಕ್ತ ಪಂಜಗಳನ್ನು ನಮ್ಮ ಮುಖದ ಮೇಲೆ ಬೀಸುತ್ತಿರುವಾಗ ಸಮಾ ಧಾನದ ಮಾತೆಲ್ಲಿದೆ? ಇಂಡಿಯಾದ ಅಕ್ಕಿಯುಣ್ಣುವ ದುರ್ಬಲವಾದ ಸವ ಕೋಟಿ, ಬೋಧನೆಯಿಲ್ಲದೆ. ಆಯುಧಗಳಿಲ್ಲದೆ ತಮ್ಮ ಅದೃಷ್ಟವನ್ನು ಕಂಡುಕೊಳ್ಳಬೇಕೆಂದು ನಿರ್ಧರಿಸಿದ್ದಾರೆ. ೧೯೨೦ ರಲ್ಲಿ ಪ್ರಾರಂಭವಾದ ಹೋರಾಟ ಕೊನೆಯವರೆಗೂ ಸಾಗುತ್ತದೆ," ಎಂದನು.

ಮಾರ್ಚ್ ೧೮ ರಲ್ಲಿ ಅಹಮದಾಬಾದಿನ ಚಿಕ್ಕನ್ಯಾಯಸ್ಥಾನ ಜನ

ರಿಂದ ತುಂಬಿತ್ತು. ಆಪಾದನೆಯನ್ನು ಅಡ್ವೋಕೇಟ್ ಜನರಲ್ ಓದಿ ಮುಗಿಸಿದ ಮೇಲೆ ಮಹಾತ್ಮ ಎದ್ದು, "ನಾನಿಲ್ಲಿದ್ದೇನೆ. ನ್ಯಾಯಶಾಸ್ತ್ರದಲ್ಲಿ ಅಪರಾಧವೆಂದೂ, ನನ್ನ ಅಭಿಪ್ರಾಯದಲ್ಲಿ ಪೌರರ ಕರ್ತವ್ಯವೆಂದೂ ಎನ್ನಿಸುವ ಕೆಲಸಕ್ಕಾಗಿ ನೀವು ಕೊಡುವ ಕಠಿಣತಮ ಶಿಕ್ಷೆಯನ್ನು ಸಂತೋಷದಿಂದ ಅನುಭವಿಸಲು ಸಿದ್ಧನಾಗಿದ್ದೇನೆ." ತಾನು ಸ್ವಾಮಿಭಕ್ತಿ, ಸಹಕಾರಗಳನ್ನು ಬಿಟ್ಟು ಅಸಹಕಾರವನ್ನು ವರಿಸಿದುದೇಕೆಂದು ವಿವರಿಸಿದನು. ತನ್ನ ಆಫ್ರಿಕದ ಅನುಭವಗಳನ್ನು ವಿವರಿಸಿ, ಬ್ರಿಟಿಷರಿಗಾಗಿ ಯುದ್ಧ ಮಾಡಿದುದನ್ನೂ, ಇಂಡಿಯಾದಲ್ಲಿ ಅವರಿಗಾಗಿ ಸೈನ್ಯ ಕೂಡಿಸಿದುದನ್ನೂ, ಹೇಳಿದನು. "ಅಂತಹ ಸೇವೆಯಿಂದ ಚಕ್ರಾಧಿಪತ್ಯದಲ್ಲಿ ನನ್ನ ದೇಶೀಯರಿಗೆ ಸಂಪೂರ್ಣ ಸಮಾನತೆ ದೊರಕುವುದೆಂದು ನಾನು ನಂಬಿದ್ದೆ," ಎಂದನು.

೧೯೧೯ ರಲ್ಲಿ ಅಪಘಾತಗಳು ಸಂಭವಿಸಿದುವು. ರೌಲತ್ ಕಾನೂನು, ಜಲಿಯನ್‌ವಾಲ ಕೊಲೆ, ಏಟುಗಳು, ಟರ್ಕಿ ಖಲೀಫನಿಗಾದ ಅನ್ಯಾಯ. ಹಾಗಾದರೂ, "ನಾನು ಸಹಕಾರಕ್ಕಾಗಿಯೂ, ಮಾಂಟೆಗೂ ಚೆಲ್ಮ್ಸ್‌ಫರ್ಡ್ ಸುಧಾರಣೆಗಳನ್ನು ನಡೆಸಲೂ ಹೋರಾಡಿದೆ. ಬ್ರಿಟಿಷ್ ಸಂಪರ್ಕದಿಂದ ಇಂಡಿಯಾ ಹಿಂದೆಂದೂ ರಾಜಕೀಯ, ಆರ್ಥಿಕ ಸ್ಥಿತಿಗಳಲ್ಲಿ ಆಗದಷ್ಟು ದುರ್ಬಲವಾಯಿತೆಂದೂ ಮನಸ್ಸಿಲ್ಲದಿದ್ದರೂ ನಿರ್ಧರಿಸಬೇಕಾಯಿತು. ಅದು ಕ್ಷಾಮಗಳನ್ನೆದುರಿಸಲಾರದು. ಬ್ರಿಟಿಷರು ಬರುವ ಮೊದಲು, ಇಂಡಿಯಾ ಲಕ್ಷಾಂತರ ಗುಡಿಸಲುಗಳಲ್ಲಿ ನೂಲುತೆಗೆದು, ವ್ಯವಸಾಯದ ಜತೆಗೆ ಸಾಕಾಗುವಷ್ಟು ಉತ್ಪತ್ತಿಪಡೆಯುತ್ತಿದ್ದಿತು. "ಬ್ರಿಟಿಷ್ ಕಾರ್ಖಾನೆಯ ಸಾಮಾನುಗಳಿಂದ ಗುಡಿಸಲ ಕೈಗಾರಿಕೆಗಳು ನಾಶವಾಗಿದ್ದವು. ಇಂಡಿಯಾಕ್ಕೆ ಸಹಾಯ ಮಾಡುತ್ತಿದ್ದೇವೆಂದು ಅನೇಕ ಬ್ರಿಟಿಷ್ ಅಧಿಕಾರಿಗಳು ತಿಳಿದಿದ್ದರೂ, ಭಯಪಡಿಸುವುದರಿಂದಲೂ, ಶಕ್ತಿಪ್ರದರ್ಶನದಿಂದಲೂ, ಸೇಡು ತೀರಿಸಿಕೊಳ್ಳುವುದಕ್ಕಾಗಲಿ, ಆತ್ಮ ರಕ್ಷಣೆಗಾಗಲಿ ಚೈತನ್ಯವಿಲ್ಲದಿರುವುದರಿಂದಲೂ, ಜನರು ಅಶಕ್ತರಾಗಿ ನಟನೆಯನ್ನು ಕಲಿತಿದ್ದಾರೆಂಬ ಅರಿವು ಅವರಿಗಿಲ್ಲ", ಆದುದರಿಂದ ಬ್ರಿಟಿಷರ ದ್ವೇಷಕ್ಕೊಳಗಾಗುವುದೇ ಗೌರವವೆಂದು ತಿಳಿದು ಕಠಿಣಶಿಕ್ಷೆಬೇಕೆಂದು ಬೇಡಿದನು.

ಗಾಂಧಿಯ ಮಾತು ಮುಗಿಯಲು, ನ್ಯಾಯಾಧೀಶ ಬ್ರೂಂಫೀಲ್ಡ್ ಆತನಿಗೆ ವಂದಿಸಿ ತೀರ್ಪನ್ನು ಕೊಟ್ಟನು. "ನ್ಯಾಯಕ್ಕೆ ವ್ಯಕ್ತಿಯಲಿ ಪಕ

ಪಾತವಿಲ್ಲ. ಆದರೂ ನಾನು ವಿಚಾರಣೆಮಾಡಿರುವ ಅಥವಾ ಮಾಡಬಹು ದಾದ ಎಲ್ಲಾ ವ್ಯಕ್ತಿಗಳಿಂದ ನೀನು ಬೇರೆಯಾಗಿದ್ದೀಯೆಂದು ಹೇಳದೆ ವಿಧಿ ಯಿಲ್ಲ. ನಿನ್ನ ದೇಶದ ಲಕ್ಷಾಂತರ ಜನರ ದೃಷ್ಟಿಯಲ್ಲಿ ನೀನು ದೇಶ ಭಕ್ತನೂ, ನಾಯಕನೂ ಆಗಿರುವುದನ್ನೂ ಮರೆಯಲಾಗುವುದಿಲ್ಲ. ರಾಜ ಕೀಯದಲ್ಲಿ ಭಿನ್ನಾಭಿಪ್ರಾಯವುಳ್ಳವರೂ ಕೂಡ ನೀನು ಉನ್ನತ ಧ್ಯೇಯ ಗಳುಳ್ಳವನೂ, ಉದಾತ್ತ ಸಂತ ಜೀವನ ನಡೆಸುವವನೂ ಎಂದು ಒಪ್ಪು ತ್ತಾರೆ."

ಹೀಗೆಂದು ಹೇಳಿ ನ್ಯಾಯಾಧೀಶ ಗಾಂಧಿಗೆ ಆರುವರ್ಷ ಸೆರೆಮನೆಯ ವಾಸವನ್ನು ವಿಧಿಸಿದನು. ನ್ಯಾಯಸ್ಥಾನದ ಕೆಲಸ ಮುಗಿದಾಗ ಅಲ್ಲಿದ್ದ ವರನೇಕರು ಗಾಂಧಿಯ ಕಾಲಿಗೆರಗಿ ಅತ್ತರು. ಹಿಡಿದುಕೊಂಡು ಹೋದಾಗ ಗಾಂಧಿ ನಸುನಗುತ್ತಿದ್ದನು.

ಬ್ರಿಟಿಷರು ಗಾಂಧಿಯನ್ನು ಹಿಡಿದು ಸೆರೆಯಲ್ಲಿಟ್ಟುದು ಇದೇ ಕಡೆಯ ಸಲವಲ್ಲ. ಆದರೆ ವಿಚಾರಣೆ ಮಾಡಿದುದು ಅದೇ ಕಡೆಯ ಬಾರಿ.

## ೧೪. ಗಾಂಧಿಯ ಉಪವಾಸ

೧೯೨೪ ರ ಜನವರಿ ೧೨ ರಲ್ಲಿ ಗಾಂಧಿಯನ್ನು ಯರವಾಡಾ ಸೆರೆಮನೆ ಯಿಂದ ಪೂನಾದ ಸಸೂನ್ ಆಸ್ಪತ್ರೆಗೆ ತ್ವರೆಯಿಂದ ಸಾಗಿಸಿದರು. ಆ ಸಂಜೆ ಬ್ರಿಟಿಷ್ ಶಸ್ತ್ರವೈದ್ಯ ಕರ್ನಲ್ ಮ್ಯಾಡಕ್, ಆತನಿಗೆ ಅಪೆಂಡಿಕ್ಸ್ ಆಪರೇ ಷನ್ ಮಾಡಿದನು. ಗಾಂಧಿ ಡಾಕ್ಟರನ್ನು ವಂದಿಸಿದನು. ಆದರೆ ಒಳಗೆ ಹುಣ್ಣಾದುದರಿಂದ ವಾಸಿಯಾಗುವುದು ನಿಧಾನವಾಯಿತು. ಈ ಸಮಯ ದಲ್ಲಿ ಆತನನ್ನು ಬಿಡುಗಡೆ ಮಾಡುವುದೇ ವಿವೇಕವೆಂದು ತಿಳಿದು ಸರ್ಕಾರ ೧೯೨೪ ಫೆಬ್ರವರಿ ೫ ರಲ್ಲಿ ಹಾಗೆ ಮಾಡಿತು. ಈ ಅನುಭವ ಆತನ ಶಕ್ತಿ ಯನ್ನು ತುಂಬಾ ಹೀರಿತು. ಆದರೂ ಎರಡು ತಿಂಗಳೊಳಗಾಗಿ ಪುನಃ "ಯಂಗ್ ಇಂಡಿಯಾ" ಪತ್ರಿಕೆಯನ್ನು ಪ್ರಾರಂಭಿಸಿ, ಗುಜರಾತಿಯಲ್ಲಿ "ನವಜೀವನ"ವೆಂಬ ಪತ್ರಿಕೆಯನ್ನೂ ಹೊರಡಿಸಿದನು.

ಗಾಂಧಿ ಸೆರೆಯಲ್ಲಿದ್ದ ಇಪ್ಪತ್ತೆರಡು ತಿಂಗಳಲ್ಲಿ ಇಂಡಿಯಾದ ರಾಜ ಕೀಯ ತುಂಬಾ ಕೆಟ್ಟಿತ್ತು. ಅದನ್ನು ವಿವರಿಸಿ ಗಾಂಧಿ "ಅನೇಕಜನ ವಕೀ ಲರು ಕೆಲಸ ಪ್ರಾರಂಭಿಸಿದ್ದಾರೆ. ಬಿಟ್ಟುಬಿಟ್ಟದ್ದಕ್ಕಾಗಿ ಕೆಲವರಿಗೆ ಪಶ್ಚಾ

ತ್ತಾಪವೂ ಆಗಿದೆ. ಸರ್ಕಾರಿ ಶಾಲೆಗಳನ್ನು ಬಿಟ್ಟ ನೂರಾರು ಜನ ಬಾಲಕ ಬಾಲಕಿಯರು ಪಶ್ಚಾತ್ತಾಪಪಟ್ಟು ಶಾಲೆಗಳಿಗೆ ಹಿಂದಿರುಗಿದ್ದಾರೆ," ಎಂದು ಬರೆದನು. ಬ್ರಿಟಿಷ್ ಅಧಿಕಾರಿಗಳಿಗೆ ತೊಂದರೆ ಮಾಡಲು, ತಿಳಿವು ಹೇಳಲು, ಅನೇಕ ಜನ, ಜವಹರಲಾಲ ನೆಹರೂರವರ ತಂದೆ ಮೋತಿಲಾಲ್ ನೆಹ್ರೂ, ಸಿ. ಆರ್. ದಾಸ್ ಮುಂತಾದವರಂತಹ ಪ್ರಸಿದ್ಧ ನಾಯಕರು ನಗರ, ಸಂಸ್ಥಾನ, ದೇಶೀಯ ನ್ಯಾಯವಿಧಾಯಕ ಸಭೆಗಳಲ್ಲಿಭಾಗವಹಿಸಲು ನಿರ್ಧರಿಸಿದರು. ಗಾಂಧಿ ಒಪ್ಪಲಿಲ್ಲ. ೧೯೨೪ ರ ಏಪ್ರಿಲ್ ೧೦ ರಲ್ಲಿ 'ಯಂಗ್ ಇಂಡಿಯಾ'ದಲ್ಲಿ ಬರೆಯುತ್ತಾ, "ನನಗೆ ಈ ಸರ್ಕಾರದಲ್ಲಿ ನಂಬಿಕೆಯಿಲ್ಲ" ಎಂದನು. ಆದರೆ ಅನೇಕರಿಗೆ ಅಸಹಕಾರ ಯಾಚಿಸಿದ ತ್ಯಾಗ ಮಾಡುವ ಶಕ್ತಿಯಿರಲಿಲ್ಲ. ಸರ್ಕಾರದ ವಿರುದ್ಧ ಚಳುವಳಿಯನ್ನು ಸಾಗಿಸುವ ಧೈರ್ಯ ಜನರಲ್ಲಿ ಕುಗ್ಗುತ್ತಿದ್ದುದನ್ನು ಗಾಂಧಿ ನೋಡಿದನು. ಆದುದರಿಂದ ರಾಜಕೀಯವೆಂದು ಜನ ತಿಳಿದ ರಂಗವನ್ನು ಬಿಟ್ಟು ಜನರನ್ನು ಉತ್ತಮಗೊಳಿಸುವ ತನ್ನ ರಾಜಕೀಯ ಕಾರ್ಯದಲ್ಲಿ ನಿರತನಾದನು. ತನ್ನ ಆಂಗ್ಲ ಸ್ನೇಹಿತ ಅಂಡ್ರೂಸಿಗೆ ಬರೆದನು. "ಇಂಡಿಯಾ ಎಂದು ಶುದ್ಧವಾಗುವುದೋ, ಆಗಲೇ, ಒಂದು ಕ್ಷಣ ಕೂಡ ಮೊದಲಲ್ಲ, ಅದು ಸ್ವತಂತ್ರವಾಗುವುದೆಂದು ನನ್ನ ನಂಬಿಕೆ."

ಶುದ್ಧವಾಗುವುದೆಂದರೆ ಮಾಯಾಮಂತ್ರಗಳಿಂದಲ್ಲ. ಅತಿ ಮುಖ್ಯವಾದ ಹಿಂದೂ ಮುಸ್ಲಿಂ ಸ್ನೇಹವೂ ಈ ಶುದ್ಧಿಯ ಅಂಗವಾಗಿತ್ತು. ಹಿಂದೂ ಮುಸ್ಲಿಂ ಸೌಹಾರ್ದವೇ ಸ್ವರಾಜ್ಯವೆಂದು ಜಿನ್ನಾ ಹೇಳಿದ ಮಾತನ್ನು ಆತ ನೊಪ್ಪಿದನು. ಈಗ ಆ ಎರಡು ಮತಗಳಿಗೂ ಪರಸ್ಪರ ದ್ವೇಷವಿತ್ತು. "ಅನಾಹುತದ ಅಲೆ ಬರುತ್ತಿದೆ" ಎಂದು ಗಾಂಧಿ ಹೇಳಿದನು.

೧೯೧೫ ರಲ್ಲಿ ಇಂಡಿಯಾ ದೇಶಕ್ಕೆ ಬರುತ್ತಲೇ ಇಂಡಿಯಾದ ಭವಿಷ್ಯ ಹಿಂದೂ ಮುಸ್ಲಿಮರ ಸಂಬಂಧವನ್ನವಲಂಬಿಸಿದೆಯೆಂದು ಗಾಂಧಿ ತಿಳಿದನು. ಆತನು ಆ ವಿಚಾರವಾಗಿ ಎಷ್ಟೋಸಲ ಮಾತಾಡಿದನು. ೧೯೨೪ ರ ಮೇ ೨೯ ರ ಯಂಗ್ ಇಂಡಿಯಾ ಪತ್ರಿಕೆಯನ್ನೆಲ್ಲಾ ಈ ಪ್ರಶ್ನೆಗೆ ಮೀಸಲಾಗಿಟ್ಟನು. "ಹಿಂದೂ ಮುಸ್ಲಿಂ ವೈಮನಸ್ಯ; ಅದರ ಕಾರಣ ಮತ್ತು ಪರಿಹಾರ" ಎಂದು ೬೦೦೦ ಪದಗಳ ಲೇಖನವನ್ನು ಬರೆದನು. "ಹಿಂದೂ

ಮುಸ್ಲಿಂ ಸೌಹಾರ್ದ ಸಾಧ್ಯ. ಏಕೆಂದರೆ ಅದು ಸ್ವಾಭಾವಿಕ; ಎರಡು ಮತಗಳಿಗೂ ಅಗತ್ಯ ಮತ್ತು ನನಗೆ ಮಾನವಸ್ವಭಾವದಲ್ಲಿ ನಂಬಿಕೆಯಿದೆ," ಈ ವಾಕ್ಯವನ್ನೋದಿದರೆ ಗಾಂಧಿಯ ಸ್ವಭಾವದ ಅರಿವಾಗುವುದು. ಗುರಿ ಒಳ್ಳೆಯದಾಗಿ ಮನುಷ್ಯ ಒಳ್ಳೆಯವನಾಗಿರುವುದರಿಂದ ಗುರಿಯನ್ನು ಸಾಧಿಸಬಹುದು. ಈ ನಂಬಿಕೆಯೇ ಆತನನ್ನು ಮಹಾತ್ಮನನ್ನಾಗಿ ಮಾಡಿದುದು. ಸೋತರೆ ಏನು ? ಸೋಲಿನಲ್ಲೂ ಆತ ಮಹಾಪುರುಷ. ಮನುಷ್ಯ ವಿಜಯಿಯಾದರೂ ಸಣ್ಣವನಾಗಿರಬಹುದು; ಅದು ಆತನು ಏನನ್ನು ಮಾಡಲು ಪ್ರಯತ್ನಿಸುತ್ತಿರುವನೆಂಬುದನ್ನು ಅವಲಂಬಿಸಿದೆ.

೧೯೪೭ ರಲ್ಲಿ ಇಂಡಿಯಾ ಜಿನ್ನರ ಪಾಕಿಸ್ಥಾನವಾಗಿಯೂ, ನೆಹರೂರ ಇಂಡಿಯಾ ಪ್ರಜಾಪ್ರಭುತ್ವವಾಗಿಯೂ, ಇಬ್ಬರ ನಷ್ಟಕ್ಕಾಗಿ ಬೇರ್ಪಡುತ್ತಿದ್ದಾಗ, ನಾನು ಜಿನ್ನಾರೊಡನೆ ವಾದಿಸಿದೆ. "ಜಗತ್ತಿಗೆ ಬೇಕಾಗಿರುವುದು ಸಮನ್ವಯ; ಹೊಸ ವೈಮನಸ್ಯಗಳಲ್ಲ; ಇಂಡಿಯಾದ ಐಕಮತ್ಯ, ಭಾಗವಲ್ಲ." ಜಿನ್ನಾ ೧೯೩೦ ರ ಸುಧಾರಕರು ಈಗ ಆಗಿರಲಿಲ್ಲ.

ಆತ, "ನಾನು ವಾಸ್ತವ ಪ್ರಪಂಚವಿರುವಂತೆ ನಡೆಯುತ್ತೇನೆ," ಎಂದನು. ಯೂರೋಪಿನಲ್ಲಿ ಮತೀಯ, ದೇಶೀಯ ವಿಭಾಗಗಳಿಂದುಂಟಾದ ಅನಾಹುತಗಳನ್ನು ನಾನು ಆತನ ಗಮನಕ್ಕೆ ಸೆಳೆದೆ.

"ಇರುವ ವಿಭಾಗಗಳನ್ನು ನಾನು ಗಮನಿಸಬೇಕು," ಎಂದನು.

ಗಾಂಧಿಗೂ ವಾಸ್ತವ ಪ್ರಪಂಚದ ಕಡೆ ಗಮನವಿತ್ತು. ಆದರೆ ಆತನದು ಕೆಡುಕನ್ನು ನಾಶಮಾಡುವ ವಾಸ್ತವಿಕತೆ; ಅದನ್ನು ಉಪಯೋಗಿಸುವುದಲ್ಲ. ಮನುಷ್ಯ ಒಳ್ಳೆಯವನಾದರೂ, ಆ ಒಳ್ಳೆಯತನವನ್ನೆಚ್ಚರಿಸಬೇಕೆಂದು ಆತನು ತಿಳಿದಿದ್ದನು. ಇಲ್ಲದಿದ್ದರೆ ಕೆಟ್ಟುದನ್ನು ಬೇರೆ ಯಾರಾದರೂ ಉಪಯೋಗಿಸಿಕೊಳ್ಳಬಹುದು. ಈ ಒಳ್ಳೆಯತನವನ್ನೆಬ್ಬಿಸಲು, ಹಿಂದೂ ಮುಸ್ಲಿಂ ಸ್ನೇಹಕ್ಕೋಸ್ಕರ ಉಪವಾಸ ಕೈಕೊಂಡನು.

ಗಾಂಧಿಯ ಉಪವಾಸಗಳು ಆತನಿಗೂ, ಜನರಿಗೂ ಸೌಹಾರ್ದವನ್ನೇರ್ಪಡಿಸುತ್ತಿದ್ದುವು. "ನಾನೇನು ಹೇಳಿದರೂ ಎರಡು ಮತಗಳಿಗೂ ಸೌಹಾರ್ದವುಂಟಾಗಲಿಲ್ಲ," ಎಂದು ಹೇಳಿ ಉಪವಾಸ ಮಾಡಲಾರಂಭಿಸಿದನು. ಪಾಶ್ಚಾತ್ಯರು ಮಾತನಾಡಿ, ಒಡನಾಡಿ ಸಂಬಂಧ ಬೆಳೆಸುತ್ತಾರೆ.

ಪೌರ್ವಾತ್ಯರು ಧ್ಯಾನಮಾಡಿ, ನೋವನ್ನನುಭವಿಸುತ್ತಾರೆ. ಗಾಂಧಿ ಎರಡು ದೃಷ್ಟಿಗಳನ್ನೂ ಉಪಯೋಗಿಸಿಕೊಂಡನು. ಮಾತುಗಳು ನಿಷ್ಪ್ರಯೋಜನವಾದಾಗ ಉಪವಾಸ ಮಾಡಿದನು.

ಆಜೀವ ಪರ್ಯಂತ ಗಾಂಧಿ ಹೊಸ ಹೊಸ ಮಾರ್ಗಗಳನ್ನು ಪರಿಶೀಲಿಸುತ್ತಲೇ ಇದ್ದನು. ದೊಡ್ಡ ಸಭೆಗೆ ಹೋಗಿ ಮಾತನಾಡದೆ ಪದ್ಮಾಸನ ಹಾಕಿ ಕುಳಿತು, ನಕ್ಕು ಕೈಮುಗಿಯುವನು. ಜನ ಅಳುತ್ತಾ ಆತನ ಕಾಲಿಗೆರಗುವರು. ಹಾಗೆಯೇ ಸಂಪರ್ಕ ನಡೆದುಹೋಗುವುದು. ಅವನ ಹೃದಯವನ್ನು ಆತನು ತಾಗುವನು. ಸಮ್ಮೇಳನಗಳಲ್ಲಿ ಗಾಂಧಿ ಹೇಳಿಕೆ ಕೊಡುತ್ತಿರಲಿಲ್ಲ; ಪ್ರಶ್ನೆಗೆ ಉತ್ತರ ಕೊಡುತ್ತಿರಲಿಲ್ಲ; ನಿಕಟ ಸಂಬಂಧಕ್ಕೆ ಪ್ರಯತ್ನಿಸುವುದೇ ಆತನ ಗುರಿ. ಮಾತುಗಳಿಗಿಂತ ಅದರಿಂದಲೇ ಸೌಹಾರ್ದವೇರ್ಪಡುವುದು.

ಉಪವಾಸ ಜನರ ಮನಸ್ಸು ಹೃದಯಗಳನ್ನು ತಾಗುತ್ತದೆ. ಒಂದು ಸಲ ಗಾಂಧಿ, "ನನ್ನನ್ನು ಪ್ರೀತಿಸುವವರನ್ನು ಸುಧಾರಿಸಲು ಉಪವಾಸ ಮಾಡಿದೆ. ಆಕ್ರಮಣಕಾರನಲ್ಲಿ ಪ್ರೀತಿಯಿಲ್ಲ. ಉಪವಾಸದಂತಹ ಪ್ರೀತಿಯ ಆಯುಧ ಆತನ ಮೇಲೆ ಪರಿಣಾಮವನ್ನುಂಟುಮಾಡುವುದಿಲ್ಲ. ಆದುದರಿಂದ ಅಂತಹವರನ್ನೆದುರಿಸಿ ಉಪವಾಸಮಾಡಲು ಸಾಧ್ಯವಿಲ್ಲ. "ಬ್ರಿಟಿಷ್ ಸರ್ಕಾರದಿಂದ ರಿಯಾಯತಿಗಳನ್ನು ಪಡೆಯಲು ಗಾಂಧಿ ಉಪವಾಸ ಮಾಡಲಿಲ್ಲ. ಆತನು ಉಪವಾಸಗಳನ್ನೆಲ್ಲಾ ತನ್ನ ದೇಶೀಯರ ಕಡೆಗೇ ಪ್ರಯೋಗ ಮಾಡುತ್ತಿದ್ದನು. ಅವರಿಗೂ, ಆತನಿಗೂ ನಡುವೆ ಉಪವಾಸದಿಂದ ತಾಗಬಹುದಾದ ಸಹಾನುಭೂತಿಯ ತಂತುವಿತ್ತು. ಉಪವಾಸ ನಿಃಸ್ವಾರ್ಥವಾಗಿರಬೇಕು. ನಮ್ಮ ತಂದೆ ಒಂದು ದುರ್ಗುಣ ಬಿಡಲೆಂದು ನಾನು ಉಪವಾಸಮಾಡಬಹುದು. ಆತನಿಂದ ಆಸ್ತಿಪಡೆಯುವುದಕ್ಕಾಗಿ ಮಾಡಕೂಡದು. ಉಪವಾಸದಲ್ಲಿ ಸ್ವಾರ್ಥತೆಯಿಲ್ಲದುದರಿಂದ, ಜನರಿಗೆ ಒಳ್ಳೆಯದಾಗುತ್ತಿತ್ತು. ಅದು ಅವರಿಗೆ ಅರ್ಥವಾಗಿ ಅವರ ಮನಸ್ಸು ಪರಿವರ್ತಿತವಾಗುತ್ತಿತ್ತು.

ಗಾಂಧಿ ಇಲ್ಲವೆಂದು ಹೇಳಿದರೂ ಕೆಲವು ವೇಳೆ ಆತನ ಉಪವಾಸಗಳಲ್ಲಿ ಒತ್ತಾಯವಿತ್ತು. ಒಂದು ಮುಷ್ಕರದಲ್ಲಿ ಮಧ್ಯಸ್ಥಿಕೆಗೆ ಅಹಮದಾ

ಬಾದಿನ ಮಿಲ್ ಮಾಲೀಕರು ಒಪ್ಪಲಿಲ್ಲವೆಂದು ಗಾಂಧಿ ಉಪವಾಸ ಮಾಡಿದನು. ಆತನು ಸಾಯುವನೆಂದು ಅವರು ಒಪ್ಪಿದರು. ಆ ಸಾವಿನ ಭಾರವನ್ನು ಅವರು ಹೊರಬೇಕಾಗುತ್ತಿತ್ತು. ಆದರೆ ಹಿಂದೂ ಮುಸ್ಲಿಂ ಐಕ್ಯತೆಗಾಗಿ ಮಾಡಿದ ಉಪವಾಸದಲ್ಲಿ ಒತ್ತಾಯವಿರಲಿಲ್ಲ. ಗಾಂಧಿ ಸಾಯುತ್ತಿದ್ದಾನೆಂದು ಅಲಹಾಬಾದಿನ ಹಿಂದು, ಆಗ್ರಾದ ಮುಸ್ಲಿಂ ಎರಡು ಮತಗಳಿಗೂ ಸೌಹಾರ್ದವನ್ನೇರ್ಪಡಿಸಬೇಕಾಗಿರಲಿಲ್ಲ. ಆತನ ತ್ಯಾಗದಿಂದ ಅವರವರಿಗೆ ಸಂಪರ್ಕ ತೋರಿದರೆ ಮಾತ್ರ ಅವರು ಹಾಗೆ ಮಾಡುವರು. ತನ್ನಂತೆ ಅವರ ಭಾವನೆ ಕಾರ್ಯಗಳುಂಟಾಗುವಂತೆ ಅವರ ಹೃದಯ ತಾಗುವ ಮಾರ್ಗ ಉಪವಾಸ. “ಈ ದಿನದಿಂದ ೧೯೨೪ ರ ಅಕ್ಟೋಬರ್ ೬ ರ ವರೆಗೆ ಇಪ್ಪತ್ತೊಂದು ದಿನ ಉಪವಾಸ ಮಾಡುತ್ತೇನೆ. ಉಪ್ಪು ನೀರು ಕುಡಿಯುವುದೂ ಬಿಡುವುದೂ ನನ್ನಿಷ್ಟ.” ಉಪವಾಸಮಾಡುತ್ತಿದ್ದಾಗ ನೀರು ಕುಡಿದರೆ ಆತನಿಗೆ ವಾಂತಿಬರುತ್ತಿತ್ತು. ಆದುದರಿಂದ ಉಪ್ಪನ್ನಾಗಲಿ, ಸೋಡವನ್ನಾಗಲಿ ಸೇರಿಸಿ ಕುಡಿಯುತ್ತಿದ್ದನು. ಸಾಯಬೇಕೆಂಬ ಅಭಿಲಾಷೆಯಿಲ್ಲದುದರಿಂದ ನೀರು ಕುಡಿಯುತ್ತಿದ್ದನು. ಆತನಿಗೆ ಜೀವನದಲ್ಲಿ ಆನಂದವಿತ್ತು. ದೇಹವನ್ನುಳಿಸಿಕೊಳ್ಳಬೇಕೆಂಬ ಆಸೆಯಿತ್ತು. ದಿನವೂ ದೇಹವನ್ನೊತ್ತಿಕೊಂಡು, ಕ್ಲುಪ್ತಕಾಲ ನಿದ್ರೆಮಾಡಿ, ಶಕ್ತಿಬರಲೆಂದು ನಡೆಯುತ್ತಿದ್ದನು. ಆಹಾರದ ವಿಚಾರದಲ್ಲಿ ಆತನ ನಡೆವಳಿ ಪಾಶ್ಚಾತ್ಯರಿಗೂ, ಅನೇಕ ಭಾರತೀಯರಿಗೂ ವಿಚಿತ್ರವಾಗಿ ತೋರುತ್ತಿತ್ತು. ಆದರೆ ಅದರ ಗುರಿ ದೇಹವನ್ನು, ಪಾರಮಾರ್ಥಿಕ ಧ್ಯೇಯಗಳನ್ನು ಸಾಧಿಸಲು ಶಕ್ತವಾಗಿ ಮಾಡುವುದೇ. ಗುಂಡಿನೇಟು ಬೀಳುವವರೆಗೂ, ಆತ ಗಟ್ಟಿಮುಟ್ಟಾಗಿದ್ದು ಇನ್ನೂ ಅನೇಕ ವರ್ಷ ಬದುಕಬಹುದಾಗಿತ್ತು. ಆದರೂ ನೈತಿಕ ಕಲೆಯ ಮುಂದೆ ದೇಹದ ಯೋಗಕ್ಷೇಮವನ್ನು ಗಮನಿಸುವಂತಿರಲಿಲ್ಲ. ಕೈಲಾಗದಿದ್ದರೆ ದೇಹ ಅನುಭವಿಸಬೇಕು, ಕುಸಿಯಬಹುದು, ಆದರೆ ಬೇಡವೆನ್ನುವಂತಿರಲಿಲ್ಲ.

ಇಪ್ಪತ್ತೊಂದು ದಿನ ಹಿಂದೂ ಮುಸ್ಲಿಮರಿಗಾಗಿ ಉಪವಾಸದ ವೇಳೆಯಲ್ಲಿ ಇಬ್ಬರು ಮುಸಲ್ಮಾನ್ ವೈದ್ಯರು ಸದಾ ಗಾಂಧಿಯ ಬಳಿ ಇರುತ್ತಿದ್ದರು. ಕ್ರೈಸ್ತಮತ ಪ್ರಚಾರಕ ಆಂಡ್ರೂಸ್ ಆತನ ಸೇವೆ ಮಾಡು

ತ್ತಿದ್ದನು. ಷೌಕತನ ತಮ್ಮ ಮಹಮುದಾಲಿಯ ಮನೆಯಲ್ಲಿ ಉಪವಾಸ ನಡೆಯುತ್ತಿತ್ತು. ಇಪ್ಪತ್ತೊಂದು ದಿನ ಆ ಮುಸಲ್ಮಾನ್ ಮನೆಯ ಮೇಲೆ ಭಾರತದ ಗಮನ ಕೇಂದ್ರೀಕೃತವಾಗಿತ್ತು. ಮೋಹನದಾಸನೂ, ಮಹಮ್ಮದನೂ ಗೆಳೆಯರೆಂಬುದನ್ನು ಮುಸ್ಲಿಮರು ಅರಿತರು. ತಮ್ಮ ಸಂತನು ತನ್ನ ಜೀವನವನ್ನು ನಂಬಿ ಮುಸ್ಲಿಮನೊಬ್ಬನಿಗೆ ಕೊಟ್ಟನೆಂಬುದನ್ನು ಹಿಂದೂಗಳು ಅರಿತರು. ಸೋದರ ಭಾವದ ನಾಟಕೀಯ ಪ್ರದರ್ಶನ.

ಉಪವಾಸದ ಎರಡನೆಯ ದಿನ ಗಾಂಧಿ, "ವೈವಿಧ್ಯದಲ್ಲಿ ಐಕ್ಯತೆ", ಬೇಡಿ, ಒಂದು ಪುಟದಷ್ಟು ಲೇಖನ ಬರೆದನು. "ಈಗ ಬೇಕಾಗಿರುವುದು ಒಂದು ಮತವಲ್ಲ. ಪರಸ್ಪರ ಗೌರವ, ಸಹನೆ." ಆರನೆಯ ದಿನ ಪುನಃ ಅದೇ ವಿಚಾರವಾಗಿ ಬರೆದನು. ಹನ್ನೆರಡನೆಯ ದಿನ ಆತನು ಬರೆದ ೧೧೨ ಪದಗಳ ಲೇಖನ ಆತನ ರಾಜಕೀಯ ಭಾವನೆ ಹೇಗೆ ಬದಲಾಗಿತ್ತೆಂಬುದನ್ನು ತೋರಿಸುತ್ತದೆ. "ಇದುವರೆಗೂ ಇಂಡಿಯ ಸರ್ಕಾರದ ಆಡಳಿತ ಹೊತ್ತ ಬ್ರಿಟಿಷರ ಹೃದಯ ಪರಿವರ್ತನೆಗಾಗಿ ಹಾತೊರೆಯುತ್ತಿದ್ದೆ. ಆ ಪರಿವರ್ತನೆ ಇನ್ನೂ ಆಗಿಲ್ಲ. ಈಗ ಹಿಂದೂ ಮುಸ್ಲಿಮರ ಹೃದಯ ಪರಿವರ್ತನೆಗಾಗಿ ಪ್ರಯತ್ನಿಸಬೇಕಾಗಿದೆ. ಸ್ವಾತಂತ್ರ್ಯದ ವಿಚಾರ ಆಲೋಚಿಸುವ ಮೊದಲು, ಒಬ್ಬರನ್ನೊಬ್ಬರು ಪ್ರೀತಿಸಬಲ್ಲೆವೆಂಬ ಧೈರ್ಯ ಬರಬೇಕು. ಒಬ್ಬರೊಬ್ಬರ ಮತಗಳನ್ನು, ಮೂಢ ನಂಬಿಕೆಗಳನ್ನು, ಸಹಿಸಿ ನಂಬಿಕೆಯಿಡಬೇಕು. ಇದಕ್ಕೆ ಆತ್ಮ ವಿಶ್ವಾಸ ಬೇಕು. ಅದೇ ಭಗವಂತನಲ್ಲಿ ನಂಬಿಕೆ. ನಂಬಿಕೆಯಿದ್ದರೆ ಭೀತಿ ತೊಲಗುತ್ತದೆ." ಭಯವನ್ನು ವಿಶ್ವಾಸದಿಂದ ಎದುರಿಸುವುದೇ ಗಾಂಧಿಯ ತತ್ವ. ಇಪ್ಪತ್ತನೆಯ ದಿನ ಪ್ರಾರ್ಥನೆಯನ್ನು ಬರೆಯಿಸಿದನು. "ಇಪ್ಪತ್ತು ದಿನಗಳೂ ಭಕ್ತಿಯ, ಶಾಂತಿಯ ಭಾಗ್ಯದ ದಿನಗಳಾಗಿದ್ದುವು."

ಆ ಸಂಜೆ ಮಹಾತ್ಮಗಾಂಧಿ ಉಲ್ಲಾಸದಿಂದ ತುಂಬಿದ್ದನು. ಬೆಳಗ್ಗೆ ನಾಲ್ಕು ಗಂಟೆಗೆ ಪ್ರಾತಃಕಾಲದ ಪ್ರಾರ್ಥನೆಗೆ ಎಲ್ಲರನ್ನೂ ಕರೆದನು. ಆಂಡ್ರೂಸ್ ಗಾಂಧಿಯನ್ನು, "ನಿದ್ದೆ ಸರಿಯಾಗಿ ಬಂತೆ?", ಎಂದು ಕೇಳಿದನು. ಗಾಂಧಿ, "ಚೆನ್ನಾಗಿ ನಿದ್ದೆಮಾಡಿದೆ," ಎಂದು ಉತ್ತರವಿತ್ತನು. "ಆತನ ಧ್ವನಿ ನಿನ್ನೆಗಿಂತ ಶಕ್ತಿಯುತವಾಗಿದ್ದುದನ್ನು ಕೇಳಿ ತುಂಬಾ

ಸಂತೋಷವಾಯಿತು," ಎಂದು ಆಂಡ್ರೂಸ್ ಹೇಳಿದನು.

ಉಪವಾಸದ ಕಡೆಯ ದಿನ, ಆರು ಘಂಟೆಗಳ ಮೇಲೆ ಗಾಂಧಿ ಆಂಡ್ರೂಸರೊಡನೆ, "ನನಗಿಷ್ಟವಾದ ಕ್ರೈಸ್ತ ಪ್ರಾರ್ಥನಾ ಶ್ಲೋಕ ನೆನಪಿದೆಯೆ ? "

"ಇದೆ. ಈಗ ಹಾಡಲೆ."

"ಈಗ ಬೇಡ, ನನ್ನ ಉಪವಾಸ ಮುಗಿದ ಮೇಲೆ ಮತಗಳ ಐಕ್ಯತೆ ತೋರುವ ಒಂದು ಸಣ್ಣ ಸಮಾರಂಭ ನಡೆಸಬೇಕೆಂದು ನನಗೆ ಮನಸಾಗಿದೆ. ಇಮಾಂ ಸಾಹೇಬರು ಕುರಾನಿನ ಮೊದಲಶ್ಲೋಕಗಳನ್ನೋದಲಿ. ನೀವು ನಾನು ಹೇಳಿದ, 'ಅದ್ಭುತ ಶಿಲುಬೆಯನ್ನು ನಾನು ನೋಡುವಾಗ,' ಎಂದು ಪ್ರಾರಂಭವಾಗಿ 'ಇಂತಹ ಅದ್ಭುತ ದೈವಿಕಪ್ರೇಮ, ನನ್ನ ಆತ್ಮ, ಜೀವ ಎಲ್ಲವನ್ನೂ ಬೇಡುತ್ತದೆ,' ಎಂದು ಮುಗಿಯುವ ಶ್ಲೋಕವನ್ನು ಹಾಡಿ. ಅನಂತರ ಹಿಂದೂ ಪ್ರಾರ್ಥನೆಯಾಗಲಿ ".

ಮಧ್ಯಾಹ್ನ ಗಾಂಧಿ ಮೆಲ್ಲಗೆ ಮಾತನಾಡಿ, ಅಲ್ಲಿ ಸೇರಿದ್ದ ಸ್ನೇಹಿತರನ್ನು, "ಸೋದರಿಕೆಗಾಗಿ ಜೀವವನ್ನಾದರೂ ಕೊಡಿ" ಎಂದು ಹೇಳಿದನು. ಪ್ರಾರ್ಥನೆಯಾದ ಮೇಲೆ ಗಾಂಧಿ ಮೂರುವಾರದ ಉಪವಾಸವನ್ನು ಮುಕ್ತಾಯಗೊಳಿಸಿ ಕಿತ್ತಲೆಹಣ್ಣಿನ ರಸವನ್ನು ಕುಡಿದನು.

ಈ ಪರೀಕ್ಷೆ ಪ್ರಯೋಜನಕಾರಿಯಾಯಿತೆಂದು ಹೇಳುವಂತಿಲ್ಲ. ಹಿಂದೂ ಮುಸ್ಲಿಮರ ಕಲ್ಲಿನಂತಹ ದ್ವೇಷ ಕರಗಿಸಲು ಗಾಂಧಿಯ ಪ್ರೇಮಕ್ಕೆ ಸಾಧ್ಯವಾಗಲಿಲ್ಲ. ಮತೋದ್ಧಾರದ ಸುಳ್ಳುಭಾವನೆಗಳೇ ಅದಕ್ಕೆ ಕಾರಣವೆಂದು ಆತನು ಹೇಳಿದನು. ಹಿಂದೂ ಮೆರವಣಿಗೆಗಳು ಅನೇಕಸಲ ಪ್ರಾರ್ಥನೆಯ ವೇಳೆಯಲ್ಲಿ ಮಸೀತಿಗಳ ಮುಂದೆ ಹೋಗುತ್ತಿದ್ದುವು. ಇದರಿಂದ ಮಹಮುದನ ಶಿಷ್ಯರಿಗೆ ಅಸಮಾಧಾನವಾಗುತ್ತಿತ್ತು. ಇದು ತಮ್ಮ ಮತಕ್ಕೆ ಅಗತ್ಯವೆಂದು ತಿಳಿದುದು ಹಿಂದುಗಳ ತಪ್ಪು; ಅದಕ್ಕಾಗಿ ಹೊಡೆಯಲು ಹೋದುದು ಮುಸ್ಲಿಮರ ತಪ್ಪು. ಹಾಗೆಯೇ ಹಿಂದೂಗಳು ಹಸುಗಳನ್ನು ಪೂಜಿಸುತ್ತಾರೆ. ಮುಸಲ್ಮಾನರು ತಿನ್ನುತ್ತಾರೆ. ಗಾಂಧಿ ಗೋರಕ್ಷಣೆ ಸಮಸ್ತ ಮೂಗುಜೀವಿಗಳ ರಕ್ಷಣೆಯ ಸಂಕೇತವಾದುದರಿಂದ ಹಿಂದೂ ಧರ್ಮದ ತಿರುಳು ಎಂದುಕೊಂಡರೂ ಇದರಿಂದ ಮುಸ್ಲಿಮರ ಮೇಲೆ ಅಸ

ಮಾಧಾನವೇಕೆಂದು ಆತನಿಗೆ ತಿಳಿಯಲಿಲ್ಲ. "ಇಂಗ್ಲಿಷರಿಗಾಗಿ ಹಸುಗಳನ್ನು ಕೊಂದರೆ ನಾವು ಮಾತನಾಡುವುದಿಲ್ಲ. ಮುಸಲ್ಮಾನನೊಬ್ಬನೆ ಹಸು ಕೊಂದರೆ ನಮಗೆ ಮಿತಿಮೀರಿದ ಕೋಪವುಂಟಾಗುತ್ತದೆ. ಆದರೆ ಹಿಂದೂಗಳು ಮಾರುವುದರಿಂದಲೇ ಹಸುಗಳು ಕಟುಕರ ಕತ್ತಿಗಳಿಗಾಹುತಿಯಾಗುತ್ತವೆ. ಹಿಂದೂಗಳು ಮಾರುತ್ತಾರೆ.... ಜಗತ್ತಿನಲ್ಲಿ ಬೇರೆ ಎಲ್ಲಿಯೂ ನಮ್ಮಷ್ಟು ಹೀನವಾಗಿ ದನಗಳನ್ನು ಕಾಣುವುದಿಲ್ಲ. ನಮ್ಮ ದನಗಳ ಆಹಾರವಿಲ್ಲದ ಸ್ಥಿತಿ ನಮಗೆ ಅವಮಾನ."

ಮಸೀತಿಗಳ ಮುಂದೆ ಸಂಗೀತ, ದನಗಳ ಕೊಲೆಗಳಿಂದ ಅನೇಕಸಲ ಹಿಂದೂ ಮುಸ್ಲಿಂ ಗಲಭೆಗಳಾಗುತ್ತಿದ್ದವು; ಹೆಂಗಸರು, ಮಕ್ಕಳನ್ನು ಹೊತ್ತುಕೊಂಡುಹೋಗಿ ಬಲವಂತವಾಗಿ ಜಾತಿಕೆಡಿಸುವುದೂ, ಗಲಭೆಗೆ ಕಾರಣವಾಗುತ್ತಿತ್ತು. ಒಂದೊಂದು ಸಲ ಬೊಂಬಾಯಿಯಲ್ಲಾದಂತೆ ಮೂರುಜನ ಹಿಂದುಗಳು, ಒಬ್ಬ ಮುಸಲ್ಮಾನ ಜೂಜಾಡಿ ಕುಡಿದು ಕೂಗಾಡಲು ಗಲಭೆಯಾಗಿ ೧೪ ಜನರ ಸಾವು, ೯೮ ಜನರಿಗೆ ಗಾಯ, ೨೯೮೮ ಜನರ ಕೈಸೆರೆಯಾಗಿ ಪರಿಣಮಿಸುತ್ತಿತ್ತು. ಈ ಭಯಂಕರ ಗಲಭೆಗಳ ಕಾರಣ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯಿಂದಾದುದು. ಮಹಾತ್ಮ ಸಾಧಾರಣವಾಗಿ ಇದಕ್ಕೆ ಹೆಚ್ಚುಗಮನ ಕೊಡದೆ, ವಿಮರ್ಶಿಸದೆ ಇರುತ್ತಿದ್ದರು. ಇಂಡಿಯಾದ ಏಳುನೂರು ಸಾವಿರ ಹಳ್ಳಿಗಳಲ್ಲಿ ಹಿಂದೂ ಮುಸ್ಲಿಮರು ಪಕ್ಕಪಕ್ಕದಲ್ಲಿ ಸಮಾಧಾನದಿಂದ ಜೀವಿಸುತ್ತಿದ್ದರು. ಸೈನ್ಯದಲ್ಲಿ ಹಿಂದುಗಳು ಮುಸ್ಲಿಮರು, ಸಿಕ್ಕರು, ಕ್ರಿಶ್ಚಿಯನ್ನರು ಒಟ್ಟಿಗೆ ಉಂಡು, ಮಲಗಿ, ಜಗಳವಿಲ್ಲದೆ ಜೊತೆಯಾಗಿ ಕೆಲಸಮಾಡುತ್ತಿದ್ದರು. ಹಿಂದೂ ಮುಸ್ಲಿಂ ಕಲಹ ಪಟ್ಟಣಕ್ಕೆ ಸೇರಿದ ಇಪ್ಪತ್ತನೆಯ ಶತಮಾನದ ರೋಗ. ಮಾನವನಿರ್ಮಿತ, ಮಧ್ಯಮವರ್ಗದ ರೋಗ. ಇದರಿಂದ ಕೆಲವು ಜನ ರಾಜಕೀಯ ವ್ಯಕ್ತಿಗಳಿಗೆ ಅಧಿಕಾರದ ಹುಚ್ಚುಂಟಾಯಿತು.

ಇಸ್ಲಾಂ ಪದ್ಧತಿಯ ಮೇರೆಗೆ ಮುಸ್ಲಿಮರ ಆಸ್ತಿಯೆಲ್ಲಾ ಭೂಮಿಯ ಮೇಲಿರುತ್ತಿತ್ತು. ವ್ಯಾಪಾರ ಕೈಗಾರಿಕೆಗಳು ಹಿಂದೂ, ಪಾರ್ಸಿಗಳ ಕೈಯ್ಯಲ್ಲಿತ್ತು. ಅವರು ಕೆಲಸಕ್ಕೂ ತಮ್ಮ ಮತೀಯರನ್ನೇ ಗೊತ್ತುಮಾಡಿಕೊಳ್ಳುತ್ತಿದ್ದರು. ಹೀಗಾಗಿ ಮುಸ್ಲಿಂ ಮಧ್ಯಮ ವರ್ಗ ರೂಪುಗೊಳ್ಳುವುದು

ನಿಧಾನವಾಯಿತು. ಶತಮಾನದ ಪ್ರಾರಂಭದಲ್ಲಿ, ಹೆಚ್ಚು ವಿದ್ಯಾವಂತರಾಗಿಯೂ, ಸಂಪರ್ಕಗಳನ್ನು ಹೊಂದಿರುವವರೂ ಆಗಿದ್ದ ಹಿಂದೂ, ಪಾರ್ಸಿಗಳೊಡನೆ ಸ್ಪರ್ಧಿಸುವಂತಿರಲಿಲ್ಲ. ಇಂಡಿಯಾದ ಆರ್ಥಿಕ ದುಃಸ್ಥಿತಿಯಲ್ಲಿ ಅತಿ ಮುಖ್ಯ ಕಸಬಾಗಿದ್ದ ಸರ್ಕಾರಿ ನೌಕರಿಗಳನ್ನು ಪಡೆಯುವುದರಲ್ಲೂ ಯುವಕ ಮುಸ್ಲಿಮರಿಗೆ ಇದೇ ತೊಂದರೆಯಿತ್ತು. ಆದುದರಿಂದ ಯೋಗ್ಯತೆಯನ್ನು ಲೆಖ್ಖಕ್ಕೆ ತೆಗೆದುಕೊಳ್ಳದೆ ಈ ಕೆಲಸಗಳಲ್ಲಿ ಸೇಕಡಾ ಇಷ್ಟು ಭಾಗವನ್ನು ತಮಗೆ ಮೀಸಲಾಗಿಡಬೇಕೆಂದು ಒತ್ತಾಯಪಡಿಸಿದರು. ಮುಸ್ಲಿಂ ನಾಯಕರೂ ಒತ್ತಾಯ ಪಡಿಸಲು ಬ್ರಿಟಿಷರು ಒಪ್ಪಿಕೊಳ್ಳಲೇಬೇಕಾಯಿತು.

ಜನಾಂಗದ ನಾಲ್ಕನೆಯ ಒಂದು ಭಾಗವಾದ ಮುಸ್ಲಿಮರಿಗೂ, ಮುಕ್ಕಾಲು ಭಾಗವಾದ ಹಿಂದೂಗಳಿಗೂ ನಿಕಟ ಸಂಬಂಧವಿದೆ. ಮುಸ್ಲಿಮರಲ್ಲನೇಕರು, ಎಂಟನೆಯ ಶತಮಾನದಲ್ಲಿ ಇಂಡಿಯಾಕ್ಕೆ ನುಗ್ಗಿ ಬಂದ, ಅರಬ್ಬರಿಂದ, ಅಫ್ಘನರಿಂದ, ಪರ್ಷಿಯನ್ನರಿಂದ ಮತಪರಿವರ್ತನೆ ಮಾಡಲ್ಪಟ್ಟವರು. ಮತಾಂತರ ಹೊಂದಿದ ಹಿಂದುಗಳೇ ಮುಸ್ಲಿಂ ಜನಾಂಗದಲ್ಲಿ ಶೇಕಡಾ ೭೫ ಭಾಗವೆಂದು ಜಿನ್ನಾ ಹೇಳಿದರು. ಪಂಡಿತ ನೆಹ್ರೂ ೯೫% ಎಂದರು. ಇಂಡಿಯಾದ ಕೆಲವು ಭಾಗಗಳಲ್ಲಿ ಮುಸ್ಲಿಮರು ಹಿಂದೂ ದೇವಸ್ಥಾನಗಳಲ್ಲಿ ಪೂಜೆ ನಡೆಸುತ್ತಾರೆ. ಅನೇಕ ಕಡೆ ವಸ್ತ್ರ, ಭಾಷೆ, ಪದ್ಧತಿಗಳಲ್ಲಿ ಇಬ್ಬರಿಗೂ ವ್ಯತ್ಯಾಸವೇ ಕಾಣುವುದಿಲ್ಲ. ಮುಸ್ಲಿಮರಲ್ಲಿಯೂ ಹಿಂದುಗಳಂತೆ ಜಾತಿ ಭೇದಗಳಿವೆ. ಹಿಂದೂಗಳ, ಮುಸಲ್ಮಾನರ ಮುಖ್ಯ ಭಾಷೆಗಳಾದ ಹಿಂದಿ, ಉರ್ದುಗಳಿಗೆ, ಬೇರೆ ಬೇರೆ ಅಕ್ಷರಗಳಿದ್ದರೂ, ಹಿಂದಿಯಲ್ಲಿ ಹೆಚ್ಚು ಸಂಸ್ಕೃತ, ಉರ್ದುವಿನಲ್ಲಿ ಪರ್ಷಿಯನ್ ಇದ್ದರೂ, ಬಹಳ ಮಟ್ಟಿಗೆ ಒಂದೇ ವಿಧವಾಗಿವೆ. ಅದೂ ಅಲ್ಲದೆ ಇಂಡಿಯಾದ ಅನೇಕ ಕಡೆ ಮುಸ್ಲಿಂ, ಹಿಂದೂಗಳಿಗೆ ಹಿಂದಿ, ಉರ್ದು ಎರಡೂ ಬರುವುದಿಲ್ಲ. ಎಲ್ಲರೂ ಬಂಗಾಳದಲ್ಲಿ ಬಂಗಾಳಿಯಂತೆ ಪ್ರಾಂತ್ಯ ಭಾಷೆಗಳನ್ನಾಡುತ್ತಾರೆ. ಕಾಥೇವಾಡದಲ್ಲಿ ಹಿಂದೂ ಸಂತತಿಯಲ್ಲಿ ಹುಟ್ಟಿದ ಜಿನ್ನಾರೇ, ತಂದೆಯ ಮನೆಯಲ್ಲಿ ಗಾಂಧಿಯಂತೆ ಗುಜರಾತಿ ಭಾಷೆಯನ್ನಾಡುತ್ತಿದ್ದರು.

ಆದರೆ ಮತ ಭೇದಗಳೂ, ಆರ್ಥಿಕ ಸ್ಪರ್ಧೆಯೂ ಜನಾಂಗದ,

ಭಾಷೆಯ ಕಟ್ಟುಗಳನ್ನು ಕತ್ತರಿಸಿದುವು. ಹಿಂದುಗಳಿಗೆ ಮೊದಲಿನಿಂದಲೂ ಪ್ರತ್ಯೇಕತೆಯೇ ಇಷ್ಟವಾಗಿ, ಮುಸ್ಲಿಮರನ್ನು ಕೀಳಾಗಿ ಕಂಡು, ಅವರೊಡನೆ ಮದುವೆಯಾಗಲು, ಊಟಮಾಡಲು ನಿರಾಕರಿಸಿದರು. ನಿಷ್ಠನಾದ ಹಿಂದೂ ಮುಸಲ್ಮಾನರ ಮನೆಗೆ ಹೋಗಬಹುದು. ಆದರೆ ಅಲ್ಲಿ ಒಂದು ಬಟ್ಟಲು ನೀರನ್ನು ಕುಡಿಯುವಂತಿಲ್ಲ; ಏನನ್ನೂ ತಿನ್ನುವಂತಿಲ್ಲ. ಈ ಅಸಮಾಧಾನವನ್ನೇ ಕಾರಣ ಮಾಡಿಕೊಂಡು ಮುಸ್ಲಿಂ ನಾಯಕರು, ಸ್ವಾತಂತ್ರ್ಯವೆಂದರೆ ಹಿಂದೂ ದಬ್ಬಾಳಿಕೆಯಾಗುವುದೆಂದೂ, ಸರ್ಕಾರದಲ್ಲಾಗಲಿ, ವ್ಯಾಪಾರದಲ್ಲಾಗಲಿ ಅವಕಾಶ ಸಿಕ್ಕುವುದಿಲ್ಲವೆಂದೂ ಒತ್ತಾಯದಿಂದ ಪುನಃ ಹಿಂದೂ ಮತಕ್ಕೆ ಸೇರಬೇಕಾಗುವುದೆಂದೂ ತಮ್ಮ ಅನುಯಾಯಿಗಳಿಗೆ ಹೇಳಿದರು.

೧೯೧೭ ರಲ್ಲಿ ಜಿನ್ನಾ ಇಂತಹ ಹೆದರಿಕೆಯೇನೂ ಇಲ್ಲವೆಂದು ಹೇಳಿದ್ದನು. "ಸ್ವಾತಂತ್ರ್ಯ ಪಡೆಯಲು ಆವಶ್ಯಕವಾದ ಐಕಮತ್ಯ ಪಡೆಯುವಂತೆ ನಿಮ್ಮನ್ನು ಹೆದರಿಸಲು ಮಾಡಿರುವ ಉಪಾಯಗಳಿವು", ಎಂದು ಹೇಳಿದ್ದನು. ಆದರೆ ಈ ಭೂತವೇ ನಿಜವಾಗಿ ಕಾಣಿಸಿ ಕಡೆಗೆ ಜಿನ್ನಾ ತಾನೇ ಅದನ್ನು ಉಪಯೋಗಿಸಿಕೊಂಡನು.

ಇಂಡಿಯಾದಲ್ಲಿ ಭದ್ರತೆಯಿಲ್ಲದ ಬ್ರಿಟಿಷರು ಹಿಂದೂ ಮುಸ್ಲಿಂ ಕಲಹವನ್ನು ತಮ್ಮ ಉಪಯೋಗಕ್ಕೆ ಬಳಸಿಕೊಂಡರು. ಬ್ರಿಟನ್ನು ಭಾಗಮಾಡಿ ಆಳಲಿಲ್ಲ. ಇಂಡಿಯನ್ನರು ಭಾಗವಾಗಿದ್ದರು. ಸುಲಭವಾಗಿ ಆಳಲು ಬ್ರಿಟನ್ನು ಅವರ ವೈಮನಸ್ಯವನ್ನು ಹೆಚ್ಚಿಸಿತು. ತನ್ನ ಉಪವಾಸದಿಂದ ಪ್ರಯೋಜನವಾಗದುದನ್ನು ನೋಡಿ, ಗಾಂಧಿ ಸಮಾನತೆ ಮತ್ತು ಸ್ವಾತಂತ್ರ್ಯ ತಾನೆಣಿಸಿದ್ದುದಕ್ಕಿಂತ ದೂರವಾಯಿತೆಂದು ತಿಳಿದನು. ೧೯೨೪ರ ಕಡೆಯ ಭಾಗದಲ್ಲಿ ಜಗತ್ತು ಯುದ್ಧ ಮುಗಿದು ಸ್ವಾಭಾವಿಕ ಸ್ಥಿತಿಗೆ ಬಂದಿತು. ಡಾಸ್ ಯೋಜನೆ ಜರ್ಮನಿಯ ಆರ್ಥಿಕ ಸ್ಥಿತಿಯನ್ನು ರಕ್ಷಿಸುವ ಹೊಣೆಯನ್ನೊಪ್ಪಿಕೊಂಡಿತು. ಯೂರೋಪಿನ ದೊಡ್ಡ ರಾಷ್ಟ್ರಗಳು ಸೋವಿಯಟ್ ರಷ್ಯಾವನ್ನು ಒಪ್ಪಿಕೊಳ್ಳುತ್ತಿದ್ದುವು. ಮಾಸ್ಕೋವಿನೊಡನೆ ಸ್ನೇಹಮಾಡಿಕೊಂಡಿದ್ದ ಚಿಯಾಂಗ್ ಕೈಷೆಕನ ದಕ್ಷಿಣ ಚೀಣಾ ಬಿಟ್ಟು ಮಿಕ್ಕ ಕಡೆ ಬಾಲ್ಷೆವಿಸಂ ತಗ್ಗಿತ್ತು. ಅಮೆರಿಕದಲ್ಲಿ ಕೂಲಿಡ್ಜನ ತೃಪ್ತ ಸರ್ಕಾರವಿತ್ತು.

೧೯೧೯ರ ಮತ್ತು ೨೩ರ ಐರ್ಲೆಂಡ್ ಗಲಭೆ, ಪೌರ್ವಾತ್ಯ ಗಲಭೆಗಳಿಂದ ತೊಂದರೆಗೊಳಗಾಗಿದ್ದ ಬ್ರಿಟಿಷ್ ಚಕ್ರಾಧಿಪತ್ಯ ಶಾಂತಿಪರಿಸ್ಥಿತಿಗೆ ಬಂದಿತ್ತು. ಇಂಡಿಯಾದಲ್ಲಿ, ಅವ್ಯಕ್ತ ಸರದ ಕೋಲೆಯ ಆವೇಶವಡಗಿ, ಅನುಮಾನ, ನಿರಾಸೆ, ಪ್ರಾಯಶಃ ಗಾಂಧಿಯ ಅಹಿಂಸಾವಾದವೂ ಸೇರಿ ಯುದ್ಧಾಸಕ್ತಿಯ ದೇಶಪ್ರೇಮದ ಬಿರುಸು ಕಡಿಮೆಯಾಗಿತ್ತು. ಇದು ಬ್ರಿಟಿಷ್ ವಿರುದ್ಧ ಬಹಿರಂಗ ದಂಗೆಗೆ ಸಮಯವಾಗಿರಲಿಲ್ಲ. ಮಹಾತ್ಮ ಒಂದು ಜನಾಂಗವನ್ನು ಸ್ವಾತಂತ್ರ್ಯಕ್ಕೆ ಅರ್ಹರನ್ನಾಗಿ ಮಾಡುವ ಕೆಲಸ ವನ್ನು ಕೈಗೊಂಡನು. ಬಹಳ ನಿಧಾನದ ಕೆಲಸ.

## ೧೫. ಮಾಸ್ಕೋವಿಗೆ ಉತ್ತರ

೧೯೨೪ ಮತ್ತು ೨೯ ನೆಯ ಬೇಸರದ ವರ್ಷಗಳ ನಡುವೆ, ಮಹಾತ್ಮ ಗಾಂಧಿ ೧೯೩೦ ರ ಪತ್ರಿಕೆಗಳೇನನ್ನು ವರದಿ ಮಾಡುವುವೆಂದೂ, ಈಗ ಚರಿತ್ರೆಯಲ್ಲಿ ಏನು ವರದಿಯಾಗಿರುವುದೆಂಬುದನ್ನೂ ಊಹಿಸಲು ಸಾಧ್ಯ ವಿರಲಿಲ್ಲ. ಸ್ವಾತಂತ್ರ್ಯದ ಹಾದಿಗಾಗಿ ಆತನು ತಡಕಾಡುತ್ತಿದ್ದನು. ಆದರೂ ಇಂಡಿಯಾದ ರಾಜಕೀಯ ಹೀನಾವಸ್ಥೆಯ ಆ ದಿನಗಳಲ್ಲಿ ಆತನು ತುಳಿದ ಹಾದಿ ದೇಶವನ್ನು ಸ್ವಾತಂತ್ರ್ಯದೆಡೆಗೆ ಒಯ್ದಿತು. ಹೇಗಿದ್ದರೂ ಆತನು ಆ ಹಾದಿಯಲ್ಲೇ ನಡೆಯುತ್ತಿದ್ದನು. ಏಕೆಂದರೆ ೧೯೨೦ ರ ಕೊನೆ ಯಲ್ಲಿ ಆತನು ಮಾಡಿದ ಕಾರ್ಯ ಸರಿಯಾದುದಾಗಿತ್ತು. ಗುರಿ ಯಾವು ದಾದರೂ ಪಥ ಸರಿಯಾಗಿತ್ತು. ಸರಿಯಾದ ಪಥವೇ ಸರಿಯಾದ ಗುರಿ ಯೆಂದು ಆತನ ನಂಬಿಕೆ ಈ ಧೈರ್ಯದಿಂದಲೇ ಸುರಂಗದ ಕೊನೆಯ ಬಾಗಿಲ ದೀಪ ಕಾಣದಿದ್ದರೂ ಆತ ಮುನ್ನಡೆದನು. ದಿಕ್ಕಿನ ಅರಿವಾಗ ದಿದ್ದರೂ, ನಂಬಿಕೆಯಿತ್ತು. ಸರಿಯಾದ ಸಲಕರಣೆಗಳಿದ್ದರೆ ನಷ್ಟವೆಂದೂ ಇಲ್ಲ, ಇಮ್ಮಡಿ ಲಾಭವಾಗಬಹುದು. ಏಕೆಂದರೆ ಪಥದ ಪ್ರಯೋಜನೆ ಯೊಡನೆ, ಗುರಿಯ ಸಿದ್ಧಿಯೂ ಆಗಬಹುದು. ಆದುದರಿಂದ ಮುಂದಕ್ಕೆ ಹೋದಂತೆ ಕಾಣದಿದ್ದರೂ ಮುನ್ನಡೆಯುತ್ತಿದ್ದುದರಿಂದ ತಾಳ್ಮೆಯಿಂದಿರ ಬಹುದು.

ತಿಲಕ್ ಮತ್ತು ಗೋಖಲೆ ಸತ್ತುಹೋಗಿದ್ದರು; ಜನರು ಮಹಾತ್ಮ ನನ್ನು ಗೌರವದ ಉನ್ನತ ಶಿಖರಕ್ಕೇರಿಸಿದ್ದರು. ಸಬರಮತಿಯಲ್ಲಿದ್ದ

ಆತನ ಆಶ್ರಮ ಇಂಡಿಯಾದ ರಾಜಕೀಯ ಕೇಂದ್ರವಾಗಿತ್ತು. ಪ್ರಯಾಣ ಮಾಡಿದಾಗ ಎಲ್ಲಿ ಹೋದರೂ ಜನರ ಗುಂಪು ಮುತ್ತುತ್ತಿತ್ತು. "ಸ್ನಾನ ಮಾಡುವಾಗಲೂ ಅವರು ನನ್ನನ್ನು ಬಿಡುವುದಿಲ್ಲ". ರಾತ್ರಿಯಾಗುವ ವೇಳೆಗೆ ಮುಟ್ಟಿನಮಸ್ಕಾರ ಮಾಡಿದ ಪುರುಷರು, ಸ್ತ್ರೀಯರು, ಮಕ್ಕಳ ಕೈಗಳಿಂದಾದ ಗಾಯಗಳು ಆತನ ಪಾದ, ಕಾಲುಗಳ ಮೇಲೆ ಕಾಣುತ್ತಿದ್ದವು. ಆತನ ದೇವತ್ವ ಪ್ರಾರಂಭವಾಗುತ್ತಿತ್ತು. ಗೊಂಡರು ಆತನನ್ನು ಪೂಜಿಸುತ್ತಿದ್ದರು. "ಈ ವಿಧದ ವಿಗ್ರಹಾರಾಧಾನೆಯಿಂದ ನನಗಾಗುವ ಹೇಸಿಕೆ, ಅಸಮಾಧಾನಗಳನ್ನು ನಾನು ಹೇಳಿದ್ದೇನೆ" ಎಂದನು.

ಅನೇಕ ಜನ ಭಾರತೀಯರು ಆತನನ್ನು ಬುದ್ಧನಂತೆ, ಕೃಷ್ಣನಂತೆ, ಕೆಲವು ಕಾಲ ಭೂಮಿಗಿಳಿದ ದೇವರ ಅವತಾರವೆಂದು ಎಣಿಸಿದರು. ಆತನನ್ನು ನೋಡಿ, ಮುಟ್ಟಿ ಪುನೀತರಾಗಲು ಜಿಲ್ಲೆಗಳಿಂದ, ಮೈದಾನಗಳಿಂದ, ದೂರದ ಹಳ್ಳಿಗಳಿಂದ ಜನ ಬರುತ್ತಿದ್ದರು. ಬಂಗಾಳದ ಢಾಕ್ಕಾದಲ್ಲಿ ಒಬ್ಬ ಮುದುಕ ಗಾಂಧಿಯ ಚಿತ್ರವನ್ನು ಕತ್ತಿಗೆ ತಗುಲಿ ಹಾಕಿಕೊಂಡು ಅಳುತ್ತಾ ಬಂದು ಮಹಾತ್ಮನಿಂದ ತನ್ನ ಪಾರ್ಶ್ವವಾಯು ವಾಸಿಯಾಯಿತೆಂದು ಹೇಳಿದನು. "ದಯವಿಟ್ಟು ಆ ಚಿತ್ರ ತೆಗೆಯಿರಿ. ನಿಮಗೆ ಆರೋಗ್ಯ ಕೊಟ್ಟವನು ನಾನಲ್ಲ; ದೇವರು," ಎಂದು ಗಾಂಧಿ ಗದರಿಸಿದನು.

ವಿದ್ಯಾವಂತರನ್ನೂ ಈ ಮೌಢ್ಯ ಬಿಡಲಿಲ್ಲ. ಒಂದು ದಿನ ಗಾಂಧಿ ಪ್ರಯಾಣ ಮಾಡುತ್ತಿದ್ದ ರೈಲುಗಾಡಿಯಲ್ಲಿದ್ದ ಒಬ್ಬ ಲಾಯರು ರೈಲಿನಿಂದ ತಲೆಕೆಳಕಾಗಿ ಬಿದ್ದರೂ ಏಟು ತಾಕಲಿಲ್ಲ. ಇದಕ್ಕೆ ತನ್ನೊಡನೆ ಮಹಾತ್ಮನಿದ್ದುದೇ ಕಾರಣವೆಂದು ಆತನು ಹೇಳಲು, ಗಾಂಧಿ ನಗುತ್ತಾ, "ಹಾಗಿದ್ದಿದ್ದರೆ ನೀವು ಬೀಳುತ್ತಲೇ ಇರಲಿಲ್ಲ" ಎಂದನು.

ಈ ಬರಿಯ ಪೂಜೆಯಿಂದ ದುಃಖಿತನಾಗಿ ಗಾಂಧಿ, "ನಾನು ಮಹಾತ್ಮನಲ್ಲ. ನನ್ನ ಮಾಹಾತ್ಮ್ಯೆಗೆ ಬೆಲೆಯಿಲ್ಲ" ಎಂದು ಬರೆದನು. ಭಾರತೀಯರು ನನ್ನ ಕಾಲಿಗೆ ಬೀಳುವುದಕ್ಕಿಂತ ತನ್ನ ಮಾರ್ಗವನ್ನನುಸರಿಸಿದ್ದರೆ ಆತನಿಗೆ ಹೆಚ್ಚು ಸಂತೋಷವಾಗುತ್ತಿತ್ತು. ಆತನಿಗೆ ಬೇಕಾಗಿದ್ದುದು ಬೆಂಬಲ, ಹೊಗಳಿಕೆ, ಪೂಜೆಗಳಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ನೂಲುವುದು ಮುಂತಾದ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಸಹಾಯ ಬೇಕಾಗಿತ್ತು.

" ನನಗೆ ರಾಜಕೀಯ ಪ್ರಪಂಚದಲ್ಲಿ ಚರಕಕ್ಕಿಂತ ಮುಖ್ಯವಾದುದು ಯಾವುದೂ ಇಲ್ಲ," ಎಂದು ಘೋಷಿಸಿದನು. ೧೯೪೬ ರಲ್ಲಿ ನಾನು ಗಾಂಧಿ ಯೊಡನೆ ಇದ್ದಾಗ ಒಂದುದಿನ ಆತನು ನೂಲುತ್ತಿದ್ದಾಗ ಆತನ ಕೊಠಡಿಗೆ ಹೋದೆ. ಅದರಲ್ಲಿ ತನಗಿದ್ದ ಭಕ್ತಿಯನ್ನು ಆತನು ವಿವರಿಸಿದನು. "ಹಿಟ್ಲ ರನ ಹೆದರಿಕೆಗಾಗಿ ಅಲ್ಲದೆ, ಒಂದೇ ಧ್ಯೇಯದಲ್ಲಿನ ಶ್ರದ್ಧೆಯಿಂದ ಮುನ್ನೂರು ಲಕ್ಷ ಜನ ದಿನಕ್ಕೊಂದು ಬಾರಿ ಒಂದು ಕೆಲಸ ಮಾಡಿದರೆ ಸ್ವಾತಂತ್ರ್ಯ ಗಳಿ ಸುವಷ್ಟು ಐಕಮತ್ಯ ಬಂದಂತಾಯಿತು ". ನಾನು ಪರಿಹಾಸ್ಯ ಮಾಡುತ್ತಾ, ನನ್ನೊಡನೆ ಆತನು ಮಾತನಾಡುತ್ತಾ ಒಂದು ಘಂಟೆ ನೂಲುವುದನ್ನು ನಿಲ್ಲಿಸಿದರೆ ಸಾತಂತ್ರ್ಯ ತಡಮಾಡಿದಂತಾಯಿತೆಂದು ಹೇಳಿದೆ. ಆತನೂ ನಗುತ್ತಾ, "ಹೌದು ನಿಮ್ಮಿಂದ ಸ್ವರಾಜ್ಯ ಆರುಗಜ ದೂರ ಹೋಯಿತು," ಎಂದರು.

ಗಾಂಧಿಯ ಪಂಚೆ, ಶಾಲು, ಚೌಕ, ದುಪಟಿಗಳು ಖಾದಿಯಿಂದ ಮಾಡಿ ದುವು. ಹೆಚ್ಚು ಹೆಚ್ಚು ಜನ ಭಾರತೀಯರು ಅದನ್ನು ಮಾಡಲಾರಂಭಿಸಿ ದರು. ಆದರೆ ಕೆಲವರು ಹೀಯಾಳಿಸುತ್ತಿದ್ದರು. "ಹೆಣಗಳಿಗೆ ಸುತ್ತುವ ಬಟ್ಟೆ," ಎನ್ನುತಿದ್ದರು. ಜವಹರಲಾಲ್ ನೆಹ್ರೂ, ಅದನ್ನು "ಸ್ವಾತಂತ್ರ್ಯದ ವಸ್ತ್ರ" ಎಂದು ಕರೆದನು.

ಗಾಂಧಿಗೆ ಚರಕದಲ್ಲಿ ಎಷ್ಟು ವಿಶ್ವಾಸವಿತ್ತೆಂದರೆ ಅದನ್ನು ಕಾಂಗ್ರೆಸ್ ಪಕ್ಷದ ಧ್ವಜದ ಮಧ್ಯದಲ್ಲಿ ಬರೆಯಿಸಿದನು. ಅದೇ ಮುಂದೆ ಸ್ವತಂತ್ರ ಭಾರತದ ಧ್ವಜವಾಯಿತು. ಪಟ್ಟಣಗಳಲ್ಲಿ ರಾಜಕೀಯದಲ್ಲಾಸಕ್ತಿಯಿದ್ದ ವರ ವಿದ್ಯಾಭ್ಯಾಸಕ್ಕೆ ಆತನ ದಾನವೇ ಇದು. ಅವರ ಮನಸ್ಸು, ಬಡವರ, ಅವಿದ್ಯಾವಂತರಾದ ರೈತರ ಸ್ಥಿತಿಗೆ ಜಾಗೃತವಾಗುವಂತೆ ಮಾಡಿದನು. ನಾಯಕರನ್ನೂ, ಜನರನ್ನೂ ಸಮನ್ವಯಪಡಿಸುವ ಪ್ರಯೋಗವಿದು. ಇಂಡಿ ಯಾದಲ್ಲಿ ಅರಮನೆಗಳ ಸಂಪತ್ತೂ, ಕೈಗಾರಿಕೆಗಳ ವೈಭವವೂ, ಬಡವರ ದುಃಸ್ಥಿತಿಯನ್ನು ಎಷ್ಟು ಸುಲಭವಾಗಿ ಮರೆಸುವುದೆಂಬುದನ್ನು ಆತನು ಅರಿ ತಿದ್ದನು.

ಕೀಳಾದವರಿಗೆ ಸಹಾಯ ಮಾಡಬೇಕಾದರೆ ಆತನನ್ನು ಅರ್ಥ ಮಾಡಿಕೊಳ್ಳಬೇಕು. ಅರ್ಥಮಾಡಿಕೊಳ್ಳಲು ಅವನಂತೆ ಬದುಕಿ ಕೆಲಸ

ಮಾಡಬೇಕು ಎಂದು ಗಾಂಧಿ ಬೋಧಿಸಿದನು. "ನಾನು ಕೆಳಗಿನಿಂದ ಕೆಲಸ ಮಾಡಿ ಮೇಲಕ್ಕೆ ಹೋಗಲು ಪ್ರಯತ್ನಿಸುತ್ತಿದ್ದೇನೆ! ವಿದ್ಯಾವಂತರು ತನ್ನ ಖಾದಿ ಉದ್ಯಮಕ್ಕೆ ಬೆಂಬಲ ಕೊಡದಿದ್ದರೆ ಅವರನ್ನೂ, ಜನರನ್ನೂ ಬಂಧಿಸಿರುವ ಏಕಮಾತ್ರ ಬೆಸುಗೆ ಬಿಟ್ಟುಹೋಗುವುದೆಂದು ಎಚ್ಚರಿಸಿದನು. ನೂಲುವುದೂ ಜನರನ್ನು ತಾಗುವ ಸಲಕರಣೆಯಾಯಿತು; ಪ್ರೇಮದ ದುಡುಮೆಯಾಯಿತು.

ರಾಟೆಯ ಚಳುವಳಿಗೆ ಹಣವನ್ನೊದಗಿಸಲು ಆತನು ಹೆಚ್ಚು ಪ್ರಯಾಣ ಮಾಡಿದನು. ಸಾಧಾರಣವಾಗಿ ಮೂರನೆಯ ತರಗತಿಯಲ್ಲೇ ಪ್ರಯಾಣ ಮಾಡುತ್ತಿದ್ದನು. ವೈಸರಾಯಿ, ಸೈನ್ಯಾಧಿಪತಿ, ಮಹಾರಾಜರು ಮೂರನೆಯ ತರಗತಿಯಲ್ಲೇ ಪ್ರಯಾಣ ಮಾಡಿದರೆ ಆರೋಗ್ಯಸ್ಥಿತಿ ಸುಧಾರಿಸುವುದೆಂದು ಸೂಚಿಸಿದನು. ಎಲ್ಲಿ ಹೋದರೂ ಆತನಿಗೆ ಹಣ ಸಿಕ್ಕುತ್ತಿತ್ತು. ಬದುಕಿರುವಷ್ಟು ದಿನವೂ ಆತನು ಹಣ ಕೂಡಿಸುತ್ತಿದ್ದನು. ಆ ಹಣವನ್ನು ರೈತರಿಗೆ ರಾಟೆಗಳನ್ನು ಕೊಳ್ಳಲು, ಖಾದಿಭಂಡಾರಗಳನ್ನು ತೆಗೆಯಲು, ನೂಲುವುದು, ನೇಯುವುದು ಮುಂತಾದುವನ್ನು ಕಲಿಸಲು, ಶಿಕ್ಷಣ ಕೊಡುವುದು, ಈ ಕೆಲಸಗಳಿಗೆ ಉಪಯೋಗಿಸುತ್ತಿದ್ದನು. ನಿಲ್ದಾಣಗಳಲ್ಲಿ ರೈಲು ನಿಂತಾಗ ಕಿಟಕಿಯಿಂದ ಕೈಚಾಚಿ ಜನರು ಕೊಟ್ಟ ಹಣವನ್ನು ತೆಗೆದುಕೊಳ್ಳುತ್ತಿದ್ದನು. ಜನರ ನಡುವೆ ಹೋಗಿ ಖಾದಿಯನ್ನು ಮಾರುತ್ತಿದ್ದನು. ಚಿನ್ನ, ಒಡವೆಗಳನ್ನೂ ತೆಗೆದುಕೊಳ್ಳುತ್ತಿದ್ದನು. "ನನ್ನ ಪ್ರೇಮಿಗಳ ಗುಂಪು ಹೆಚ್ಚುತ್ತಿದೆ." ಈ ಗುಂಪಿಗೆ ಹೊಸದಾಗಿ ಸೇರಿದವಳು ಹತ್ತುವರ್ಷದ ಬದಾರ್ವಾನಿನ ರಾಣಿ ಬಾಲ. ಆಕೆಯೊಡನೆ ಆಡುತ್ತಿದ್ದಾಗ ಅವಳ ಕೈಯ್ಯಲ್ಲಿದ್ದ ಆರು ಭಾರವಾದ ಚಿನ್ನದ ಬಳೆಗಳ ಮೇಲೆ ನನ್ನ ಕಣ್ಣಿತ್ತು. ಆಕೆಯ ಪುಟ್ಟಕೈಗಳಿಗೆ ಅವು ತುಂಬಾ ಭಾರವೆಂದು ನಾನು ವಿವರಿಸಿದೆ. ಆಕೆ ಬಳೆ ತೆಗೆದುಕೊಟ್ಟಳು. "ಆ ವಿಚಾರವನ್ನು ಹೆಂಗಸರ ಸಭೆಯಲ್ಲಿ ಗಾಂಧಿ ಹೇಳಿದಾಗ ಆತನಿಗೆ ಅನೇಕ ಬಳೆಗಳು, ಓಲೆಗಳು ಕೇಳದೆಯೇ ಸಿಕ್ಕಿದವು. ಅವುಗಳನ್ನೆಲ್ಲಾ ಖಾದಿಗೋಸ್ಕರ ವಿನಿಯೋಗಿಸಿದನು. ಒಡವೆಗಳನ್ನು ತೆಗೆದರೆ ಸೌಂದರ್ಯ ಹೆಚ್ಚುವುದೆಂದು ಆತನಿಗೆ ತಿಳಿಯಹೇಳಿದನು. "ಒಳ್ಳೆಯದನ್ನು ಮಾಡುವುದೇ ಅಲಂಕಾರ," ಅದೂ ಅಲ್ಲದೆ ಇಂಡಿಯಾದ ಸ್ತ್ರೀಯರು

ಮೈಮೇಲಿರುವ ಆಭರಣಗಳನ್ನು ತೆಗೆದರೆ ಹೆಚ್ಚು ಶುಚಿಯಾಗಿರುವರೆಂದು ಹೇಳಿದನು.

ನೂಲುವುದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಿದ್ದನೆಂದು ಸ್ನೇಹಿತರು ಆಕ್ಷೇಪಿಸಿದರು. "ಇದು ಯಂತ್ರಯುಗ. ಆತನ ಕೆಲಸ, ವಿವೇಕ, ಪವಿತ್ರತೆ ಗಡಿಯಾರವನ್ನು ಹಿಂದಿರುಗಿಸಲಾರದು.," ಎಂದರು. "ನೂರೈವತ್ತು ವರ್ಷಗಳ ಕೆಳಗೆ ನಮ್ಮ ಬಟ್ಟೆಯನ್ನೆಲ್ಲಾ ನಾವೇ ತಯಾರಿಸುತ್ತಿದ್ದೆವು. ನಮ್ಮ ಹೆಂಗಸರು ಗುಡಿಸಲುಗಳಲ್ಲಿ ಸೊಗಸಾದ ನೂಲನ್ನು ತೆಗೆಯುತ್ತಿದ್ದರು. ಗಂಡನ ಸಂಪಾದನೆಗೆ ತಾವೂ ಸಹಾಯ ಮಾಡುತ್ತಿದ್ದರು. ಇಂಡಿಯಾದಲ್ಲಿ ವರ್ಷಕ್ಕೆ ತಲೆಗೆ ಹದಿಮೂರು ಗಜ ಬಟ್ಟೆ ಬೇಕು. ಈಗ ಅದರಲ್ಲಿ ಅರ್ಧವನ್ನೂ ತಯಾರು ಮಾಡುತ್ತಿಲ್ಲ. ಬೇಕಾದಷ್ಟು ಹತ್ತಿ ಬೆಳೆಯುತ್ತದೆ. ಜಪಾನಿಗೆ, ಲಂಕಾಷೈರಿಗೆ ಲಕ್ಷಾಂತರ ಮೂಟೆ ಹತ್ತಿ ಸಾಗಿಸಿ, ತಾನೇ ಬೇಕಾದಷ್ಟು ಬಟ್ಟೆಯನ್ನು ನೂತು ನೇಯ್ದುಕೊಳ್ಳಬಹುದಾದರೂ, ಬಟ್ಟೆ ತರಿಸಿಕೊಳ್ಳುತ್ತದೆ. ವರ್ಷದಲ್ಲಿ ನಾಲ್ಕುತಿಂಗಳು ಏನೂ ಕೆಲಸ ಮಾಡದಿರುವ ಲಕ್ಷಾಂತರ ಜನರಿಗೆ ಕೆಲಸ ಕಲ್ಪಿಸಲು ರಾಟೆಯನ್ನು ನೀಡಲಾಯಿತು."

ಗತಿಯಿಲ್ಲದವರಿಗೆ ಸಹಾಯ ಮಾಡಬೇಕೆಂಬುದೇ ಗಾಂಧಿಯ ಉತ್ಕಟೇಚ್ಛೆ. ಆತನೂ ದೇವರೂ ಜತೆಗಾರರಾದುದರಿಂದ ದೇವರನ್ನೂ ಈ ಕೆಲಸಕ್ಕೆ ನಿಯೋಗಿಸಿದನು. "ಊಟಕ್ಕಿಲ್ಲದ ಸೋಮಾರಿಗಳಾದ ಜನರಿಗೆ ಭಗವಂತ ಸಂಬಳ ತರುವ ಕೆಲಸವಾಗಿ ಪ್ರತ್ಯಕ್ಷನಾಗುತ್ತಾನೆ. ಬಡತನದಿಂದ ನೀತಿಯು ಮಟ್ಟ ಕಡಮೆಯಾಗುತ್ತದೆ." ಆತನಿಗೆ ಸಂಪತ್ಸಮೃದ್ಧವಾದ, ಸಂತೋಷಪೂರಿತವಾದ ಇಂಡಿಯಾ ಬೇಕಾಗಿತ್ತು. "ನಾವು ನಮ್ಮ ಸಂಪತ್ತು, ಶಕ್ತಿಗಳನ್ನು ಕಳೆದುಕೊಳ್ಳದಿದ್ದರೆ, ನಮಗಿರುವ ವಾಯುಗುಣ, ಸ್ವಾಭಾವಿಕ ಸೌಲಭ್ಯಗಳಿಂದ ನಾವು ಜಗತ್ತಿನಲ್ಲಿ ಅತ್ಯಂತ ಸುಖಿಗಳಾಗಬಹುದು."

ಹೆಚ್ಚು ಐಶ್ವರ್ಯವನ್ನೆಲ್ಲಗಳೆದು ತಾನು ಸ್ವಂತ ಇಚ್ಛೆಯಿಂದ ಬಡತನವನ್ನಾರಿಸಿಕೊಂಡುದರಿಂದ ಗಾಂಧಿಗೆ ಬಡತನ ಇಷ್ಟವೆಂಬ ಅಭಿಪ್ರಾಯ ಹರಡಿದೆ. ಒಂದು ಬಾರಿ ಆತನು, "ದಕ್ಷಿಣ ಆಫ್ರಿಕದಲ್ಲಿ ನಾನು ಲಕ್ಷಾಂತರ ಜನ ನಮ್ಮ ದೇಶೀಯರೊಡನೆ ಕಲೆತು ಮಾತನಾಡುತ್ತಿದ್ದೆ. ಐಶ್ವರ್ಯ

ಹೆಚ್ಚಿದಷ್ಟೂ ನೈತಿಕಮಟ್ಟ ಕಡಿಮೆಯಾಗುತ್ತಿದ್ದಂತೆ ನನಗೆ ತೋರಿತು," ಎಂದನು. ಯೇಸು ಹೇಳಿದ, "ಸೂಜಿಯ ಕಣ್ಣಿನಲ್ಲಿ ಒಂಟೆ ತೂರುವುದಕ್ಕಿಂತ, ಧನಿಕ ದೇವರ ರಾಜ್ಯವನ್ನು ಹೊಗುವುದು ಕಷ್ಟ," ಎಂಬ ಮಾತನ್ನು ಹೇಳುತ್ತಿದ್ದನು. ಧನಿಕರು ಬಡವರಿಗೆ ಕೊಟ್ಟು ಬಡವರಾಗಬೇಕೆನ್ನುತ್ತಿದ್ದರು.

ಬಂಗಾಳದಲ್ಲಿ ಒಬ್ಬ ಜಮೀನುದಾರ ಗಾಂಧಿಗೆ ಚಿನ್ನದ ಬಟ್ಟಲಲ್ಲಿ ಹಾಲನ್ನೂ, ಚಿನ್ನದ ತಟ್ಟೆಯಲ್ಲಿ ಹಣ್ಣನ್ನೂ ಕೊಟ್ಟನು. "ಇವನಿಗೆ ಈ ತಟ್ಟೆ ಹೇಗೆ ಬಂತು ? ರೈತರ ಆಸ್ತಿಯಿಂದ ಅವರ ಜೀವನ ಗೋಳಿನಿಂದ ತುಂಬಿರುವಾಗ ನಮಗೆ ಈ ಭೋಗಗಳನ್ನನುಭವಿಸಲು ಎಲ್ಲಿಯ ಧೈರ್ಯ?" ಎಂದು ಕೇಳಿದರು.

ಕಾರ್ಖಾನೆಗಳಿಂದ ಜನರು ಕೆಲಸವನ್ನು ಕಳೆದುಕೊಂಡು, ಭಾರತದ ಬಡತನ ಹೆಚ್ಚುವುದೆಂದು ಆತನು ಹೆದರಿ ಕಾರ್ಖಾನೆಗಳಿಗಿಂತ ಗೃಹಕೈಗಾರಿಕೆಯೇ ಒಳ್ಳೆಯದೆಂದು ಹೇಳಿದನು. ಲಕ್ಷಾಂತರ ಜನ ನೂತರೆ, ಸಾಕಾದಷ್ಟು ನೂಲನ್ನು ತಯಾರು ಮಾಡಲು ಸಾಧ್ಯವಿಲ್ಲವೆ? ಈಗ ಯಂತ್ರಗಳ ಸಹಾಯದಿಂದ, ಕೆಲಸಗಾರರ ಸಂಖ್ಯೆ ಕಡಮೆ ಮಾಡುವುದೇ ಉದ್ದೇಶವಾಗಿದೆ. ಇದು ತಪ್ಪೆಂದು ನನಗೆ ತೋರುತ್ತದೆ. ನನ್ನ ಯಂತ್ರ ಲಕ್ಷಾಂತರ ಮನೆಗಳಲ್ಲಿಡಬಹುದಾದ ಸುಲಭತರದ್ದಾಗಿರಬೇಕು." "ಎಲ್ಲಾ ಮನೆಗಳಲ್ಲೂ ಸಣ್ಣ ಕಾರ್ಖಾನೆ," ಎಂಬುದೇ ಆತನ ಸೂತ್ರವಾಯಿತು.

೧೯೩೪ರ ರಲ್ಲಿ ಆತನನ್ನು ನೋಡ ಬಂದಾತನೊಬ್ಬನು, "ಕೆಲವರಿಗೆ ಉಪಯೋಗವಾಗುವುದೆಂದು ನೀವು ಯಂತ್ರಗಳನ್ನು ಬಹಿಷ್ಕರಿಸುತ್ತೀರೋ?" ಎಂದು ಕೇಳಿದನು.

ಗಾಂಧಿ, "ನಿಮ್ಮ ಮಾತು ನಿಜ. ನನಗೆ ಏಕಸ್ವಾಮ್ಯವೆಂದರೆ ದ್ವೇಷ. ಜನರೊಡನೆ ಕೂಡಿ ಅನುಭವಿಸಲಾಗದುದಕ್ಕೆ ನನ್ನ ಬಹಿಷ್ಕಾರ, ಅಷ್ಟೆ."

ಗಾಂಧಿಯ ತತ್ವಗಳಲ್ಲನೇಕವನ್ನು ಮರೆತರೂ, ಪಾಶ್ಚಾತ್ಯ ಪದ್ಧತಿಗಳನ್ನನುಸರಿಸುವ, ಆಧುನಿಕ ಭಾರತೀಯರು, ಸಮಾಜವಾದಿಗಳು, ಸರ್ಕಾರಿ ಅಧಿಕಾರಿಗಳು ಹಿಂದೆ ಪ್ರಗತಿವಿರುದ್ಧವೆಂದು ತಿಳಿದಿದ್ದ ಆತನ

ವ್ಯವಹಾರ ನೀತಿಯನ್ನು ಒಪ್ಪಿಕೊಳ್ಳುತ್ತಿದ್ದಾರೆ. ಕೈಗಾರಿಕೆಗಳೇನೋ ಆವಶ್ಯಕ. ಆದರೆ ಅನೇಕ ಏಷ್ಯಾ, ಆಫ್ರಿಕಾ ದೇಶಗಳಲ್ಲಿ ಅವುಗಳಿಂದ ಜನರಲ್ಲಿ ನಿರುದ್ಯೋಗ, ಕಷ್ಟಗಳು ಹೆಚ್ಚುತ್ತಿರುವುವೇ ಹೊರತು ಸಂಪತ್ತಾಗಲಿ, ವಿರಾಮವಾಗಲಿ ಸಿಕ್ಕುವುದಿಲ್ಲ. ಉಪವಾಸದಿಂದ ಸಾಯುತ್ತಾರೆ. ೧೯೫೩ರ ಡಿಸೆಂಬರಿನಲ್ಲಿ ಬೊಂಬಾಯಿ ಪ್ರಾಂತ್ಯದ ಮುಖ್ಯ ಮಂತ್ರಿ “ಭಾರತದಲ್ಲಿ ಕೈಗಾರಿಕೆಗಳನ್ನೆಲ್ಲಾ ಸಂಪೂರ್ಣವಾಗಿ ಯಂತ್ರಗಳಿಂದ ನಡೆಸಿದರೆ ನಮ್ಮ ಜನರಿಗೆಲ್ಲಾ ಉದ್ಯೋಗ ಒದಗಿಸಲು ಸಾಧ್ಯವಿಲ್ಲ,” ಎಂದರು.

ಮದರಾಸಿನ ಮಾರ್ಗಗಳಲ್ಲಿ, ಉರಿಯುವ ಬಿಸಿಲಿನಲ್ಲಿ, ಎರಡು ಟನ್ ಟ್ರಕ್ಕುಗಳಷ್ಟು ದೊಡ್ಡ ಗಾಡಿಗಳಲ್ಲಿ ಭಾರಗಳನ್ನು ಕಪ್ಪು ಜನರು ಬರಿಯ ರುಮಾಲು, ದಟ್ಟಿಗಳನ್ನುಟ್ಟು ಎಳೆಯುತ್ತಿರುವುದನ್ನು ನೋಡಿದ್ದೇನೆ. ಪ್ರಾಣಿಗಳ ಕೆಲಸಕ್ಕಿಂತ ಅವರ ದರ ಕಡಮೆ. ಎತ್ತು, ಕುದುರೆಗಳನ್ನು ಉಪಯೋಗಿಸಿದರೇನೇ ಇವರಿಗೆ ಅಸಮಾಧಾನ. ಇನ್ನು ಯಂತ್ರಗಳನ್ನುಪಯೋಗಿಸಿದರೆ ಸಹಿಸುವರೆ? ಗಾಂಧಿಗೆ ಪಾಶ್ಚಾತ್ಯ ಪದ್ಧತಿಗಳಲ್ಲಾಗಲಿ, ಕೈಗಾರಿಕೆಗಳಲ್ಲಾಗಲಿ ದ್ವೇಷವಿರಲಿಲ್ಲ. ಇಂಡಿಯಾ, ಏಷ್ಯಾಗಳ ಆರ್ಥಿಕ ಸಮಸ್ಯೆಗಳು ಆತನ ಭಾರತೀಯ ಕಣ್ಣುಗಳಿಗೆ, ಪಾಶ್ಚಾತ್ಯರನ್ನನುಕರಿಸುವ ಯಂತ್ರಾರಾಧಕರ ಕಣ್ಣುಗಳಿಗಿಂತ ಹೆಚ್ಚು ಸ್ಪಷ್ಟವಾಗಿ ಕಾಣುತ್ತಿದ್ದುವು.

ಯಂತ್ರಗಳಲ್ಲಿ ದ್ವೇಷವೇ ಎಂಬ ಪ್ರಶ್ನೆಯನ್ನು ಕೇಳಿ ಕೇಳಿ ಬೇಸರ ಬಂದು ಗಾಂಧಿ, “ದೇಹವೂ ಒಂದು ಯಂತ್ರವಾಗಿರುವಾಗ ನಾನು ಯಂತ್ರಗಳನ್ನು ಹೇಗೆ ದ್ವೇಷಿಸಲಿ? ರಾಟೆಯೂ ಒಂದು ಯಂತ್ರ. ಹಲ್ಲು ಚುಚ್ಚುವ ಸಣ್ಣ ಕಡ್ಡಿಯೂ ಯಂತ್ರವೇ. ನಾನು ದ್ವೇಷಿಸುವುದು ಯಂತ್ರವನ್ನಲ್ಲ; ಅದರ ಹುಚ್ಚನ್ನು. ಈಗ ಯಂತ್ರಗಳ ಸಹಾಯದಿಂದ ಕೆಲವರು ಲಕ್ಷಾಂತರ ಜನರ ಮೇಲೆ ಸವಾರಿಮಾಡುತ್ತಾರೆ. ಯಂತ್ರಗಳಿಂದ ಮನುಷ್ಯರ ಕೈಕಾಲುಗಳು ಕಟ್ಟಿಹೋಗಬಾರದು. ಅದರಲ್ಲೂ ಕೆಲವು ವಿನಾಯತಿಗಳಿವೆ. ಸಿಂಗರ್ ಹೊಲಿಯುವ ಯಂತ್ರ ಬಹಳ ಉಪಯೋಗಕರವಾದುದು; ಸೊಗಸಾದುದು. ಅದರಲ್ಲಿ ಹೊಲಿಯಲು ಆತನು ಕಲಿತಿದ್ದನು. ಇಂತಹ ಯಂತ್ರಗಳನ್ನು ತಯಾರಿಸಲು ದೊಡ್ಡ ಕಾರ್ಖಾನೆಗಳು ಬೇಡವೆ?

ಗಾಂಧಿಯ ಸುತ್ತುವಾದಕ್ಕೆ ಅನುಗುಣವಾಗಿ, "ನ್ಯಾಯುವಾಗಿ ಮೋಕ್ಷಕ್ಕೆ ಸಹಾಯಕವಲ್ಲದ ಈ ದೇಹವನ್ನು ಬಿಟ್ಟು ಆತ್ಮೋನ್ನತಿಗೆ ಪ್ರಯತ್ನಿಸುವಂತೆ ನನಗೆ ಈ ಯಂತ್ರಗಳ ಸಹಾಯ ಬೇಕಾಗಿಲ್ಲ. ಆದರೆ ಯಂತ್ರಗಳು ಈ ದೇಹಗಳಂತೆ ಅನಿವಾರ್ಯ." ಇಬ್ಬರು ಅಮೆರಿಕಾ ಹೆಂಗಸರು ಆತನಿಗೆ ರೈಲ್ವೆ ಮುಂತಾದ ವೇಗವಾಗಿ ಚಲಿಸುವ ಯಂತ್ರಗಳು ಇಷ್ಟವಿಲ್ಲವೆಂಬುದು ನಿಜವೇ ಎಂದು ಕೇಳಿದಾಗ ಆತನು, "ಹೌದು ಮತ್ತು ಅಲ್ಲ," ಎಂದು ಉತ್ತರವಿತ್ತನು.

ಗಾಂಧಿಗೆ ಪಾಶ್ಚಾತ್ಯ ಸೌಲಭ್ಯಗಳಲ್ಲಿ, ನೈಪುಣ್ಯದಲ್ಲಿ, ಅನಾದರಣೆ ಇರಲಿಲ್ಲ. ಮಿಸ್ ಮೆಡಿಲೀನ್ ಸ್ಲೇಡಿಗೆ ಬರೆಯುತ್ತಾ, "ವೈದ್ಯ ಚಿಕಿತ್ಸೆಯ ಪ್ರಗತಿಯಲ್ಲಿ ಪಾಶ್ಚಾತ್ಯರ ಕೌಶಲವನ್ನು ನೋಡಿ ನಾನು ಬೆರಗಾಗಿದ್ದೇನೆ," ಎಂದನು. ಭಾರತದಲ್ಲಿ ಅತ್ಯಭಿಮಾನವಿದ್ದ ಗಾಂಧಿಗೆ ಪಾಶ್ಚಾತ್ಯರನ್ನು ಅನುಕರಿಸುವುದಾಗಲೀ, ಜನರು ಹೀನ ಸ್ಥಿತಿಯಲ್ಲಿದ್ದರೂ ಅವರ ಮೇಲೆ ವಿಜ್ಞಾನದ ಭಾರ ಹೊರಿಸುವುದಾಗಲೀ ಇಷ್ಟವಿರಲಿಲ್ಲ. ಜನಸಂಖ್ಯೆ ಅಧಿಕವಾಗಿರುವ ಕಡೆ ಯಂತ್ರಗಳು ಅಗತ್ಯವಿಲ್ಲವೆಂದು ಎಲ್ಲರೂ ಒಪ್ಪಿಕೊಂಡಿರುವುದರಿಂದ ಗಾಂಧಿಯ ಗಮನವೆಲ್ಲಾ ಹಳ್ಳಿಗಳ ಕಡೆಗಿತ್ತು.

ಪುರಾತನ ಕಾಲದಿಂದ ಇಂಡಿಯಾದ ಹಳ್ಳಿಗಳು ಧಾಳಿಕಾರರನ್ನು ದೂರವಿರಿಸಿತ್ತು. ಪಾಶ್ಚಾತ್ಯರ ೨೬ ದಂಡಯಾತ್ರೆಗಳ ಅನುಭವವಿದ್ದರೂ, ಇಂಡಿಯಾಗೆ ಪಾಶ್ಚಾತ್ಯರಲ್ಲಿ ವಿಶ್ವಾಸವಿಲ್ಲ. ಗಾಂಧಿಗೆ ತನ್ನ ದೇಶದ ಶಕ್ತಿಯಲ್ಲಿ ನಂಬಿಕೆಯಿದ್ದುದರಿಂದ ಎಲ್ಲಾ ದೇಶದ ಸಂಸ್ಕೃತಿಯ ಪ್ರಭಾವವನ್ನು ಆಹ್ವಾನಿಸಿದನು. ಆದರೆ ವಿದೇಶೀಯರನ್ನೆದುರಿಸಬೇಕಾದರೆ ತನಗಿದ್ದ ಸಾಧನೆ ರೈತರೆಂಬುದನ್ನು ಆತನು ಅರಿತಿದ್ದನು. ವಿದೇಶೀಯರು ಪಟ್ಟಣಗಳಲ್ಲಿ, ಸಂಸ್ಥಾನಗಳಲ್ಲಿ, ಜಿಲ್ಲೆಗಳಲ್ಲಿ ತಮ್ಮ ಆಡಳಿತವನ್ನು ಸ್ಥಾಪಿಸಬಹುದು. ಆದರೆ ಹಳ್ಳಿಗಳಲ್ಲಿ ಇದ್ದ ಒಳಾಡಳಿತ ನಾಶವಾಗಬಾರದೆಂದು ಗಾಂಧಿಯ ಆಶಯ. ಪ್ರತಿ ಹಳ್ಳಿಯ ಆಡಳಿತವನ್ನು, ಪೂರ್ವದಿಂದಲೂ ನೋಡಿಕೊಳ್ಳುತ್ತಿದ್ದ ಐದು ಜನ ಹಿರಿಯರ, ಪಂಚಾಯಿತರ ಸಭೆಗಳ ವಿಚಾರವನ್ನು ಆತನು ಆಗಾಗ ಹೇಳುತ್ತಿದ್ದನು. ಹಳ್ಳಿಗಳಿಗೆ ಆರ್ಥಿಕ ಸ್ವಾತಂತ್ರ್ಯವಿರಬೇಕೆಂದೂ, ಹೇಳುತ್ತಿದ್ದನು. ೧೯೪೨ ರ ಜುಲೈ ೨೬ ರ

ಹರಿಜನ ಪತ್ರಿಕೆಯಲ್ಲಿ, "ಮಾದರಿ ಹಳ್ಳಿಯೆಂದರೆ ಮುಖ್ಯ ವಿಚಾರಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯ ಹೊಂದಿರಬೇಕು. ಆದರೆ ಅವಶ್ಯ ವಿಚಾರದಲ್ಲಿ ಅವಲಂಬನೆಯೂ, ಇರಬೇಕು;" ಎಂದು ಬರೆದರು. ಆಹಾರಕ್ಕೆ ಅಗತ್ಯವಾದ ಬೆಳೆಯನ್ನು—ಅಫೀಮನ್ನಲ್ಲ—ಬೆಳೆಯಬೇಕು; ಶಾಲೆ, ನಾಟಕ ಮಂದಿರಗಳು, ಗುಡಿಸಲುಗಳಲ್ಲಿ ಶುದ್ಧವಾದ ನೀರು, ವಿದ್ಯುಚ್ಛಕ್ತಿ ಎಲ್ಲಾ ಇರಬೇಕು. ವ್ಯಕ್ತಿಗಳ ಸೌಖ್ಯಕ್ಕಾಗಿ ಪಾಶ್ಚಾತ್ಯ ಸೌಕರ್ಯಗಳನ್ನು ಬಳಸಿಕೊಳ್ಳಲು ಆತನು ಹಿಂದೆಗೆಯುತ್ತಿರಲಿಲ್ಲ.

ಹತ್ತಿರದ ಹಳ್ಳಿಗಳೊಡನೆ ವ್ಯಾಪಾರ ನಡೆಸುತ್ತಾ, ಹೊರಗಿನಿಂದ ಸಾಧ್ಯವಾದಷ್ಟು ಕಡಮೆ ಸಾಮಾನುಗಳನ್ನು ತರಿಸುತ್ತಾ, ಸ್ವತಂತ್ರವಾದ, ಸ್ವಾವಲಂಬಿಯಾದ ಹಳ್ಳಿ, ಏಷ್ಯಾದ ಪ್ರಜಾಸ್ವಾತಂತ್ರ್ಯಕ್ಕೆ ಗಾಂಧಿಯ ಯೋಜನೆ. ಈ ಸಣ್ಣ ಪ್ರದೇಶಗಳು ಸಹಕರಿಸಿ ಏಳಿಗೆ ಹೊಂದಿದಷ್ಟೂ, ಮೇಲಿನ ನಿರಂಕುಶಾಧಿಕಾರದ ಬಲ ಕಡಮೆಯಾಗುತ್ತದೆ. ಕಾರ್ಖಾನೆಯ ಕೂಲಿಗಳ ಬಡತನದ ಪಟ್ಟಣಗಳಿಗಿಂತ ಗಾಂಧಿಗೆ ಇವು ಇಷ್ಟವಾಗಿದ್ದುವು.

ಗಾಂಧಿ ಕೈಗಾರಿಕೆಗಳನ್ನು ಅಲ್ಲಗಳೆದನೆಂದು ಹೇಳುವ ಮಾತಿಗೆ ಆಧಾರವಿಲ್ಲ. ಆತನಿಗೆ ಪಾಶ್ಚಾತ್ಯ ವಿಜ್ಞಾನ ಬೇಕಾಗಿತ್ತು; ಆದರೆ ಅದರಿಂದ ವ್ಯಕ್ತಿಗೆ, ಆತನ ಆತ್ಮಕ್ಕೆ ಕೆಡಕುಂಟಾಗುವುದಕ್ಕೆ ಆತನು ಸಮ್ಮತಿಸಲಿಲ್ಲ. ಯೂರೋಪಿನ ಕೈಗಾರಿಕೆಗಳು ಪೌರ್ವಾತ್ಯರ ಮೇಲೆ ನಡೆಸುತ್ತಿದ್ದ ಅತ್ಯಾಚಾರ, ಇಂಡಿಯಾದಲ್ಲಾಗಲೀ, ಏಷ್ಯಾದಲ್ಲಾಗಲೀ ಸುಂದರ ದೃಶ್ಯವಲ್ಲ.

ಯಂತ್ರಗಳು ಮನುಷ್ಯನ ಸೌಕರ್ಯಕ್ಕೆ ಸಹಾಯ ಮಾಡದೆ, ಅವನನ್ನು ಗುಲಾಮನನ್ನಾಗಿ ಮಾಡಿಕೊಳ್ಳುವ ಸಂಸ್ಕೃತಿಯ ಭೀಕರತೆಯನ್ನು ಗಾಂಧಿಯ ಪಾರಮಾರ್ಥಿಕ ದೃಷ್ಟಿ ಬೇಗ ಕಂಡುಕೊಂಡಿತು. ೧೯೩೧ ರಲ್ಲಿ ಲಂಡನ್ನಿನಲ್ಲಿ ಚಾರ್ಲಿಚಾಪ್ಲಿನ್ ಗಾಂಧಿಯನ್ನು ನೋಡಲು ಬಯಸಿದನು. ಸಿನಿಮಾಗೆ ಎಂದೂ ಹೋಗದ ಗಾಂಧಿಗೆ ಆ ಹೆಸರಿನ ಪರಿಚಯವಿರಲಿಲ್ಲ. ತಿಳಿದಾಗ ನಟರಲ್ಲಿ ತನಗೆ ಆಸಕ್ತಿಯಿಲ್ಲವೆಂದು ಹೇಳಿದನು. ಆದರೆ ಆ ನಟನು ಲಂಡನ್ನಿನ ಲಾಂಬೆಕ್ ಬಡವರ ಮನೆಯಿಂದ ಬಂದವನೆಂದು ತಿಳಿಯಲು, ನೋಡಲು ಒಪ್ಪಿದನು. ಪಾಶ್ಚಾತ್ಯರೆಲ್ಲರೂ ತಿಳಿದಂತೆ ಗಾಂಧಿಗೆ

ಯಂತ್ರಗಳಲ್ಲಿ ವಿಶ್ವಾಸವಿಲ್ಲವೆಂದು ತಿಳಿದು ಚಾಪ್ಲಿನ್ ಮಾತಿಗಾರಂಭಿಸಿದನು. ಆದರೆ ಆ ಸಂಭಾಷಣೆಯ ಪರಿಣಾಮವಾಗಿ ತನ್ನ ಒಂದು ಚಿತ್ರವನ್ನು ಚಾಪ್ಲಿನ್ ಮನುಷ್ಯರಿಗೂ ಯಂತ್ರಗಳಿಗೂ ದಿನವೂ ನಡೆಯುತ್ತಿರುವ ಸ್ಪರ್ಧೆಗೆ ಮೀಸಲಾಗಿ ಮಾಡಿದನು.

ಯಂತ್ರಗಳ ವೇಗ ಹೆಚ್ಚಿದಂತೆಲ್ಲಾ ಮನುಷ್ಯರ ಜೀವನದ ವೇಗವೂ ಹೆಚ್ಚಿ, ನರಗಳು ದುರ್ಬಲವಾಗುತ್ತವೆ. ವಿರಾಮ ಜೀವನವೆ ಸಂಸ್ಕೃತಿ, ಯಂತ್ರಗಳೊಡನೆ ಸೇರಿಹೋಗಿ ಮನುಷ್ಯನ ಒಳಜೀವನ ಬರಡಾಗುತ್ತದೆ. ಅನಾಗರಿಕ, ವಿಗ್ರಹಮಾಡಿ ಅದರ ಗುಲಾಮನಾಗುವಂತೆ ವ್ಯಕ್ತಿಯ ಗತಿಯಾಗುವುದು. ಗಾಂಧಿಗೆ ಯಂತ್ರಗಳ ಉಪಯೋಗವಾಗಲಿ, ಬೇರೆ ವಿಧವಾದ ಪ್ರಗತಿಯಾಗಲೀ ಧ್ಯೇಯವಾಗಿರಲಿಲ್ಲ. ಆರ್ಥಿಕ ಪ್ರಗತಿಯ ಬೆಲೆ, ಮಾನವರ ಮೇಲೆ ಅದರ ನೈತಿಕ, ಪಾರಮಾರ್ಥಿಕ ಪರಿಣಾಮ. ವ್ಯಕ್ತಿ ಮುಖ್ಯ, ವ್ಯಕ್ತಿಯ ಬೆಲೆ ಅವನಿಗೇನಿದೆ ಎಂಬುದರ ಮೇಲೆ ನಿರ್ಧರಿಸಲ್ಪಡುವುದಿಲ್ಲ; ಅವನೆಂತಹವನೆಂಬುವುದು ಮುಖ್ಯ; ಆಸ್ತಿಯಲ್ಲ, ವ್ಯಕ್ತಿತ್ವ; ಹೊರಗೆ ತೋರುವ ಐಶ್ವರ್ಯವಲ್ಲ, ಒಳಸಂಪತ್ತು. ಆತನು ಪುರಸ್ಕರಿಸುತ್ತಿದ್ದುದು ವ್ಯಕ್ತಿಯ ಯೋಗ್ಯತೆಯನ್ನು, ಸಂಪತ್ತನ್ನಲ್ಲ. ಯಂತ್ರಯುಗ ಜನರನ್ನು ಧನಿಕರನ್ನಾಗಿ ಮಾಡುತ್ತಿತ್ತು; ಮಾನವರಾಗಿ ಮಾಡುತ್ತಿತ್ತೆ? ಇಪ್ಪತ್ತನೆಯ ಶತಮಾನದ ಮಹಾವ್ಯಕ್ತಿ, ಏಕೆ ಇಪ್ಪತ್ತು ಶತಮಾನಗಳಲ್ಲೂ ಮಹಾವ್ಯಕ್ತಿಯಾದ ಗಾಂಧಿ ವಾಸ್ತವವಾದ, ವ್ಯಕ್ತಿಯ ಮಹತ್ತಿಗೆ ಸಹಾಯಮಾಡಬಲ್ಲುದೆ ಎಂದು ಸಂದೇಹಪಟ್ಟನು. ಜನರನ್ನು ಯಂತ್ರದ ಬಾಯಿಗೆ ಕೊಟ್ಟು ಒಂದೇ ವಿಧವಾದ ಕುಬ್ಜರನ್ನಾಗಿ ಮಾಡದ ಸಂಪದ್ಯುಕ್ತವಾದ ಇಂಡಿಯಾದ ಕನಸನ್ನು ಆತನು ಕಾಣುತ್ತಿದ್ದನು. ಜಗತ್ತನ್ನು ನೋಡಿ, ಯಂತ್ರಗಳಿಂದ ಪಾರಮಾರ್ಥಿಕ ತತ್ವಗಳು ನಾಶವಾಗಿ ಮನುಷ್ಯ ವ್ಯಕ್ತಿತ್ವವನ್ನು ಕಳೆದುಕೊಂಡನೆಂದು ಹೆದರಿದನು. ವ್ಯಕ್ತಿಯಲ್ಲಿ ಆತನಿಗಿದ್ದ ಗೌರವ ಆತನನ್ನು ಸಮತಾವಾದ ವಿರೋಧಿಯಾಗಿ ಮಾಡಿತು. ಆದರೆ ಸಮತಾವಾದವನ್ನು ವಿರೋಧಿಸುವ ವ್ಯಕ್ತಿಗಳಿಗೂ ಅದೇ ಗುರಿಯಾಗಿ ಕಂಡುದರಿಂದ ಸೋವಿಯಟ್ಟರನ್ನು ವಿರೋಧಿಸಿದ ಮನೋಭಾವವೇ ಪಾಶ್ಚಾತ್ಯ ಸಂಸ್ಕೃತಿಯನ್ನೂ ಟೀಕಿಸುವಂತೆ ಮಾಡಿತು. ಎರಡರಲ್ಲೂ

ತೀಕ್ಷ್ಣತೆಯ ವ್ಯತ್ಯಾಸವಿತ್ತೇ ಹೊರತು ಭಾವನೆಯ ವ್ಯತ್ಯಾಸವಿರಲಿಲ್ಲ. "ಆಧುನಿಕ ವಾಸ್ತವತಾವಾದದ ಫಲವೇ ಬಾಲ್ಷೆವಿಸಂ. ವಿವೇಕವಿಲ್ಲದ ಈ ಯಂತ್ರಪೂಜೆಯಿಂದ ಆರ್ಥಿಕ ಪ್ರಗತಿಯೇ ಜೀವನದ ಗುರಿಯೆಂದು ತಿಳಿಯುವ, ಜೀವನದ ಮುಖ್ಯ ಗುರಿಯನ್ನು ಕಳೆದುಕೊಂಡಿರುವ ಭಾವನೆಯುಂಟಾಗಿದೆ. ಐಹಿಕ ವಿಚಾರಗಳಿಗಿಂತ ಆತ್ಮ ಮುಖ್ಯವೆಂದೂ, ಪಾಶವೀ ಶಕ್ತಿಗಿಂತ ಸ್ವಾತಂತ್ರ್ಯ ಪ್ರೇಮಗಳು ಹೆಚ್ಚೆಂದೂ ತಿಳಿದಿದ್ದರೆ ಈ ಪವಿತ್ರ ಭೂಮಿಯಲ್ಲೂ ಅತ್ಯಲ್ಪಕಾಲದಲ್ಲಿ ಬಾಲ್ಷೆವಿಸಂ ಮೆರೆಯುತ್ತದೆ," ಎಂದು ಗಾಂಧಿ ಹೇಳಿದನು. ಇದು ಇಂಡಿಯಾದ ವಿಚಾರವಾಗಿ ಹೇಳಿದ ಮಾತಾದರೂ, ಯಾವ ದೇಶಕ್ಕಾದರೂ ಅನ್ವಯಿಸುತ್ತದೆ. ತಮ್ಮಲ್ಲಿಯೇ ರೋಗದ ಕ್ರಿಮಿಯಿರುವುದರಿಂದ ಪಾಶ್ಚಾತ್ಯರಿಗೆ ಬಾಲ್ಷೆವಿಸಂ ಸೋವಿಯಟಿಸಂ ಎಂದರೆ ಅಷ್ಟು ಗಾಬರಿ.

ಗಾಂಧಿಯ ಬಳಿ ಇದಕ್ಕೆ ಮದ್ದಿತ್ತು. ಆಸ್ತಿಗಿಂತ ಧ್ಯೇಯಗಳಿಗೆ ಪ್ರಾಮುಖ್ಯತೆ ಕೊಟ್ಟದ್ದುದರಿಂದ ದೈಹಿಕ ಶಕ್ತಿಗಿಂತ ಆತ್ಮಶಕ್ತಿ ಹೆಚ್ಚಾಗಿದ್ದ ಈ ವೀರವ್ಯಕ್ತಿ ತನ್ನ ಸ್ವಾತಂತ್ರ್ಯದ ಮೇಲೆ ಧಾಳಿಮಾಡಿದವರನ್ನೆದುರಿಸಲು ಸಮರ್ಥನಾದನು. ಈ ಔಷಧಿ ಕಮ್ಯೂನಿಸಮ್ಮನ್ನು ಸೋಲಿಸಿ, ಪ್ರಜಾಪ್ರಭುತ್ವಕ್ಕೆ ಶಕ್ತಿಕೊಡಬಲ್ಲದು.

ತನ್ನ ಭಾಷಣಗಳಲ್ಲಿ, ಲೇಖನಗಳಲ್ಲಿ, ಉಪವಾಸಗಳಲ್ಲಿ, ರಾಜಕೀಯ ಕಾರ್ಯಗಳಲ್ಲಿ, ಸ್ಮಟ್ಸನೊಡನೆ, ಬ್ರಿಟಿಷರೊಡನೆ, ತನ್ನ ಜನರೊಡನೆ ಹೋರಾಟದಲ್ಲಿ, ಎಲ್ಲವುಗಳಲ್ಲಿ ಗಾಂಧಿ ಈ ಜಗತ್ತಿನಲ್ಲಿ ಎಲ್ಲರನ್ನೂ ಎದುರಿಸುವ ಸಮಸ್ಯೆಗೆ ಪರಿಹಾರ ಹುಡುಕುತ್ತಿದ್ದನು; ಆಧುನಿಕಜಗತ್ತಿನಲ್ಲಿ ವ್ಯಕ್ತಿ ಅಂತಶ್ಯಾಂತಿಯನ್ನೂ, ಹೊರಗಿನ ಸೌಖ್ಯವನ್ನೂ ಉಳಿಸಿಕೊಳ್ಳುವುದು ಹೇಗೆ? ಶಕ್ತವಾದ ಸರ್ಕಾರಗಳನ್ನು, ಆರ್ಥಿಕ ಸಂಸ್ಥೆಗಳನ್ನು, ಕ್ರೂರ ಶಕ್ತಿಗಳನ್ನು ಅಣುಶಕ್ತಿಯನ್ನು ಎದುರಿಸಿ, ಪ್ರಾಮಾಣಿಕನಾಗಿ, ಸ್ವತಂತ್ರವಾಗಿ, ವ್ಯಕ್ತಿತ್ವವನ್ನುಳಿಸಿಕೊಳ್ಳುವುದು ಹೇಗೆ? ಹೆಚ್ಚು ಜನ ಈ ಶಕ್ತಿಯ ಕೂಟವನ್ನೆದುರಿಸಲಾರದೆ, ತಮ್ಮ ದೌರ್ಬಲ್ಯವನ್ನೊಪ್ಪಿಕೊಂಡು ತಲೆಬಾಗುತ್ತಾರೆ. ಪರಿಣಾಮವಾಗಿ ಮನುಷ್ಯರ ಎತ್ತರ ಎಲ್ಲಾ ದೇಶಗಳಲ್ಲೂ ಕಡಮೆಯಾಗುತ್ತಿದೆ. ಇದರಿಂದ ಪ್ರಜಾಪ್ರಭುತ್ವಕ್ಕೆ ತೊಂದರೆಯುಂಟಾಗುತ್ತದೆ. ವ್ಯಕ್ತಿ ದಬ್ಬಾಳಿಕೆಯನ್ನೆದುರಿಸಲು ಸಿದ್ಧನಾಗಿಲ್ಲದಿದ್ದರೆ ಸ್ವಾತಂತ್ರ್ಯ ನಾಶ

ವಾದಂತೆಯೇ.

ಲೆನಿನ್ ಮತ್ತು ಸ್ಟಾಲಿನ್ನರ ಮುಖ್ಯ ಬಯಕೆ ಶಕ್ತಿ. ವ್ಯಕ್ತಿಯಲ್ಲಿ ನಂಬಿಕೆಯಿಲ್ಲದೆ, ಅವನನ್ನು ನೆಗ್ಗಿಸಿ, ನಾಯಕತ್ವ ಮುಖ್ಯವೆಂದು ಸಾರಿದರು. ಒಬ್ಬ ಮನುಷ್ಯನ ನಾಯಕತ್ವದಲ್ಲಿ ಆರಿಸಿದ ಒಂದು ಪಕ್ಷ, ವಿಧೇಯರಾದ ಜನರನ್ನು ನಡೆಸುತ್ತದೆ. ಅದರಿಂದಲೇ ಈ ಸರ್ವಾಧಿಕಾರ ಮಾನವತ್ವವನ್ನು ನಾಶಮಾಡುತ್ತದೆ. ಗಾಂಧಿಗೆ ವ್ಯಕ್ತಿ ಮುಖ್ಯ. ಅವನು ಬ್ರಿಟಿಷ್ ಆಡಳಿತವನ್ನೇ ಅಲ್ಲ; ಯಾವ ಆಡಳಿತವನ್ನಾಗಲೀ ಎದುರಿಸಬಲ್ಲ ಶಕ್ತನಾಗಬೇಕು. ನೆಹರು, “ಗಾಂಧಿ ನಮ್ಮ ಬೆನ್ನೆಲುಬಿಗೆ ಶಕ್ತಿಕೊಟ್ಟು ನಿಲ್ಲುವಂತೆ ಮಾಡಿದರು,” ಎಂದನು. ಬಗ್ಗದ ಬೆನ್ನಿನ ಮೇಲೆ ದಬ್ಬಾಳಿಕೆ ಸವಾರಿ ಮಾಡಲಾರದು.

ಆರ್ಥಿಕ, ವೈಜ್ಞಾನಿಕ ಶಕ್ತಿಗೆ ಸರಿಸಮವಾಗಿ ವ್ಯಕ್ತಿಯು ಆತ್ಮಶಕ್ತಿ ಬೆಳೆಯದಿದ್ದರೆ ಗುಲಾಮನಾಗುತ್ತಾನೆ. ಆಧುನಿಕ ಸಂಸ್ಕೃತಿಯ ಭವಿಷ್ಯ ಈ ಸ್ಪರ್ಧೆಯ ಫಲಿತಾಂಶವನ್ನವಲಂಬಿಸಿದೆ.

ಗಾಂಧಿ ಆಹಾರದ ವಿಚಾರವಾಗಿ ಹೆಚ್ಚು ಅಭ್ಯಾಸ ಮಾಡಿದನು. ಮನುಷ್ಯರ ಬೆಳವಣಿಗೆಗೆ ಬೇಕಾದ ಅನ್ನಾಂಶಗಳ ವಿಚಾರವಾಗಿ ಸಂಶೋಧನೆ ನಡೆಸಿದನು. ವ್ಯಕ್ತಿಯ ಬೆಳವಣಿಗೆಗೆ ಧೈರ್ಯ ಅಗತ್ಯವೆಂದು ಆತನು ತಿಳಿದಿದ್ದನು. ಆತನು ಅಹಿಂಸೆಯ ಆರಾಧಕನಾದರೂ, “ಹೇಡಿತನವನ್ನೋ ಹಿಂಸೆಯನ್ನೋ ಆರಿಸಿಕೊಳ್ಳಬೇಕಾದರೆ ನಾನು ಹಿಂಸೆಯನ್ನೇ ಆರಿಸುತ್ತೇನೆ” ಎಂದು ಹೇಳಿದನು. ಹೇಡಿತನ ಮನುಷ್ಯನ ಆತ್ಮಗೌರವವನ್ನು ತಗ್ಗಿಸಿ, ನಿಲುವನ್ನು ಕುಗ್ಗಿಸುತ್ತದೆ. ಗಾಂಧಿಗೆ ಹೆದರಿಕೆಯಿರಲಿಲ್ಲ. ಇಪ್ಪತ್ತು, ಮೂವತ್ತು ವರ್ಷಗಳಲ್ಲಿ ಸಾಧಾರಣ ಮನುಷ್ಯನಾಗಿದ್ದವನು ಕಡೆಯಲ್ಲಿ ಮಹಾವ್ಯಕ್ತಿಯಾಗಲು ಸಹಕಾರಿಯಾದುದು ಈ ಸ್ವಭಾವವೇ. ಆತನಿಗೆ ಸರ್ಕಾರದ, ಸೆರೆಮನೆಯ ಹೆದರಿಕೆ ಇರಲಿಲ್ಲ. ಸಾವು ತನ್ನ ದೇವನೊಡನೆ ಐಕ್ಯಗೊಳಿಸುವುದು, ರೋಗವನ್ನು ಆತನು ಗೆಲ್ಲಬಲ್ಲನು. ಹಸಿವು, ಜನರ ಅವಿಶ್ವಾಸ, ಟೀಕೆ, ನಿರಾಕರಣೆ ಯಾವುದಕ್ಕೂ ಆತನು ಹೆದರುತ್ತಿರಲಿಲ್ಲ.

ಗಾಂಧಿಯ ವ್ಯಕ್ತಿತ್ವ ಧೈರ್ಯದ ಮೇಲೆ ನಿಂತಿತ್ತು. ಅಹಿಂಸಾ

ಮಾರ್ಗವನ್ನವಲಂಬಿಸಲು, ಹಿಂಸಾಮಾರ್ಗಕ್ಕಿಂತ ಹೆಚ್ಚು ಧೈರ್ಯ ಬೇಕು. ನಾಗಾಲೋಟದಲ್ಲೋಡುತ್ತಾ ಪೋಲೀಸರ ಕುದುರೆಗಳು ಮೇಲೆ ಹತ್ತಿಬಂದರೆ ನೆಲದಮೇಲೆ ಸುಮ್ಮನೆ ಕುಳಿತಿರಲು ಹೇಡಿಗೆ ಸಾಧ್ಯವಿಲ್ಲ. ಮೋಟಾರುಕಾರುಗಳು, ಕೋಲುಗಳನ್ನು ತಿರುವುತ್ತಿರುವ ಪೋಲೀಸರು ಬರಲು ಆ ದಾರಿಯಲ್ಲಿ ಕದಲದೆ ಮಲಗಿರಲು ಹೇಡಿಗೆ ಸಾಧ್ಯವಿಲ್ಲ. ಇದು ಶೂರರ ಉತ್ಸಾಹಯುತ ಪ್ರತಿಭಟನೆ. ಗಾಂಧಿಯ ಹೋರಾಟದ ರೀತಿ ಶಾಂತಿಪ್ರಿಯನಾದ ಹಿಂದುವನ್ನು ವೀರನಾಗಿ ಮಾರ್ಪಡಿಸಿತು. ಗಾಂಧಿಗೆ ಸಾಧಾರಣರಲ್ಲಿದ್ದ ನಂಬಿಕೆಯಿಂದ ಈ ರೀತಿಯ ಹೋರಾಟ ಉದ್ಭವಿಸಿತು. ಅತಿ ಅತಿಹೀನರಿಗೆ ಸಮಾನನೆಂದೂ ಅತಿಹೀನನು ತಮ್ಮ ಸಮ ನೆಂದೂ ಆತನೆಣಿಸಿದನು. "ನನ್ನ ಜೀವನವನ್ನು ನೇರಪಡಿಸುವ ಧ್ಯೇಯ ಗಳು ಜನಸಾಮಾನ್ಯಕ್ಕೆಲ್ಲಾ ಅನ್ವಯಿಸುತ್ತವೆ. ನಾನು ಮಾಡಿದ ಪ್ರಯತ್ನ ಮಾಡಿ, ನನ್ನ ಆಸೆ ನಂಬಿಕೆಗಳಿರುವ ಯಾವ ಸ್ತ್ರೀಪುರುಷನಾದರೂ, ನಾನು ಸಾಧಿಸಿದ ಕೆಲಸವನ್ನು ಸಾಧಿಸಬಹುದೆಂಬುದರಲ್ಲಿ ನನಗೇನೂ ಸಂದೇಹ ವಿಲ್ಲ. ನಾನು ಪೂರ್ಣ ಸಾತ್ವಿಕನಾಗಲು ಪ್ರಯತ್ನಿಸುತ್ತಿರುವ ಒಬ್ಬ ಬಡ ವ್ಯಕ್ತಿ. ಮುಂದೆ ಇನ್ನೂ ಕಠಿಣವಾದ ಹಾದಿಯನ್ನು ದಾಟಬೇಕೆಂಬ ಅರಿವು ನನಗಿದೆ", ಎಂದು ಬರೆದರು. ತನ್ನಲ್ಲಿಯೂ, ಇತರರಲ್ಲಿಯೂ ಮಾನವ ಸಹಜವಾದ ದೌರ್ಬಲ್ಯವಿರುವುದೆಂದೂ, ಯಾರೂ ನಿರ್ದುಷ್ಟರಲ್ಲ ವೆಂದೂ ಆತನು ತಿಳಿದಿದ್ದನು. ಆದರೆ ವ್ಯಕ್ತಿ ತನ್ನನ್ನು ಸುಧಾರಣೆ ಮಾಡಿ ಕೊಳ್ಳಬಹುದೆಂದೂ, ಮೇಲು ಮೇಲಕ್ಕೆ ಸಾಗಬಹುದೆಂದೂ ಆತನು ನಂಬಿ ದ್ದನು. ಮನುಷ್ಯರ ಕೆಟ್ಟಗುಣಗಳಿಗೆ ಪ್ರಾಮುಖ್ಯತೆ ಕೊಡದೆ, ಅವರು ಒಳ್ಳೆಯವರೆಂಬ ಅಭಿಪ್ರಾಯ ತೋರಿ ಮಾರ್ಪಡಿಸುತ್ತಿದ್ದನು. ಇದರಿಂದ ಜತೆಯಲ್ಲಿದ್ದವರ ಎತ್ತರ ಹೆಚ್ಚುತ್ತಿತ್ತು. ಎಲ್ಲಿಂದಲೋ ಬಂದ ಅತಿಥಿಗೆ ಕೂಡ ಈ ಸತ್ಪಥದಾವರಣದ ಅರಿವಾಗುತ್ತಿತ್ತು.

ಜನರ ಸುಧಾರಣೆಯಲ್ಲಿ ಸದಾ ಆಸಕ್ತಿಯಿದ್ದರೂ, ಗಾಂಧಿ ಜನರನ್ನು ಅವರಿದ್ದಂತೆ ಸ್ವೀಕರಿಸುತ್ತಿದ್ದರು. ಪ್ರೇಮ ಆತನಲ್ಲಿ ಸಹನೆ ತುಂಬಿತು. ತನ್ನ ನಡತೆಯ ವಿಚಾರದಲ್ಲಿ ಕಠಿಣ ನಿಯಮಗಳನ್ನಿಟ್ಟುಕೊಂಡು ಬೇರೆಯವರಿಗೆ ಸ್ವೈರಣೆ ತೋರುತ್ತಿದ್ದನು. ದೇವರಲ್ಲಿ, ಅಹಿಂಸೆಯಲ್ಲಿ, ಬ್ರಹ್ಮಚರ್ಯದಲ್ಲಿ,

ತನ್ನಲ್ಲಿ, ನಂಬಿಕೆಯಿಲ್ಲದ ಸ್ತ್ರೀಪುರುಷರನೇಕರನ್ನು ಆಶ್ರಮಕ್ಕೆ ಆಹ್ವಾನಿಸಿ ಅವರೊಡನೆ ಸಂತೋಷವಾಗಿ ಕಾಲಕಳೆಯುತ್ತಿದ್ದನು. ವ್ಯಕ್ತಿಯ ಬೆಳವಣಿಗೆಗೆ ಭಿನ್ನಾಭಿಪ್ರಾಯಗಳು ಮುಖ್ಯವೆಂದು ಆತನು ತಿಳಿದಿದ್ದನು. ತನಗೆ ವಿಶ್ವಾಸಘಾತಕರಾದರೆ ಆತನು ಚಿಂತಿಸುತ್ತಿರಲಿಲ್ಲ; ಧ್ಯೇಯಕ್ಕೆ ವಿಶ್ವಾಸಘಾತಕರಾದರೆ ಮಾತ್ರ ಆತನಿಗೆ ಅಸಮಾಧಾನವಾಗುತ್ತಿತ್ತು.

ಎಲ್ಲಾ ಸಮಾಜಗಳಲ್ಲೂ, ಧ್ಯೇಯಗಳನ್ನು ಬಿಡುವುದು, ಅವುಗಳ ಬೆಲೆಗೆ ಹೆದರಿ ನಿರಂಕುಶಾಧಿಕಾರದಲ್ಲಿ ಸಾವು ಬೆಲೆಯಾಗಬಹುದು; ಪ್ರಜಾಪ್ರಭುತ್ವದಲ್ಲಿ ತೊಂದರೆ, ಅವಮಾನ. ಗಾಂಧಿಗೆ ಬೆಲೆಯ ಲಕ್ಷ್ಯವಿರಲಿಲ್ಲ. ಪ್ರಾಪಂಚಿಕ ವಿಚಾರಗಳಲ್ಲಿ ಬಡತನ ಹೆಚ್ಚಿದಷ್ಟೂ, ಆತನು ಕೊಡಬಹುದಾದ ಬೆಲೆ ಹೆಚ್ಚುತ್ತಿತ್ತು; ಆತನಿಗೆ ಅತ್ಯಂತ ಪ್ರಿಯವಾದ ದೈವಿಕಬಲ ಹೆಚ್ಚುತ್ತಿತ್ತು.

ಇತರರಲ್ಲಿಯೂ ಈ ಭಾವನೆಯನ್ನು ಬೆಳೆಸಲು ಆತನು ಪ್ರಯತ್ನಪಡುತ್ತಿದ್ದನು. ನಂಬಿಕೆಗೋಸ್ಕರ ಬಾಂಧವ್ಯವನ್ನು ಬಿಡಬೇಕೆಂದು ತನ್ನ ಸಹಚರರಿಗೆ ಬೋಧಿಸುತ್ತಿದ್ದನು. ಆತನು ಒಂದು ಚಳುವಳಿಯ ನಾಯಕನಾಗಿದ್ದುದು ಮಾತ್ರವಲ್ಲ; ಜನರನ್ನು ಸರಿಪಡಿಸಿ ಒಂದು ಜನಾಂಗವನ್ನು ಸೃಷ್ಟಿಸುತ್ತಿದ್ದನು. ಜನಾಂಗದ ತಂದೆ ಆತನಾಗಬೇಕಾದರೆ ಆತನ ಮಕ್ಕಳು ಮಹಾಪುರುಷರಾಗಿರಬೇಕು. ಕಾಂಗ್ರೆಸ್ ಸಂಸ್ಥೆಯಲ್ಲಾಗಲಿ, ತನ್ನ ಆಶ್ರಮನಿವಾಸಿಗಳಲ್ಲಾಗಲಿ ವ್ಯತಿರಿಕ್ತ ಅಭಿಪ್ರಾಯ ಕಂಡುಬಂದರೆ ಅದನ್ನು ಅಮುಕಿಡುವ ಶಕ್ತಿಯಿದ್ದರೂ ಅದಕ್ಕೆ ತಲೆಬಾಗುತ್ತಿದ್ದನು; ಭಿನ್ನಾಭಿಪ್ರಾಯಕ್ಕೆ ಆತನ ಮನ್ನಣೆಯಿತ್ತು. ಅದೇ ಮಹಾಪುರುಷನ ಲಕ್ಷಣ. ಮೂಲ ಶಿಕ್ಷಣದ ವಿಚಾರವಾಗಿ ಮಾತನಾಡುತ್ತಿರುವಾಗ ಜಕೀರ್ ಹುಸೇನ್ ಎಂಬ ಮುಸಲ್ಮಾನ ಉಪಾಧ್ಯಾಯನು ಗಾಂಧಿಯ ವಾದವನ್ನೊಪ್ಪಲಿಲ್ಲ. ಗಾಂಧಿ ಆತನನ್ನು ಮೂಲಶಿಕ್ಷಣ ಸಂಸ್ಥೆಯ ಅಧ್ಯಕ್ಷನಾಗಿ ನಿಯಮಿಸಿದನು. ಮಹಾತ್ಮನ ಮನೋಶಕ್ತಿ, ಧ್ಯೇಯಗಳಲ್ಲಿ ಅಚಲ ನಂಬಿಕೆ ಆತನನ್ನು ನಿರಂಕುಶಾಧಿಕಾರಿಯಾಗಿ ಮಾಡಬಹುದಾಗಿತ್ತು—ಆತನಲ್ಲಿ ಆ ಸ್ವಭಾವವಿತ್ತು—ಆದರೆ ವ್ಯಕ್ತಿಗಳ ಬೆಳವಣಿಗೆಗಳಲ್ಲಿ ಆತನಿಗಿದ್ದ ಆಸಕ್ತಿ ಪ್ರಜಾರಾಜ್ಯೋಪಾಸಕನನ್ನಾಗಿ ಮಾಡಿತು.

ಇದರಿಂದ ಗಾಂಧಿಗೆ ಹೆಚ್ಚು ಜನ, ವೈವಿಧ್ಯತೆಯಿಂದ ಕೂಡಿದ ಅನುಯಾಯಿಗಳುಂಟಾದರು. ಅನೇಕ ವಿಧದ ನಾಯಕರೂ ಸಿಕ್ಕಿದರು. ೧೯೫೨ರ ಮಾರ್ಚ್ ೧೫ರ ಹರಿಜನ ಪತ್ರಿಕೆಯಲ್ಲಿ ಗಾಂಧಿಯ ಮುಖ್ಯ ಕಾರ್ಯದರ್ಶಿ ಪ್ಯಾರಿಲಾಲ್ ಬರೆಯುತ್ತಾರೆ. "ಮಹಾತ್ಮರ ಆಪ್ತಮಿತ್ರರಲ್ಲಿ ವ್ಯಾಪಾರೋದ್ಯಮಗಳಲ್ಲಿ ನುರಿತ ಜೆ. ಡಿ. ಬಿರ್ಲಾ, ಸೇಠ್ ಜಮ್ನಾಲಾಲ್ ಬಜಾಜ್, ಸಂದೇಹಿಗಳಾದ ಆಚಾರ್ಯ ಕೃಪಲಾನಿಯಂತಹವರು, ಕ್ರಾಂತಿಕಾರ ಜವಹರ್‌ಲಾಲರಂತಹವರು, ರಾಜಕಾರಣಿಗಳಾದ ಮೋತಿಲಾಲ್ ನೆಹರೂ ವಿಠಲ್‌ಬಾಯ್ ಪಟೇಲರಂತಹವರು, ತ್ಯಾಗದಲ್ಲಿ ನಂಬಿಕೆಯಿದ್ದ ವಿನೋಬಭಾವೆಯಂತಹವರು, ತೀಕ್ಷ್ಣವಕೀಲರಾದ ರಾಜಗೋಪಾಲಾಚಾರಿಯಂತಹವರು, ಕನಿಕರವುಳ್ಳ ಡಾ. ರಾಜೇಂದ್ರ, ಪ್ರಸಾದರು, ವಿದ್ವಾಂಸರಾದ ಮೌಲಾನಾ ಆಜಾದ್, ಉತ್ತಮ ವೈದ್ಯರಾದ ಡಾ. ಅನ್ಸಾರಿ, ಹಕೀಮ ಅಜಮಲ್‌ಖಾನ್ ಸಾಹೇಬ್, ಇಂಡಿಯಾದ ಕೋಗಿಲೆ ಸರೋಜಿನಿನಾಯ್ಡು, ಉತ್ತಮ ವಂಶದ ಮಿಸ್‌ಸ್ಲೇಡ್; ಕಡೆಯದಾದರೂ ಕಡಮೆಯಲ್ಲದ ನಮ್ಮ ಉಕ್ಕಿನ ಮನುಷ್ಯ, ಸ್ವತಂತ್ರಭಾರತದ ಕಗ್ಗಲ್ಲು ಕಂಭ, ಈಗಿಲ್ಲದ ಸರ್ದಾರ್ ಪಟೇಲ್—ಎಲ್ಲರೂ ಸೇರಿದ್ದರು. ಈ ಪಟ್ಟಿ ಎಂತಹವರಿದ್ದರೆಂಬುದನ್ನು ತೋರಿಸುವುದಕ್ಕೆ ಮಾತ್ರ.

"ಮನುಷ್ಯರ ಮನಸ್ಸು, ವಿಶ್ವಾಸಗಳ ಮೇಲೆ ಆತನ ಹಿಡಿತದ ಗುಟ್ಟೇನು? ಆತನ ತೀಕ್ಷ್ಣ ಬಹುಮುಖವಾಸ್ತವಿಕತೆಯ ಅರಿವು; ಆತನ ಸಹಾನುಭೂತಿ, ಸಮಯೋಚಿತ ನಡತೆ; ವೈಯಕ್ತಿಕ ಆಕರ್ಷಣೆ. ಆತನ ಬುದ್ಧಿ, ಧೈರ್ಯಗಳು ಉದ್ಯಮಿಗಳನ್ನು ಆಕರ್ಷಿಸುತ್ತಿದ್ದುವು. ತಾನಾಗ ಬೇಕೆಂದಿದ್ದ ಕ್ರಾಂತಿಕಾರ ಗಾಂಧಿಯೆಂಬುದು ತಿಳಿಯುತ್ತಲೇ ಆಚಾರ್ಯ ಕೃಪಲಾನಿ ಆತನ ದಾಸಾನುದಾಸನಾದನು. ಆತನ ಜೀವನದ ಸೊಗಸು, ಪ್ರಗತಿ ಜವಹರಲಾಲನಂತಹ ಸಂಸ್ಕೃತನನ್ನು ಸೆರೆಹಿಡಿಯಿತು. ಬಿಸಿಯಾಗಿ ವಾದನಡೆಯುತ್ತಿರುವಾಗ ಒಂದು ಬಾರಿ ನೆಹ್ರೂ ತಾಳ್ಮೆಗೆಟ್ಟು, "ನನಗೆ ಬೇಕಾದುದು ಕ್ರಾಂತಿ. ಇದು ಸುಧಾರಣೆ," ಎಂದನು. ಗಾಂಧೀಜಿ, "ಬೇರೆಯವರು ಆ ವಿಚಾರವಾಗಿ ಮಾತನಾಡುತ್ತಿರುವಾಗ ನಾನು ಕ್ರಾಂತಿಯನ್ನು ಮಾಡಿದ್ದೇನೆ, ನಿನ್ನ ಉರುಬು ಕಡಮೆಯಾಗಿ ಉಸಿರು ತಗ್ಗಿ

ದಾಗ ಕ್ರಾಂತಿಕಾರನಾಗಬೇಕೆಂಬ ಬಯಕೆ ನಿನಗೆ ನಿಜವಾಗಿ ಇದ್ದರೆ, ನನ್ನಲ್ಲಿಗೆ ಬರುತ್ತೀ, ” ಎಂದನು.

ಜವಹರಲಾಲ್‌ರ ತಂದೆ ಮೋತಿಲಾಲರಿಗೂ ಗಾಂಧಿಯೊಡನೆ ವಾಗ್ವಾದ ನಡೆಯುತ್ತಿತ್ತು. ಒಂದು ಬಾರಿ ಪ್ಯಾರಿಲಾಲರೊಡನೆ, “ ನನಗೆ ಆತನ ಆಧ್ಯಾತ್ಮಿಕತೆಯಲ್ಲಿ ನಂಬಿಕೆಯಿಲ್ಲವೆಂದು ಮಹಾತ್ಮಾಜಿಗೆ ಹೇಳಿದೆ. ಈ ಜನ್ಮದಲ್ಲಂತೂ ದೇವರನ್ನು ಸಂಬುವುದಿಲ್ಲವೆಂದೆ,” ಎಂದು ಹೇಳಿದರು.

ಪ್ಯಾರಿಲಾಲ್ “ಆತನೇನು ಉತ್ತರಕೊಟ್ಟನು?”

ಮೋತಿಲಾಲ್, “ಸುಮ್ಮನೆ ನಕ್ಕುಬಿಟ್ಟರು. ”

ಮುಸ್ಲಿಂ ವಿದ್ವಾಂಸ ಮೌಲಾನ ಆಜಾದ್ ಆತನಲ್ಲಿ ದೈವ ಭಕ್ತಿಯನ್ನೂ, ವಿಶಾಲ ಮನೋಭಾವನೆಯನ್ನೂ ಕಂಡನು. ವಿನೋಬ ಆತನನ್ನು ಪುರಾತನ ಇಂಡಿಯಾದ ಋಷಿಯೆಂದು ಭಾವಿಸಿದನು. ಯಾವ ವಕೀಲನಲ್ಲಿಯೂ ಕಾಣದ ತೀಕ್ಷ್ಣ ಬುದ್ಧಿ, ಎದುರಾಳಿಯ ವಾದವನ್ನು ಅರ್ಥಮಾಡಿಕೊಳ್ಳುವ ಶಕ್ತಿಯನ್ನು ರಾಜಗೋಪಾಲಾಚಾರಿ ಆತನಲ್ಲಿ ಕಂಡರು. ಆತನಿಗೆ ಆರೋಗ್ಯದಲ್ಲಿದ್ದ ಕುತೂಹಲವನ್ನು ವೈದ್ಯರು ಮೆಚ್ಚಿದರು. ಆತನು ಕಾರ್ಯನಿರತನಾಗಿರುವ ಕವಿಯೆಂದು ಸರೋಜಿನಿನಾಯುಡು ಭಾವಿಸಿದಳು. ಧನಪೂಜಕರಾದ ಪಾಶ್ಚಾತ್ಯರ ಹಸಿದ ಆತ್ಮಕ್ಕೆ ಬೇಕಾದ ಗಭೀರ ಪಾರಮಾರ್ಥಿಕ ತತ್ವವನ್ನು, ಬ್ರಿಟಿಷ್ ನೌಕಾಧಿಕಾರಿಯ ಮಗಳಾದ ಮೇಡಿಲೈನ್‌ಸ್ಲೇಡ್ ಆತನಿಂದ ಪಡೆದಳು. ಕಾಂಗ್ರೆಸ್ ಪಕ್ಷದ ನಾಯಕ ವಲ್ಲಭಾಯ್ ಪಟೇಲ್, ಗಾಂಧೀಜಿ ಬರಿಯ ಮಾತುಗಾರನಲ್ಲವೆಂದೂ, ಕಾರ್ಯತಃ ಆಡಿದ ಮಾತನ್ನು ನಡೆಸುವ ನಾಯಕನೆಂಬುದನ್ನೂ ಕಂಡುಕೊಂಡನು.

ಇವುಗಳೆಲ್ಲಾ ಆತನಲ್ಲಿ ವಿಶೇಷ ವಿಶ್ವಾಸವಿದ್ದ ಶಿಷ್ಯನ ಮಾತುಗಳಾಗಿರಬಹುದು. ಆದರೆ ಗಾಂಧಿ ಈ ಮಹಾ ವ್ಯಕ್ತಿಗಳನ್ನು ಆಕರ್ಷಿಸಿದನೆಂಬುದೇನೋ ಸತ್ಯ. “ಗಾಂಧೀಜಿ ಯಾರಿಗೂ ಅವರ ಹಿತಾರ್ಥವಲ್ಲದ ಕೆಲಸ ಹೇಳುತ್ತಿರಲಿಲ್ಲವಾದುದರಿಂದ ಆತನಿಗೆ ಅವರ ಮೇಲೆ ಶಕ್ತಿಯಿತ್ತು” ಎಂದು ಪ್ಯಾರಿಲಾಲ್ ವಿವರಿಸುತ್ತಾನೆ. ಜನರಲ್ಲಿದ್ದ ಒಳ್ಳೆಯ ತನಕ್ಕೆ ಉತ್ತೇಜನ ಕೊಟ್ಟು, ಅವರ ನಿಲುವು ದಿನೇ ದಿನೇ ವೃದ್ಧಿಹೊಂದುವಂತೆ

ಮಾಡಿದನು. ವಾದ ಮಾಡುವಾಗ ಎದುರಾಳಿಯ ಬಾಯಿ ಬಡಿಯುವ ಪ್ರಯತ್ನಕ್ಕೆ ಆತನು ಹೋಗುತ್ತಿರಲಿಲ್ಲ. ಎದುರಾಳಿಯೂ ತನ್ನಂತೆ ಸತ್ಯಾನ್ವೇಷಿಯಾಗುವಂತೆ ಮಾಡುತ್ತಿದ್ದನು. ಆತನ ಗುರಿ ಪರಿವರ್ತನೆಯೇ ಹೊರತು ಬಲವಂತದಿಂದ ಬಾಯಿ ಮುಚ್ಚಿಸುವುದಲ್ಲ. ಎದುರಾಳಿಗೆ ಸೋತೆನೆಂಬ ಅಪಮಾನವಿರುತ್ತಿರಲಿಲ್ಲ. ಸತ್ಯದ ಅರಿವಿನ ಆನಂದದಲ್ಲಿ ಅದು ಗಾಂಧೀಜಿಗೆಷ್ಟು ಮಟ್ಟಿಗೆ ಸೇರಿದುದೋ, ತನಗೂ ಅಷ್ಟೇ ಮಟ್ಟಿಗೆ ಸೇರಿದೆಯೆಂಬ ಭಾವನೆಯುಂಟಾಗುತ್ತಿತ್ತು. ಇದರಿಂದ ಎದುರಾಳಿಯ ಮನಸ್ಸು ಭಾವನೆಯನ್ನು ಸ್ವೀಕರಿಸಲು ಅನುವಾಗುತ್ತಿತ್ತು. ಇದರಿಂದಲೇ ಗಾಂಧಿ, “ನಾನು ಹುಟ್ಟಿನಿಂದ ಪ್ರಜಾರಾಜ್ಯವಾದಿ”, ಎಂದು ಹೆಮ್ಮೆಯಿಂದ ಹೇಳುತ್ತಿದ್ದನು.

ಮಹಾತ್ಮಾ ಗಾಂಧಿಗೆ ಮಾನವರಲ್ಲಿದ್ದ ಪ್ರೀತಿ, ಭಾವನಾತ್ಮಕ ವಾದುದಲ್ಲ; ಆತನಿಗೆ ಗಂಡಸರು, ಹೆಂಗಸರು, ಮಕ್ಕಳಲ್ಲಿ ಪ್ರೀತಿಯಿದ್ದು ಸಹಾಯಮಾಡುವ ಆಸೆಯಿತ್ತು. ಆತನು ಅವರಿಗೆ ಸೇರಿದ್ದನು; ಅದು ಅವರಿಗೂ ತಿಳಿದಿತ್ತು. ಆದುದರಿಂದ ಅವರೂ ಆತನಿಗೆ ಸೇರಿದ್ದರು. ದ್ರೋಹಿಗಳಿಗೆ ಆಸರೆಕೊಟ್ಟು ಅವರ ಸಂದೇಹಗಳನ್ನು ಪರಿಹರಿಸುತ್ತಿದ್ದನು. ಆತನ ಶ್ರದ್ಧೆ, ಅವರ ಶ್ರದ್ಧೆಯನ್ನು ಹುಟ್ಟಿಸುತ್ತಿತ್ತು. ಹೀಗೆ ೧೯೨೪ ರಿಂದ ೧೯೨೯ ರವರೆಗೆ, ಸೋಲು, ನಿರುತ್ಸಾಹದ ಕಷ್ಟದಿನಗಳನ್ನು ಆತನು ಮುಂದಿನ ವಿಜಯಕ್ಕಾಗಿ ಉಪಯೋಗಿಸಿಕೊಂಡನು. ಈಗ ಇಂಡಿಯಾ ಆತನನ್ನು, “ಬಾಪು”, “ತಂದೆ”, ಎಂದು ಕರೆಯುತ್ತಿತ್ತು.

## ೧೬. ಸ್ವಾತಂತ್ರ್ಯದ ಉಪ್ಪು

೧೯೨೮ರಲ್ಲಿ ಇಂಡಿಯಾ ಕಾರ್ಮಿಕ ಮತ್ತು ದೇಶೀಯ ಗಲಭೆಗಳಿಂದ ಕುದಿಯುತ್ತಿತ್ತು. ಲಾಹೋರಿನ ಅಸಿಸ್ಟೆಂಟ್ ಪೋಲೀಸ್ ಸೂಪರಿಂಟೆಂಡೆಂಟ್ ಸಾಂಡರ್ಸ್ ಕೊಲೆ ಮಾಡಲ್ಪಟ್ಟನು. ಗಾಂಧಿ ಅದನ್ನು, “ಅಮಾನುಷ ಕೃತ್ಯ”ವೆಂದು ಕರೆದನು. ಕೊಲೆಗಾರನೆನ್ನಿಸಿಕೊಂಡ ಭಗತ್‌ಸಿಂಗ್ ದಸ್ತಗಿರಿಯಾಗದೆ ತಪ್ಪಿಸಿಕೊಂಡ ವೀರನೆನ್ನಿಸಿಕೊಂಡನು. ೧೯೨೯ರ ಏಪ್ರಿಲ್ ೮ರಲ್ಲಿ ಅವನು ನವದೆಹಲಿಯ ನ್ಯಾಯ ವಿಧಾಯಕ ಸಭೆಗೆ ಹೋಗಿ ಅಲ್ಲಿ ಕುಳಿತಿದ್ದ ಬ್ರಿಟಿಷ್ ಮತ್ತು ಇಂಡಿಯನ್ ಸದಸ್ಯರ ನಡುವೆ

ಎರಡು ಬಾಂಬುಗಳನ್ನೆಸೆದು, ಪಿಸ್ತೂಲಿನಿಂದ ಹೊಡೆಯಲಾರಂಭಿಸಿದನು. ಒಬ್ಬ ಸದಸ್ಯನಿಗೆ ಮಾತ್ರ ಘಾಯವಾಯಿತು.

ಬ್ರಿಟಿಷರಿಗೂ, ಕಾಂಗ್ರೆಸ್ಸಿಗೂ ವಿರೋಧವಾಗಿ ಯಾವಾಗಲೂ ಗಲಭೆಗಳಾಗುತ್ತಿದ್ದ ಬಂಗಾಳ ಪ್ರಾಂತ್ಯದಲ್ಲಿ "ರಕ್ತಚೆಲ್ಲಿ, ಸ್ವಾತಂತ್ರ್ಯ ಗಳಿಸಿ," ಎಂಬ ಸೂತ್ರವನ್ನು ಹಿಡಿದು ಸುಭಾಷಚಂದ್ರಬೋಸ್ ಎಂಬ ಕ್ರಾಂತಿಕಾರ ಯುವಕ, ದೊಡ್ಡ ಹಿಂಬಾಲಕರ ತಂಡವನ್ನು ಕೂಡಿಸಿದ್ದನು. ಜವಹರಲಾಲರ, "ತಕ್ಷಣ ಸ್ವಾತಂತ್ರ್ಯ," ಎಂಬ ಕೂಗು ಯುವಕರಿಗೆ ಪ್ರಿಯವಾಗಿತ್ತು.

ಸಿದ್ಧವಾಗಿದ್ದ ಯುದ್ಧ ವಾತಾವರಣದಲ್ಲಿ ಗಾಂಧಿ ಎಚ್ಚರಿಕೆಯಿಂದ ಹೆಜ್ಜೆಹಾಕಿದನು. ಆ ಯುದ್ಧದಲ್ಲಿ ಆತನ ಪಕ್ಷ ಒಂದು ವಿಶೇಷ ಶಸ್ತ್ರವನ್ನುಪಯೋಗಿಸಬೇಕಾಗಿತ್ತು. ಶಾಂತ ಅಸಹಕಾರ. ಅದು ಯಾವ ಸರ್ಕಾರಿ ಆಯುಧ ಶಾಲೆಯಲ್ಲೂ ತಯಾರಾಗುತ್ತಿರಲಿಲ್ಲ. ಬೇರೆ ದಂಗೆಕಾರರಂತೆ ಶತ್ರುವಿನಿಂದ ಗಾಂಧಿ ಶಸ್ತ್ರಗಳನ್ನು ಪಡೆಯಲಿಲ್ಲ.

೧೯೨೮ರ ಡಿಸೆಂಬರಿನಲ್ಲಿ ಕಲ್ಕತ್ತದ ಕಾಂಗ್ರೆಸ್ ಅಧಿವೇಶನಕ್ಕೆ ಹೋಗುತ್ತಾ ನಾಗಪುರದಲ್ಲಿ ರೈಲುನಿಂತಾಗ ಸ್ನೇಹಿತರು ಗಾಂಧಿಯನ್ನು, "ಸ್ವಾತಂತ್ರ್ಯಕ್ಕಾಗಿ ಯುದ್ಧಪ್ರಾರಂಭವಾದರೆ ಅದರ ವಿಚಾರವಾಗಿ ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದರು. "ನಾನು ಅದರಲ್ಲಿ ಭಾಗ ವಹಿಸುವುದಿಲ್ಲ. ನಾನು ಜನರಿಗೆ ರಾಜಕೀಯ ಬಿಕ್ಕಟ್ಟನ್ನು ಅಹಿಂಸಾ ಮಾರ್ಗದಲ್ಲಿ ಎದುರಿಸುವುದನ್ನು ಕಲಿಸುತ್ತಿದ್ದೇನೆ," ಎಂದು ಆತನು ಉತ್ತರವಿತ್ತನು.

ಆದರೆ ಅಧಿವೇಶನದಲ್ಲಿ ಬೋಸ್ ಮತ್ತು ನೆಹರೂ ನಾಯಕತ್ವದಲ್ಲಿ ಯುವಕರು ಯುದ್ಧವನ್ನು ಬಯಸಿದರು. ಸ್ವಾತಂತ್ರ್ಯಘೋಷಣೆ ಮಾಡಿ, ಸ್ವಾತಂತ್ರ್ಯ ಸಮರವನ್ನು ಪ್ರಾರಂಭಿಸಬೇಕೆಂದು ಆಶಿಸಿದರು. ಗಾಂಧಿ ಬ್ರಿಟಿಷರಿಗೆ ಎರಡು ವರ್ಷದ ಅವಧಿಕೊಟ್ಟು ಎಚ್ಚರಿಕೆ ಕೊಡಬೇಕೆಂದರು. ಬಲವಂತದ ಮೇಲೆ ಅವಧಿಯನ್ನು ಒಂದು ವರ್ಷಕ್ಕಿಳಿಸಿದನು. ೧೯೨೯ರ ಡಿಸೆಂಬರ್ ೩೧ ರ ವೇಳೆಗೆ ಚಕ್ರಾಧಿಪತ್ಯದಲ್ಲಿ ಸಮಾನತೆಕೊಟ್ಟು, ಸ್ವಾತಂತ್ರ್ಯ ದೊರಕದಿದ್ದರೆ, "ನಾನು ಸ್ವಾತಂತ್ರ್ಯ ಚಳುವಳಿಗೆ ಸೇರು-

ತ್ತೇನೆ. ಹಿಂದೆ ಹೆಜ್ಜೆಯಿಡಲು ಅವಕಾಶವಿಲ್ಲ," ಎಂದು ಗಾಂಧಿ ಹೇಳಿದನು. ೧೯೩೦ರ ವೇಳೆಗೆ ಇತ್ಯರ್ಥವಾಗಬೇಕು.

ಮುಂದೆ ಲಾರ್ಡ್ ಹಾಲಿಫಾಕ್ಸ್ ಎನ್ನಿಸಿಕೊಂಡ ಲಾರ್ಡ್ ಇರ್ವಿನ್, "೧೯೨೯ರ ಮೊದಲು ನಾಲ್ಕುಮಾಸಗಳು ರಾಜಕೀಯ ಮತ್ತು ವಾಣಿಜ್ಯಗಲಭೆಗಳಿಗೆ ಆಡಳಿತ ಪರಿಹಾರಗಳನ್ನು ಹುಡುಕುವುದರಲ್ಲಿ ಮಗ್ನನಾಗಿದ್ದನು," ಎಂದು ಆತನ ಚರಿತ್ರಕಾರ ಅಲನ್ ಕ್ಯಾಂಬೆಲ್ ಜಾನ್ಸನ್ ಬರೆಯುತ್ತಾನೆ. ಕಾರ್ಮಿಕರು ಮತ್ತು ಅವರ ಸಂಘದ ನಾಯಕರೆಷ್ಟೋ ಜನರನ್ನು ದಸ್ತಗಿರಿಮಾಡಿದರು. ಆದರೆ ಪರಿಹಾರ ರಾಜಕೀಯ ತಜ್ಞತೆಯಿಂದ ಬರಬೇಕಾಗಿತ್ತು. ಇಂಡಿಯಾದೇಶ ಸ್ವಾತಂತ್ರ್ಯ ಪಡೆಯಬೇಕೆಂದು ವಾದಿಸುತ್ತಿದ್ದ ಕಾರ್ಮಿಕ ಮುಖಂಡ ರ್‍ಯಾಮ್ಸೆ ಮ್ಯಾಕ್ಡೊನಾಲ್ಡ್ ಇಂಗ್ಲೆಂಡಿನ ಮುಖ್ಯ ಮಂತ್ರಿಯಾದಾಗ ಆಶಾಕಿರಣ ತಲೆದೋರಿತು. ಗಾಂಧಿಗೆ ಉತ್ಸಾಹವುಂಟಾಯಿತು. ೧೯೨೯ರ ಮೇ ೯ರ ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಸ್ವಾತಂತ್ರ್ಯ ಅಹಿಂಸಾತ್ಮಕವಾಗಿ ಬ್ರಿಟನ್ನಿನೊಡನೆ ಸಭ್ಯ ಒಪ್ಪಂದದಿಂದ ಲಭಿಸುವುದೆಂದು ಬರೆದನು. "ಆದರೆ ಹಾಗೆ ಕೊಡುವ ಬ್ರಿಟನ್ನು ಚಕ್ರಾಧಿಪತ್ಯದ ಮತ್ತತೆಯಿಂದಿರುವುದಿಲ್ಲ. ಮಾನವ ಸೇವೆಯಲ್ಲಿ ನಮ್ರತೆಯಿಂದ ನಿರತವಾಗಿರುತ್ತೆ," ಎಂದು ಎಚ್ಚರಿಸಿದನು. ಬೇಸಗೆಯಲ್ಲಿ ಲಾರ್ಡ್ ಇರ್ವಿನ್ ಲಂಡನ್ನಿಗೆ ಹೋಗಿ, ಹೊಸ ಸರ್ಕಾರದೊಡನೆ ಸಮಾಲೋಚನೆ ನಡೆಸಿ, ೧೯೨೯ರ ಅಕ್ಟೋಬರ್ ೩೧ ರಲ್ಲಿ ದೆಹಲಿಗೆ ಹಿಂದಿರುಗಿ ಬ್ರಿಟಿಷ್ ಮತ್ತು ಇಂಡಿಯಾ ಸದಸ್ಯರನ್ನೊಳಗೊಂಡ ಗುಂಡು ಮೇಜಿನ ಸಮಾಲೋಚನೆ ನಡೆಯುವುದೆಂದು ಹೇಳಿದನು. ಇಂಡಿಯಾ ದೇಶದ ರಾಜಕೀಯಗುರಿ ಚಕ್ರಾಧಿಪತ್ಯದಲ್ಲಿ ಸಮಾನತೆ ಪಡೆಯುವುದೆಂದು ಹೇಳಿದನು.

ಗಾಂಧಿ ಮುಂತಾದ ನುರಿತ ನಾಯಕರಿಗೆ ಈ ಏರ್ಪಾಟು ಸರಿಯಾಗಿ ತೋರಿತು. ಜವಹರ್‌ಲಾಲ್ ಮತ್ತು ಬೋಸರು ಆಕ್ಷೇಪಿಸಿದರೂ ಹಿಂಜರಿಯದೆ ಒಪ್ಪಂದದ ಸಿದ್ಧತೆಮಾಡತೊಡಗಿದರು. ಡಿಸೆಂಬರ್ ೨೩ರಲ್ಲಿ ಲಾರ್ಡ್ ಇರ್ವಿನ್ನರೊಡನೆ ಸಮಾಗಮವೇರ್ಪಟ್ಟಿತು. ಲಂಡನ್ನಿನಲ್ಲಿ ಮೊದಲು ವೈಸರಾಯಿಯಾಗಿದ್ದ ಲಾರ್ಡ್ ರೀಡಿಂಗ್‌ರ ನಾಯಕತ್ವದಲ್ಲಿ

ಸಂಪ್ರದಾಯ ಪಕ್ಷದವರು, ಉದಾರ ಪಕ್ಷದವರು ಜತೆಗೂಡಿ ಪಾರ್ಲಿಮೆಂಟಿನಲ್ಲಿ ಕಾರ್ಮಿಕಪಕ್ಷದವರನ್ನೆದುರಿಸಿ ಲಾರ್ಡ್ ಇರ್ವಿನ್ ಇಂಡಿಯಾಕ್ಕೆ ಸಮಾನತೆ ಕೊಡುವುದಾಗಿ ಮೊದಲೇ ಹೇಳಿದುದು ತಪ್ಪೆಂದು ಆಪಾದಿಸಿದರು. ಆದುದರಿಂದ ಗಾಂಧಿ, ಜಿನ್ನಾ, ಮೋತೀಲಾಲ್, ವಿಠಲ್‌ಭಾಯ್ ಪಟೇಲ್, ತೇಜ್‌ಬಹದ್ದೂರ್ ಸಪ್ರೂರವರೊಡನೆ ನಡೆದ ಸಮಾವೇಶದಲ್ಲಿ ವೈಸರಾಯ್, "ತಾನು ಗುಂಡುಮೇಜಿನ ಸಮಾವೇಶದಲ್ಲಿ ಏನು ನಡೆಯುವುದೆಂದು ಹೇಳಲು ಸಾಧ್ಯವಿಲ್ಲ," ವೆಂದು ಹೇಳಿದನು.

ಡಿಸೆಂಬರ್ ೧೯೨೯ ರಲ್ಲಿ ಲಾಹೋರಿನಲ್ಲಿ ೪೦ ವರ್ಷದ ಜವಹರ್ ಲಾಲರ ಅಧ್ಯಕ್ಷತೆಯಲ್ಲಿ ನಡೆದ ಪ್ರಸಿದ್ಧ ಕಾಂಗ್ರೆಸ್ ಅಧಿವೇಶನವನ್ನು ಈ ಪ್ರಸ್ತಾಪ ಕಲಕಿತು. ಗಾಂಧಿಯ ನಾಯಕತ್ವದಲ್ಲಿ ಸ್ವಾತಂತ್ರ್ಯದ ಧ್ವಜವನ್ನೆತ್ತಿ ಪೂರ್ಣ ಸ್ವಾತಂತ್ರ್ಯ ಪಡೆಯಬೇಕೆಂದೂ, ಚಕ್ರಾಧಿಪತ್ಯದಿಂದ ಪ್ರತ್ಯೇಕವಾಗಬೇಕೆಂದೂ ಅಧಿವೇಶನ ನಿರ್ಣಯಿಸಿತು. ಗಾಂಧಿ, "ಸ್ವರಾಜ್ಯವೆಂದರೆ ಸಂಪೂರ್ಣ ಸ್ವಾತಂತ್ರ್ಯವೆಂದರ್ಥ" ಎಂದರು. ಕಾಂಗ್ರೆಸ್ಸಿನ ಮಿತ್ರರು, ಸದಸ್ಯರು, ಸರ್ಕಾರಿ ನೌಕರಿಗಳನ್ನು ತ್ಯಜಿಸಬೇಕೆಂದೂ, ಅಸಹಕಾರ, ಕಂದಾಯ ನಿರಾಕರಣೆ ಮಾಡಬೇಕೆಂದೂ, ನಿರ್ಣಯಿಸಲ್ಪಟ್ಟಿತು. ಸತ್ಯಾಗ್ರಹ ಪ್ರಾರಂಭವಾಗುವ ದಿನವನ್ನು ಕಾಂಗ್ರೆಸ್ ಕಾರ್ಯನಿರ್ವಾಹಕ ಸಮಿತಿ ನಿರ್ಧರಿಸಬೇಕೆಂದು ಗೊತ್ತಾಯಿತು. ಆದರೆ ಗಾಂಧಿಗೆ ಆ ಕರ್ತವ್ಯದ ಭಾರ ತನ್ನ ಮೇಲೆಯೇ ಬಿದ್ದಿತ್ತೆಂದು ತಿಳಿದಿತ್ತು. ಆತನು ಅಸಹಕಾರದ ಹೃದಯ, ಮೆದುಳು, ಕೈಯಾಗಿ ಕೆಲಸ ಮಾಡಬೇಕಾಗಿತ್ತು. ಆದುದರಿಂದ ಆತನೇ ಅದರ ಸ್ಥಳ ಸಮಯಗಳನ್ನು ಆರಿಸಬೇಕಾಗಿತ್ತು. ಆಲೋಚಿಸಲು ಆಶ್ರಮವನ್ನು ಸೇರಿದನು. ದೇಶವೆಲ್ಲಾ ಕಳವಳಗೊಂಡಿತ್ತು. ಗಾಂಧಿಯಲ್ಲಿ ಗೌರವ ಪಡೆದಿದ್ದ ರಬೀಂದ್ರನಾಥ ಠಾಕೂರರು ಸಬರ್ಮತಿ ಆಶ್ರಮದ ಬಳಿ ಇದ್ದರು. ಜನವರಿ ೧೮ ನೆಯ ದಿನ ಅಲ್ಲಿಗೆ ಬಂದರು. ಕುತೂಹಲದಿಂದ ಮಹಾತ್ಮರು ೧೯೩೦ ರಲ್ಲಿ ಇಂಡಿಯಾಕ್ಕೆ ಕೊಡಲು ಏನನ್ನಿಟ್ಟುಕೊಂಡಿದ್ದರೆಂದು ಕೇಳಿದರು. "ನಾನು ಹಗಲು ರಾತ್ರಿ ಒಂದೇ ಸಮನಾಗಿ ಆಲೋಚಿಸುತ್ತಿದ್ದೇನೆ. ಆದರೆ ಸುತ್ತುವರಿದಿರುವ ಅಂಧಕಾರದಲ್ಲಿ ಯಾವ ಬೆಳಕೂ ಕಾಣುತ್ತಿಲ್ಲ", ಎಂದು ಗಾಂಧಿ ಉತ್ತರ ಕೊಟ್ಟರು.

ವಾತಾವರಣದಲ್ಲಿ ಹಿಂಸಾಭಾವ ತುಂಬಿದೆ. ಹೀಗಿರುವಾಗ ಶಸ್ತ್ರ ಸಜ್ಜಿತ ದಂಗೆಗೆ ಬದಲಾಗಿ ಉಪಯೋಗಿಸಬಹುದಾದ ಅಸಹಕಾರದಲ್ಲಿ ತುಂಬಾ ತೊಂದರೆಗಳಿವೆ. ಆದುದರಿಂದ ದೇಶವೆಲ್ಲಾ ಹಿಂಸಾಜ್ವಾಲೆಗೆ ಆಹುತಿಯಾಗದಂತಹ ರಾಜಕೀಯ ಅಸಹಕಾರಕ್ಕಾಗಿ ಹುಡುಕುತ್ತಿದ್ದೇನೆ” ಎಂದು ಗಾಂಧಿ ವಿವರಿಸಿದರು. ದೇಶ ಅಸಹನೆಯಿಂದ ಕಾಯುತ್ತಿರಲು ಆರು ವಾರಗಳ ಕಾಲ ಆತನು ಧ್ಯಾನದಲ್ಲಿದ್ದನು. ಸಮಗ್ರ ಭಾರತದ ಕಣ್ಣು ಗಾಂಧಿಯ ಗುಡಿಸಿಲಿನ ಮೇಲಿತ್ತು.

ಕಡೆಗೆ ಆತನಿಗೆ ದಾರಿ ಸ್ಪಷ್ಟವಾಯಿತು.

ಕಾರ್ಯಕ್ರಮ ಪ್ರಾರಂಭಿಸುವ ಮೊದಲು ಅದನ್ನು ವೈಸರಾಯರಿಗೆ ತಿಳಿಸಿದನು. ರಹಸ್ಯ, ಪ್ರಜಾಪ್ರಭುತ್ವದ ನಿಜವಾದ ಭಾವನೆಗೆ ಅಡ್ಡಿಯೆಂದು ಆತನ ಮತ. ಇರ್ವಿನ್‌ಗೆ ಬಂದಂತಹ ಕಾಗದ ಸರ್ಕಾರದ ಉನ್ನತಾಧಿಕಾರಿಗೆ ಪ್ರಾಯಶಃ ಯಾವಾಗಲೂ ಬಂದಿರಲಾರದು. “ಪ್ರಿಯ ಸ್ನೇಹಿತನೇ, ಅಸಹಕಾರ ಪ್ರಾರಂಭಿಸುವ ಮೊದಲು, ಇಷ್ಟುದಿನವೂ ಹೆದರಿಕೆಯಿಂದ ಹಿಂಜರಿದು ಮಾಡಿದ್ದ ಕೆಲಸವನ್ನಾರಂಭಿಸುವ ಮೊದಲು ನಿಮ್ಮೊಡನೆ ಮಾತನಾಡಿ, ದಾರಿಕಾಣಲು ಬಯಸುತ್ತೇನೆ.” ಎದುರಾಳಿಗೆ ಅವಕಾಶ ನೀಡಬಹುದಾದ ಒಪ್ಪಂದದಲ್ಲಿ ಆತನಿಗೆ ವಿಶ್ವಾಸವಿತ್ತು. “ಬದುಕಿರುವ ಯಾವ ಜಂತುವನ್ನೂ, ಅದರಲ್ಲೂ ಮಾನವರನ್ನು, ಅವರು ನನಗೂ ನನ್ನವರಿಗೂ ತೊಂದರೆ ಮಾಡಿದರೂ ಕೂಡ, ನಾನು ಹಿಂಸಿಸಲಾರೆ. ಆದುದರಿಂದ ಬ್ರಿಟಿಷ್ ಆಡಳಿತದಿಂದ ನಮಗೆ ಕೆಡುಕುಂಟಾಗಿದೆಯೆಂದು ನಾನು ಭಾವಿಸಿದರೂ, ಯಾವ ಬ್ರಿಟಿಷನಿಗಾಗಲಿ ಆತನಿಗೆ ಭಾರತದಲ್ಲಿ ನ್ಯಾಯವಾಗಿ ಸಲ್ಲಬೇಕಾದ ಪುರಸ್ಕಾರಕ್ಕಾಗಲಿ ನಾನು ಕೆಡುಕು ಕೋರುವುದಿಲ್ಲ. ಬ್ರಿಟಿಷ್ ಆಧಿಪತ್ಯ ಕೆಟ್ಟದೆಂದು ನಾನೇಕೆ ಭಾವಿಸುತ್ತೇನೆ ? ಅದು ಬಾಯಿಲ್ಲದ ಲಕ್ಷಾಂತರ ಜನರ ಸಂಪತ್ತನ್ನು ಹೀರಿ ಬಡತನಕ್ಕೆ ಗುರಿಮಾಡಿದೆ. ಸೈನಿಕ ಮತ್ತು ರಾಜಕೀಯ ಆಡಳಿತಕ್ಕಾಗಿ ದೇಶ ಭಕ್ತಿಮೀರಿ, ಹಣತೆತ್ತು ಬಡವಾಗಿದೆ. ರಾಜಕೀಯದಲ್ಲಿ ನಾವು ದಾಸ್ಯವನ್ನನುಭವಿಸಬೇಕಾಗಿದೆ. ನಮ್ಮ ಸಂಸ್ಕೃತಿಯ ಬುಡವನ್ನೇ ಅದು ಕದಲಿಸಿದೆ. ಇಂಡಿಯಾ ದೇಶಕ್ಕೆ ಶೀಘ್ರದಲ್ಲಿ ಸಮಾನ ಸ್ಥಾನಕೊಡುವ ಅಭಿಪ್ರಾಯವೇ ಇಲ್ಲವೆಂದು

ನನಗೆ ಹೆದರಿಕೆ".

ಅನಂತರ ನಿರ್ದಿಷ್ಟ ವಿಚಾರಗಳ ಕಡೆ ಗಾಂಧಿ ಗಮನಕೊಟ್ಟನು. "ಸ್ವತಂತ್ರ ಹಿಂದೂಸ್ಥಾನದಲ್ಲಿ ರೈತನ ಅನುಕೂಲ ನೋಡಿಕೊಂಡು ಕಂದಾಯ ಪದ್ಧತಿಯನ್ನೆಲ್ಲಾ ಸುಧಾರಣೆ ಮಾಡಬೇಕು. ಆದರೆ ಬ್ರಿಟಿಷ್ ಪದ್ಧತಿ ಅವನ ಜೀವವನ್ನೇ ತಿನ್ನುತ್ತಿದೆ. ಬದುಕಲು ಆವಶ್ಯಕವಾದ ಉಪ್ಪಿಗೂ ತೆರಿಗೆ ಕೊಡಬೇಕಾಗಿ ರೈತನ ಮೇಲೆಯೇ ಹೆಚ್ಚುಭಾರ ಬಿದ್ದಿದೆ. ಧನಿಕನಿಗಿಂತ ಹೆಚ್ಚಾಗಿ ಬಡವನು ಉಪ್ಪು ತಿನ್ನಬೇಕಾಗಿರುವುದರಿಂದ ಈ ತೆರಿಗೆ ಎಷ್ಟು ಭಾರವೆಂಬುದರ ಅರಿವಾಗುತ್ತದೆ. "ರೈತನ ಉಪ್ಪಿನ ತೆರಿಗೆ ವರ್ಷದಲ್ಲಿ ಮೂರು ದಿನದ ಆದಾಯಕ್ಕೆ ಸಮಾನವಾದುದೆಂದು ವಿವರಿಸಿದನು. ಇಂಡಿಯಾದ ಸುಡು ಬಿಸಿಲಿನಲ್ಲಿ ಹೊಲಗಳಲ್ಲಿ ಕೆಲಸ ಮಾಡುವ ರೈತ ಹೆಚ್ಚು ಬೆವರುವುದರಿಂದ, ಧನಿಕನಿಗಿಂತ ಹೆಚ್ಚಾಗಿ ಅವನಿಗೆ ಉಪ್ಪು ಆವಶ್ಯಕ. ಗಾಂಧಿ ಕಾಗದದಲ್ಲಿ, "ಮದ್ಯ, ಔಷಧಿಗಳ ತೆರಿಗೆಯೂ ಬಡವರಿಂದಲೇ ಬರುವುದು. ಅದು ಅವರ ಆರೋಗ್ಯಕ್ಕೂ, ನೈತಿಕ ಜೀವನಕ್ಕೂ ಕೆಡಕುಂಟುಮಾಡುತ್ತದೆ," ಎಂದು ಆಕ್ಷೇಪಿಸಿದನು.

"ಈ ಅಕಾರ್ಯಗಳೆಲ್ಲಾ ಅತಿ ದುಂದುಗಾರಿಕೆಯ ವಿದೇಶೀ ಆಡಳಿತದ ವೆಚ್ಚಕ್ಕಾಗಿ ನಡೆಯುತ್ತಿವೆ. ನಿಮ್ಮ ಸಂಬಳವನ್ನೇ ತೆಗೆದುಕೊಳ್ಳಿ. ತಿಂಗಳಿಗೆ ಅದು ರೂ. ೨೧,೦೦೦ ಕ್ಕೂ ಹೆಚ್ಚಾಗಿದೆ. ದಿನಕ್ಕೆ ೭೦೦ ರೂಗಳಿಗಿಂತ ಹೆಚ್ಚು ಪಡೆಯುತ್ತಿದ್ದೀರಿ. ಇಂಡಿಯಾದ ಸರಾಸರಿ ಆದಾಯ ದಿನಕ್ಕೆ ಎರಡಾಣೆಗಿಂತ ಕಡಮೆ. ಆದುದರಿಂದ ನಿಮಗೆ ಇಂಡಿಯಾದ ಸರಾಸರಿ ಆದಾಯಕ್ಕಿಂತ ೫ ಸಾವಿರದಷ್ಟು ಹೆಚ್ಚಾಗಿ ಬರುತ್ತಿದೆ. ಬ್ರಿಟಿಷ್ ಮುಖ್ಯ ಮಂತ್ರಿಗೆ ಬ್ರಿಟನ್ನಿನ ಸರಾಸರಿ ಆದಾಯದ ತೊಂಬತ್ತರಷ್ಟು ಮಾತ್ರ. ಈ ವಿಚಾರವಾಗಿ ಆಲೋಚಿಸಬೇಕೆಂದು ಕೈಮುಗಿದು ಬೇಡುತ್ತೇನೆ. ನಿಮಗೆ ಮುಂದಟ್ಟಾಗಲೆಂದು ವೈಯಕ್ತಿಕ ಉದಾಹರಣೆ ಕೊಡಬೇಕಾಯಿತು. ನಿಮ್ಮ ಮನಸ್ಸು ನೋಯಿಸಲು ನನಗೆ ವೈಯಕ್ತಿಕವಾಗಿ ನಿಮ್ಮಲ್ಲಿ ತುಂಬಾ ಗೌರವವಿದೆ. ನಿಮಗೆ ಆ ಸಂಬಳದ ಅಗತ್ಯವಿಲ್ಲವೆಂದು ನಾನು ಬಲ್ಲೆ. ಪ್ರಾಯಶಃ ನಿಮ್ಮ ಸಂಬಳವನ್ನೆಲ್ಲಾ ಧರ್ಮಕಾರ್ಯಗಳಿಗಾಗಿ ವಿನಿಯೋಗಿಸುತ್ತಿದ್ದೀರಿ. ಆದರೆ ಇಂತಹ ಏರ್ಪಾಟನ್ನೊಳ

ಗೊಂಡ ವ್ಯವಸ್ಥೆಯನ್ನು ನಾಶಪಡಿಸುವುದೇ ಉತ್ತಮ. ವೈಸರಾಯರ ವೇತನಕ್ಕೆ ಸಂಬಂಧಿಸಿದ ಮಾತು ಆಡಳಿತಕ್ಕೆಲ್ಲಾ ಅನ್ವಯಿಸುತ್ತದೆ."

"ವ್ಯವಸ್ಥಿತ ಅಹಿಂಸೆಯೊಂದೇ ಬ್ರಿಟಿಷ್ ಸರ್ಕಾರದ ವ್ಯವಸ್ಥಿತ ಹಿಂಸೆಯನ್ನು ತಡೆಗಟ್ಟಬಲ್ಲುದು. ಈ ಅಹಿಂಸೆ, ರಾಜಕೀಯ ಅಸಹಕಾರದ ಮೂಲಕ ಹೊರಸೂಸಲ್ಪಡುತ್ತದೆ. ಬ್ರಿಟಿಷ್ ಜನರನ್ನು ಅಹಿಂಸೆಯ ಮೂಲಕ ಪರಿವರ್ತನೆಗೊಳಿಸಿ, ಅವರ ತಪ್ಪಿನ ಅರಿವುಂಟುಮಾಡಬೇಕೆಂಬದೆ ನನ್ನ ಮಹತ್ವಾಕಾಂಕ್ಷೆ. ಈ ಕೆಡಕುಗಳನ್ನು ತಕ್ಷಣ ನಿವಾರಿಸಿ ಸಮಾನರ ಸಮಾಗಮಕ್ಕೆ ದಾರಿಮಾಡಬೇಕೆಂದು ನಿಮ್ಮನ್ನು ವಿನಯಪೂರ್ವಕವಾಗಿ ಬೇಡುತ್ತೇನೆ. ಆದರೆ ನಿಮ್ಮಿಂದ ಈ ಕೆಡಕನ್ನು ನಿವಾರಿಸಲು ಸಾಧ್ಯವಿಲ್ಲದಿದ್ದರೆ, ನನ್ನ ಕಾಗದದಿಂದ ನಿಮ್ಮ ಹೃದಯದ ಮೇಲೇನೂ ಪರಿಣಾಮವುಂಟಾಗದಿದ್ದರೆ, ಈ ತಿಂಗಳ ೧೧ ನೆಯ ದಿನ ನನ್ನೊಡನೆ ಬರಲಿಚ್ಛಿಸುವ ಆಶ್ರಮನಿವಾಸಿಗಳೊಡನೆ ಉಪ್ಪಿನ ಕಾನೂನುಗಳನ್ನು ಮುರಿಯಲು ನಾನು ಹೊರಡುತ್ತೇನೆ. ನೀವು ಬೇಕಾದರೆ ನನ್ನನ್ನು ದಸ್ತಗಿರಿ ಮಾಡಿ, ನನ್ನ ಇಷ್ಟಾರ್ಥ ನೆರವೇರದಂತೆ ಮಾಡಬಹುದು. ಆದರೆ ಶಿಸ್ತಿನಿಂದ ನನ್ನ ಕೆಲಸವನ್ನು ಮುಂದುವರಿಸಲು, ಹತ್ತಾರು ಸಾವಿರ ಜನ ಸಿದ್ಧವಾಗಿರುವರೆಂದು ನಾನು ನಂಬಿದ್ದೇನೆ."

ಲಾರ್ಡ್ ಇರ್ವಿನ್ ಉತ್ತರಕೊಡಲಿಲ್ಲ. ಆತನ ಕಾರ್ಯದರ್ಶಿ ಕಾಗದ ತಲುಪಿದ್ದಕ್ಕೆ, ಸಹಿಮಾಡಿ ಕಳುಹಿಸಿದನು. ಆತನು ಗಾಂಧಿಯನ್ನು ನೋಡಲೂ ಇಲ್ಲ; ಸೆರೆಹಿಡಿಯಲೂ ಇಲ್ಲ.

ಮಾರ್ಚ್ ೧೧ನೇ ತಾರೀಖು ಸಮೀಪಿಸಲು ಇಂಡಿಯಾದ ಉದ್ವೇಗ ಹೆಚ್ಚಿತು. ಗಾಂಧಿಯ ಹಿಂದೆ ವಿದೇಶೀ ಮತ್ತು ದೇಶೀಯ ಪತ್ರಿಕಾ ಪ್ರತಿನಿಧಿಗಳು ಆಶ್ರಮದಲ್ಲಿ ಸುತ್ತುತ್ತಿದ್ದರು. ಆತನೇನು ಮಾಡುವನು? ಹಳ್ಳಿಯ ಸುತ್ತಲೂ ಸಾವಿರಾರು ಜನರು ತಂಗಿ ಕಾಯುತ್ತಿದ್ದರು. ಜಗತ್ತಿನೆಲ್ಲೆಡೆಗಳಿಂದ ಬಂದ ತಂತೀ ಸಂದೇಶಗಳು ಅಹಮದಾಬಾದ್ ಅಂಚೆ ಕಛೇರಿಗೆ ವಿಶ್ರಾಂತಿ ಕೊಡದಿದ್ದುವು. ನ್ಯೂಯಾರ್ಕಿನಿಂದ ಡಾಕ್ಟರ್ ಜಾನ್ ಹೀನ್ಸ್ ಹೋವ್ಸ್ "ದೇವರು ನಿಮ್ಮನ್ನು ಕಾಪಾಡಲಿ," ಎಂದು ತಂತಿಯ ಸಂದೇಶ ಕಳುಹಿಸಿದರು.

ಮಾರ್ಚ್ ೧೨ನೆಯ ದಿನ ಪ್ರಾರ್ಥನೆಯಾದಮೇಲೆ ಮಹಾತ್ಮನೂ, ಎಪ್ಪತ್ತೆಂಟು ಜನ ಗಂಡಸರೂ, ಪಾದಚಾರಿಗಳಾಗಿ ಹಳ್ಳಿಯಿಂದ ಹೊರಟರು. ಪೋಲೀಸರ ಸೌಕರ್ಯಕ್ಕಾಗಿ ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಅವರೆಲ್ಲರ ಹೆಸರು ಕುಲಗೋತ್ರಗಳನ್ನು ಪ್ರಕಟಿಸಿದ್ದರು. "ನಾವು ದೇವರ ಹೆಸರಿನಲ್ಲಿ ಹೊರಟಿದ್ದೇವೆ," ಎಂದು ಗಾಂಧಿ ಹೇಳಿದರು. ದಕ್ಷಿಣಕ್ಕೆ ಸಮುದ್ರದ ಕಡೆ ನಡೆದರು. ಇಪ್ಪತ್ತುನಾಲ್ಕು ದಿನ ನಡೆದರು. ಗಾಂಧಿ ಒಂದಂಗುಲ ದಪ್ಪ, ೫೪ ಅಂಗುಲ ಉದ್ದದ, ಕಬ್ಬಿಣದ ಕೊನೆಯಿದ್ದ ಬೊಂಬನ್ನೂರಿಕೊಂಡಿದ್ದರು. ಗಾಂಧಿಗೆ ಒಂದು ಕುದುರೆ ಸಿದ್ಧವಾಗಿದ್ದರೂ ಆತನು ಹತ್ತಲಿಲ್ಲ. "ಹೊರೆಯಿಲ್ಲದೆ ದಿನಕ್ಕೆ ಹನ್ನೆರಡು ಮೈಲಿ ನಡೆಯುವುದು ಮಗುವಿಗೂ ಸಾಧ್ಯ," ಎಂದರು. ಒಂದೊಂದು ದಿನ ಹದಿನೈದು ಮೈಲಿಗಳನ್ನೂ ನಡೆದರು. ಆತನಿಗಾಗ ೬೧ ವರ್ಷ. ಆಶ್ರಮ ನಿವಾಸಿಗಳನೇಕರಿಗೆ ಆಯಾಸವಾಗಿ ಕಾಲು ನೋವುಂಟಾಯಿತು. "ಈಗಿನ ಕಾಲದವರು ಸುಖಜೀವಿಗಳು ; ಅಶಕ್ತರು," ಎಂದು ಆತನು ಪರಿಹಾಸ್ಯಮಾಡಿದನು. ಪ್ರತಿದಿನ ಒಂದುಘಂಟೆ ನೂತು ದಿನವೂ ದಿನಚರಿ ಪುಸ್ತಕದಲ್ಲಿ ಬರೆಯುತ್ತಿದ್ದನು.

ಹಳ್ಳಿಯಿಂದ ಹಳ್ಳಿಗೆ ಕೊಳಕಾದ ರಸ್ತೆಗಳಲ್ಲಿ ಗಾಂಧಿ, ಆತನ ಹಿಂಬಾಲಕರು ನಡೆಯುತ್ತಿದ್ದರು. ರೈತರು ರಸ್ತೆಗೆ ನೀರು ಚೆಲ್ಲಿ, ಎಲೆಗಳನ್ನು ಹರಡುತ್ತಿದ್ದರು. ಪ್ರತಿಹಳ್ಳಿಯೂ ತೋರಣಗಳಿಂದ ಅಲಂಕರಿಸಲ್ಪಡುತ್ತಿತ್ತು. ಯಾತ್ರಿಕರ ಮುಂದೆ ಗುಂಪು ಸೇರಿದ್ದ ರೈತರು ಅಡ್ಡಬೀಳುತ್ತಿದ್ದರು. ಮಹಾತ್ಮನೂ, ಇತರರೂ ಖಾದಿಯನ್ನುಡಬೇಕೆಂದೂ, ಮದ್ಯ ಅಫೀಮುಗಳನ್ನು ಬಿಡಬೇಕೆಂದೂ, ಬಾಲ್ಯವಿವಾಹ ಪದ್ಧತಿಯನ್ನು ಬಿಟ್ಟು ಶುದ್ಧವಾಗಿ ಬಾಳಬೇಕೆಂದೂ, ಅಲ್ಲಲ್ಲಿ ನಿಂತು ದಿನಕ್ಕೆರಡು ಮೂರು ಬಾರಿ ಉಪದೇಶ ಮಾಡುತ್ತಿದ್ದರು.

ಇವರು ಸಂಚಾರ ಮಾಡಿದ ಕಡೆ, ಮುನ್ನೂರಕ್ಕಿಂತ ಹೆಚ್ಚು ಹಳ್ಳಿಗಳಲ್ಲಿ ತಲೆಯಾಳುಗಳು ಸರ್ಕಾರಿ ಚಾಕರಿಯನ್ನು ಬಿಟ್ಟರು. ಒಂದು ಹಳ್ಳಿಯ ಜನ ಯಾತ್ರಿಕನೊಡನೆ ಇನ್ನೊಂದು ಹಳ್ಳಿಯವರೆಗೂ ಹೋಗಿ ಗೌರವದಿಂದ ಬೀಳ್ಕೊಡುತ್ತಿದ್ದರು. ಇಂಡಿಯದ ಎಲ್ಲೆಡೆಗಳಿಂದ ಯುವ

ಕರು, ಯುವತಿಯರು ಆಶ್ರಮವಾಸಿಗಳ ಯಾತ್ರೆಯಲ್ಲಿ ಭಾಗವಹಿಸಲು ಬಂದು ಸೇರಿದರು. ಏಪ್ರಿಲ್ ೫ ರಲ್ಲಿ ಗಾಂಧಿ ದಂಡಿಯಲ್ಲಿ ಸಮುದ್ರವನ್ನು ಸೇರಿದಾಗ ಆತನ ಸಣ್ಣ ಪರಿವಾರ ಸಾವಿರಾರು ಜನರ ಶಾಂತಿ ಸೈನ್ಯವಾಗಿ ಪರಿಣಮಿಸಿತ್ತು.

ಆ ರಾತ್ರಿಯೆಲ್ಲಾ ಆಶ್ರಮವಾಸಿಗಳು ನಿದ್ದೆಹೋಗದೆ, ಪ್ರಾರ್ಥನೆ ಮಾಡುತ್ತಿದ್ದು, ಬೆಳಗಿನ ಜಾವ ಮಹಾತ್ಮನೊಡನೆ ಸಮುದ್ರದ ತಡಿಗೆ ಹೋದರು. ಆತನು ನೀರಿನಲ್ಲಿ ಮುಳುಗಿ ಎದ್ದು, ದಡದಲ್ಲಿದ್ದ ಉಪ್ಪನ್ನು ಕೈಗೆತ್ತಿಕೊಂಡನು. ಸರೋಜಿನಿನಾಯ್ಡು ಆತನ ಪಕ್ಕದಲ್ಲಿ ನಿಂತು, " ರಕ್ಷಕನೇ ಜಯ," ಎಂದು ಕೂಗಿದಳು.

ಸರ್ಕಾರದ ಸ್ವಾಮ್ಯವಾದ ಉಪ್ಪನ್ನು ಅವರ ಅಪ್ಪಣೆಯಿಲ್ಲದೆ ಗಾಂಧಿ ಕಾನೂನು ಭಂಗ ಮಾಡಿದನು. ಆತನು ಉಪ್ಪನ್ನು ಬಿಟ್ಟು ಆರು ವರ್ಷಗಳಾಗಿದ್ದುವು.

ಗಾಂಧಿ ರೈಲಿನಲ್ಲಾಗಲಿ, ಮೋಟಾರು ಗಾಡಿಯಲ್ಲಾಗಲಿ ಉಪ್ಪು ಮಾಡಲು ಹೋಗಿದ್ದರೂ ವಿಶೇಷ ಪರಿಣಾಮವುಂಟಾಗುತ್ತಿತ್ತು. ಆದರೆ ೨೪೧ ಮೈಲಿ, ಇಪ್ಪತ್ತುನಾಲ್ಕುದಿನ ನಡೆದು ಇಂಡಿಯಾದ ಗಮನವನ್ನೆಲ್ಲಾ ಸೆಳೆದು ಹಳ್ಳಿ ಹಳ್ಳಿಯಲ್ಲೂ, "ಎಚ್ಚರದಿಂದಿರಿ. ನಾನು ಜನತೆಗೆ ಸನ್ನೆ ಮಾಡುತ್ತೇನೆ," ಎಂದು ಹೇಳಿ, ಒಂದು ಪ್ರಚಂಡ ಸರ್ಕಾರವನ್ನೆದುರಿಸಲು ಒಂದು ಹಿಡಿ ಉಪ್ಪನ್ನು ಕೈಗೆತ್ತಿಕೊಳ್ಳಲು ಕಲ್ಪನಾಶಕ್ತಿ ಬೇಕು; ಘನ ಕವಿಯ ಕೋರಿಕೆಯ ಶಕ್ತಿಬೇಕು. ಅನಕ್ಷರಸ್ಥರಾದ ರೈತರ ಮನಸ್ಸನ್ನು ಅದು ಸೆಳೆಯಿತು; ಸುಭಾಷ್‌ಚಂದ್ರಬೋಸನಂತಹ ನುರಿತವನು, ಟೀಕೆ ಮಾಡುತ್ತಿದ್ದವನು, ಮಾರುಹೋಗಿ ಉಪ್ಪಿನ ಯಾತ್ರೆಯನ್ನು ಎಲ್ಬಾ ದ್ವೀಪದಿಂದ ಪ್ಯಾರಿಸ್ಸಿಗೆ ಹಿಂದಿರುಗಿದ ನೆಪೋಲಿಯನ್ನನ ಪ್ರಯಾಣಕ್ಕೆ ಹೋಲಿಸಿದನು.

ಅಷ್ಟು ಕೆಲಸಮಾಡಿ ಗಾಂಧಿ ಸುಮ್ಮನಾದನು. ಇಂಡಿಯಾಗೆ ದಾರಿ ತೋರಿದಂತಾಯಿತು. ಸಮುದ್ರದ ದಡದಿಂದ ಸ್ವಲ್ಪ ಉಪ್ಪು ಕದ್ದು ಇಂಡಿಯಾದ ಸಂಪರ್ಕವನ್ನು ಗಾಂಧಿ ಪಡೆದನು.

ಇಂಡಿಯಾದ ತೀರಪ್ರದೇಶದಲ್ಲೆಲ್ಲಾ ರೈತರು ನೀರಿನೊಳಗಿಳಿದು

ತಟ್ಟಿಗಳಲ್ಲಿ ಉಪ್ಪನ್ನು ತಯಾರಿಸಲಾರಂಭಿಸಿದರು. ಎಷ್ಟೋ ಜನರನ್ನು ಪೋಲೀಸರು ಸೆರೆ ಹಿಡಿದರು. ಪಟ್ಟಣಗಳಲ್ಲಿ ಕಾಂಗ್ರೆಸ್ ಸ್ವಯಂ ಸೇವಕರು ಉಪ್ಪಿನ ಕಳ್ಳವ್ಯಾಪಾರಾಟ ಮಾಡಲಾರಂಭಿಸಿದರು. ಅನೇಕರು ಸೆರೆಮನೆಗೆ ಹೋದರು. ಬೊಂಬಾಯಲ್ಲಿ ಕಾಂಗ್ರೆಸ್ ಕಛೇರಿಯ ಮಾಳಿಗೆಯ ಮೇಲೆ ಉಪ್ಪನ್ನೊಣಗಿಸುತ್ತಿದ್ದುದರಿಂದ ಪೋಲೀಸರು ಅಲ್ಲಿಗೆ ನುಗ್ಗಿದರು. ೬೦,೦೦೦ ಜನ ಗುಂಪು ಸೇರಿ ಗಲಭೆಯಾಯಿತು. ನೂರಾರು ಜನರನ್ನು ಹಗ್ಗಗಳಿಂದ ಬಿಗಿದು ಸೆರೆಮನೆಗೊಯ್ದರು. ಗಾಂಧಿ ದಂಡಿಯಲ್ಲೆತ್ತಿದ ಉಪ್ಪನ್ನು ೧೬೦೦ ರೂಪಾಯಿಗಳಿಗೆ ಹರಾಜು ಮಾಡಲಾಗಿ ಆ ಹಣವನ್ನು ಸಾರ್ವಜನಿಕ ನಿಧಿಗೆ ಸೇರಿಸಲಾಯಿತು. ಜವಾಹರ್‌ಲಾಲ್ ನೆಹ್ರು ಉಪ್ಪಿನ ಕಾನೂನು ಮುರಿದುದಕ್ಕಾಗಿ ಆರು ತಿಂಗಳು ಸೆರೆಮನೆಗೆ ಹೋಗಬೇಕಾಯಿತು. ಕಲ್ಕತ್ತದ ನಗರಾಧ್ಯಕ್ಷರು ಸಾರ್ವಜನಿಕ ಸಭೆಯಲ್ಲಿ ವಿದೇಶೀ ವಸ್ತ್ರಗಳನ್ನು ಬಹಿಷ್ಕರಿಸಬೇಕೆಂದು ಹೇಳಿ ಸೆರೆಮನೆ ಸೇರಿದರು. ಮಹಾತ್ಮರ ಪ್ರಿಯಶಿಷ್ಯನಾದ ಕಿಶೋರ್‌ಲಾಲ್ ಮಷ್ರೂವಾಲಾರನ್ನು ಎರಡು ವರ್ಷ ಸೆರೆಯಲ್ಲಿಟ್ಟರು. ನಾಯಕರ ದಸ್ತಗಿರಿಗೆ ಅಸಮಾಧಾನ ಸೂಚಿಸಲು ಅನೇಕ ಪಟ್ಟಣಗಳಲ್ಲಿ ಹರತಾಳಗಳು ನಡೆದುವು. ಎಷ್ಟೋ ಸಂಸ್ಥಾನಗಳಲ್ಲಿ ನಾಯಕರೇ ಇರಲಿಲ್ಲ. ನ್ಯಾಯವಿಧಾಯಕ ಸಭೆಯ ಸ್ಪೀಕರ್ ವಿಠಲ್ ಭಾಯ್‌ಪಟೇಲ್ ಕೆಲಸಕ್ಕೆ ರಾಜಿನಾಮೆ ಸಲ್ಲಿಸಿ, ಇಂಡಿಯನ್ನರು ಸರ್ಕಾರಿ ಕೆಲಸಗಳಿಗೆ ಸೇರಕೂಡದೆಂದು ಉಪದೇಶ ಮಾಡಿದರು. ವಾಯವ್ಯದ ಪೆಷಾವರಿನಲ್ಲಿ ಪೋಲಿಸರು ಸೈನಿಕರನ್ನು ಊರಿನಿಂದ ಹೊರಗಟ್ಟಿದರು. ಪುನಃ ಸೈನ್ಯ ಹಿಂದಿರುಗಿ ಎಪ್ಪತ್ತು ಜನರನ್ನು ಕೊಂದು, ನೂರು ಜನರನ್ನು ಗಾಯಗೊಳಿಸಿ ಊರನ್ನು ಸ್ವಾಧೀನ ಪಡಿಸಿಕೊಂಡಿತು. ಎಲ್ಲಾ ದೇಶೀಯ ಪತ್ರಿಕೆಗಳ ಮೇಲೂ ಸರ್ಕಾರ ವಿಮರ್ಶನಾಧಿಕಾರವನ್ನು ವಹಿಸಿತು. ಲಾರ್ಡ್ ಇರ್ವಿನ್ನರ ಚರಿತ್ರಕಾರ, “ವೈಸರಾಯಿ ೬೦ ಸಾವಿರ ಜನ ರಾಜಕೀಯ ಅಪರಾಧಿಗಳನ್ನು ಸೆರೆಮನೆಗಳಲ್ಲಿ ತುಂಬಿಸಿದನು”, ಎಂದು ಬರೆದಿದ್ದಾನೆ. ಗಾಂಧಿ ದಂಡಿಯಲ್ಲಿ ಸಮುದ್ರಸ್ನಾನ ಮಾಡಿದ ಒಂದು ತಿಂಗಳಮೇಲೂ ಇಂಡಿಯಾದಲ್ಲೆಲ್ಲಾ ಶಾಂತಿಯುತವಾದ ದಂಗೆ ಹರಡಿತ್ತು. ಚಳುವಳಿಯನ್ನು ಮುಂದುವರಿಸಬೇಕೆಂಬ ಅಪೇಕ್ಷೆಯಿಂದ, ತಾವು ಹಿಂಸಾ

ಕೃತ್ಯಗಳನ್ನು ಮಾಡಿದರೆ ಗಾಂಧಿ ಅದನ್ನು ನಿಲ್ಲಿಸಿಬಿಡುವನೆಂಬ ಹೆದರಿಕೆಯಿಂದ, ಏಟು, ಒದೆತ, ದಸ್ತಗಿರಿಗಳಾದರೂ ಇಂಡಿಯನ್ನರು ಅಹಿಂಸಾವ್ರತವನ್ನು ಬಿಡಲಿಲ್ಲ.

ಮೇ ೪ರಲ್ಲಿ, ಉಪ್ಪು ತಪ್ಪುಗಾರನಾಗಿ ತಿಂಗಳಾಗುವ ಮೊದಲೇ ಗಾಂಧಿ, ಡೇರೆಯಲ್ಲಿ ಮಲಗಿದ್ದಾಗ ಸೆರೆಹಿಡಿಯಲ್ಪಟ್ಟನು. ಅಧಿಕಾರಿಗಳು ಆತನ ಎತ್ತರವನ್ನು ಗುರುತಿಸಿದರು : ೫ ಅಡಿ, ೫ ಅಂಗುಲ. ಪುನಃ ಸೆರೆಹಿಡಿಯಬೇಕಾದಾಗ ಗುರುತಿಗಾಗಿ ಆತನ ಮೈಮೇಲಿನ ಗುರುತುಗಳನ್ನೆಲ್ಲಾ ಬರೆದುಕೊಂಡರು. ಬಲತೊಡೆಯ ಮೇಲೊಂದು ಮಚ್ಚೆ, ಬಲರೆಪ್ಪೆಯ ಮೇಲೊಂದು ಕರೀಮಚ್ಚೆ, ಎಡಮೊಣಕೈಕೆಳಗೆ ಬಟಾಣಿಕಾಳನಷ್ಟು ಗಾಯದ ಮಚ್ಚೆ, ಗಾಂಧಿಗೆ ಸೆರೆಮನೆ ಹಿತಕರವಾಗಿತ್ತು. ಮಿಸ್. ಸ್ಲೇಡ್‌ಗೆ "ನಾನು ಸಂತೋಷವಾಗಿದ್ದೇನೆ. ಬಾಕಿ ನಿಂತಿದ್ದ ನಿದ್ದೆಯನ್ನೆಲ್ಲಾ ತೀರಿಸುತ್ತಿದ್ದೇನೆ," ಎಂದು ಬರೆದನು. ಆತನ ಎದುರಿಗೆ ಮೇಕೆಯ ಹಾಲನ್ನು ಕರೆಯುತ್ತಿದ್ದರು. (ಆತನು ಹಸು, ಎಮ್ಮೆಗಳ ಹಾಲು ಕುಡಿಯುತ್ತಿರಲಿಲ್ಲ; ಆದರೆ ತುಂಬಾ ಖಾಯಿಲೆಯಾಗಿದ್ದಾಗ, ಕಸ್ತೂರಿಬಾಯಿ ಆಡಿನ ಹಾಲು ಕುಡಿಯುವಂತೆ ಆತನನ್ನೊಪ್ಪಿಸಿದ್ದಳು. ಆತನು ಜೀವಮಾನವೆಲ್ಲಾ ಅದನ್ನೇ ಮುಂದುವರಿಸಿದನು.)

ದಸ್ತಗಿರಿಯಾಗುವ ಅನೇಕದಿನ ಮೊದಲು ಗಾಂಧಿ ವೈಸರಾಯಿಗೆ, "ದೇವರ ದಯವಿದ್ದರೆ, ಕೆಲವು ಜನ ಜತೆಗಾರರೊಡನೆ, ಬೊಂಬಾಯಿಗೆ ೧೫೦ ಮೈಲಿ ದೂರದಲ್ಲಿದ್ದ ಧರ್ಸ್ಯಾನ ಉಪ್ಪುಕಾರ್ಖಾನೆಯ ಮೇಲೆ ಧಾಳಿ ಮಾಡುತ್ತೇನೆ" ಎಂದು ಬರೆದರು. ಆದರೆ ದೇವರಿಗೆ ಇಷ್ಟಬರಲಿಲ್ಲ. ಆ ಧಾಳಿಗೆ ಸರೋಜಿನಿನಾಯ್ಡು ನಾಯಕಿಯಾದಳು. ೨೫೦೦ ಸ್ವಯಂಸೇವಕರು ಭಾಗವಹಿಸಿದರು. "ನಿಮಗೆ ಏಟು ಬೀಳುತ್ತದೆ; ಅಡ್ಡಿಪಡಿಸಕೂಡದು; ಕೈಯೆತ್ತಕೂಡದು; ಒಂದು ಏಟನ್ನು ತಪ್ಪಿಸಿಕೊಳ್ಳಕೂಡದು," ಎಂದು ಆಕೆ ಎಚ್ಚರಿಸಿದಳು.

ಎರಡನೆಯ ಮಹಾ ಯುದ್ಧದಲ್ಲಿ ಇಂಗ್ಲೆಂಡಿನಲ್ಲಿ ಮರಣ ಹೊಂದಿದ ಯುನೈಟೆಡ್ ಪ್ರೆಸ್‌ನ ಪ್ರಖ್ಯಾತ ವರದಿಕಾರ ಅಲ್ಲಿದ್ದು ಪತ್ರಿಕೆಗಳಲ್ಲೂ ಅನಂತರ, "ನನಗೆ ಶಾಂತಿ ದೊರಕಲಿಲ್ಲ", ಎಂಬ ಪುಸ್ತಕದಲ್ಲೂ ಬರೆದನು.

ಮಹಾತ್ಮರ ಎರಡನೆಯ ಮಗ ಮಣಿಲಾಲ್ ಗುಂಪಿನ ಮುಂದೆ ನಡೆದು, ಉಪ್ಪಿನ ತಟ್ಟೆಗಳ ಬಳಿಗೆ ಹೋದನು. ಸುತ್ತಲೂ ಕಂದಕಗಳು, ಮುಳ್ಳು ತಂತಿ, ನಾನ್ನೂರು ಜನ ಸೂರತ್ ಪೋಲೀಸರು, ಆರು ಬ್ರಿಟಿಷ್ ಅಧಿಕಾರಿಗಳ ಪಹರೆ. "ನಿಶ್ಶಬ್ದವಾಗಿ ಗಾಂಧಿಯ ಜನ ಬೇಲಿಗೆ ನೂರುಗಜದಲ್ಲಿ ನಿಂತರು. ಆರಿಸಿದ ಕೆಲವರು ಕಾಲುವೆ ದಾಟಿ ಮುಳ್ಳುಬೇಲಿಯ ಬಳಿಗೆ ಬಂದರು. ಅಧಿಕಾರಿಗಳು ಹಿಂದಕ್ಕೆ ಹೋಗಬೇಕೆಂದು ಅಪ್ಪಣೆ ಮಾಡಿದರೂ ಅವರು ಮುಂದೆ ನಡೆದರು. ಇದ್ದಕ್ಕಿದ್ದಂತೆ ನೂರಾರು ಜನ ಪೋಲೀಸರು ಅವರ ಮೇಲೆ ನುಗ್ಗಿ ಲಾಠಿಗಳಿಂದ ಹೊಡೆದರು. ಧಾಳಿಕಾರರಲ್ಲಿ ಒಬ್ಬನಾದರೂ ಕೈಎತ್ತಲಿಲ್ಲ. ಸುಮ್ಮನೆ ನೆಲಕ್ಕುರುಳಿದರು. ತಲೆಬುರುಡೆಗಳ ಮೇಲೆ ಏಟುಗಳು ಭೀಕರವಾಗಿ ಕೇಳಿಸುತ್ತಿದ್ದವು. ನಿಂತಿದ್ದ ಗುಂಪು ಏಟುಗಳನ್ನು ಕೇಳಿ ಸಹಾನುಭೂತಿಯಿಂದ ನಿಟ್ಟುಸಿರು ಬಿಡುತ್ತಿತ್ತು. ಜ್ಞಾನತಪ್ಪಿ, ಮೂಳೆಮುರಿದು, ತಲೆಯೊಡೆದು ಜನ ಬೀಳುತ್ತಿದ್ದರು. ಮಿಕ್ಕವರು ಹೆದರದೆ ಏಟು ಬೀಳುವವರೆಗೂ ಮುನ್ನಡೆಯುತ್ತಿದ್ದರು. ಮೊದಲಿನ ಗುಂಪು ಬೀಳುತ್ತಲೇ ಇನ್ನೊಂದು ಗುಂಪು ಮುಂದುವರಿಯಿತು. ಇನ್ನೊಂದು ಕ್ಷಣದಲ್ಲಿ ತನಗೆ ಏಟುಬಿದ್ದು ಸಾಯಬಹುದೆಂದು ಎಲ್ಲರಿಗೂ ತಿಳಿದಿದ್ದರೂ ಒಬ್ಬನಾದರೂ, ಅನುಮಾನವನ್ನಾಗಲೀ, ಹೆದರಿಕೆಯನ್ನಾಗಲಿ ತೋರಿಸಲಿಲ್ಲ. ಸಂಗೀತದ, ಜಯಕಾರದ ಉತ್ತೇಜನವಿಲ್ಲದೆ, ಏಟಿನಿಂದ, ಸಾವಿನಿಂದ ತಪ್ಪಿಸಿಕೊಳ್ಳಬಹುದೆಂಬ ಆಸೆಯೂ ಇಲ್ಲದೆ ತಲೆಯೆತ್ತಿಕೊಂಡು ಮುಂದಕ್ಕೆ ನುಗ್ಗಿದರು. ಪೋಲೀಸರು ಓಡಿಬಂದು ಎರಡನೆಯ ತಂಡವನ್ನೂ ಹೊಡೆದು ಕೆಡವಿದರು. ಯುದ್ಧವಿಲ್ಲ, ಹೊಡೆದಾಟವಿಲ್ಲ, ಗುಂಪು ಸುಮ್ಮನೆ ಮುಂದೆ ನುಗ್ಗಿ ಕೆಳಕ್ಕುರುಳುತ್ತಿತ್ತು. ಇನ್ನೂ ಇಪ್ಪತ್ತೈದು ಜನ ನುಗ್ಗಿ ಕುಳಿತರು. ಕುಳಿತಿದ್ದವರ ಹೊಟ್ಟೆ, ಬೆನ್ನುಗಳ ಮೇಲೆ ಪೋಲೀಸಿನವರು ಕ್ರೂರವಾಗಿ ಒದೆಯಲಾರಂಭಿಸಿದರು. ಇನ್ನೊಂದು ಗುಂಪು ನುಗ್ಗಿತು. ಅವರ ಕೈ ಹಿಡಿದು ದರದರನೆ ಎಳೆದುಕೊಂಡು ಹೋಗಿ ಪೋಲೀಸರು ಕಾಲುವೆಗಳೊಳಗೆ ತಳ್ಳಿದರು. ನಾನು ನಿಂತಿದ್ದ ಕಡೆ ಒಬ್ಬನನ್ನು ನೀರಿನೊಳಕ್ಕೆ ನೂಕಿದುದರಿಂದ ನನಗೂ ಆ ಮಣ್ಣಿನ ನೀರಿನ ಸ್ನಾನವಾಯಿತು. ಇನ್ನೊಬ್ಬನು ಒಬ್ಬ ಗಾಂಧಿ ಅನುಯಾಯಿಯನ್ನು ಬಚ್ಚಲಿನೊಳಗೆ ಹಾಕಿ ಲಾಠಿಯಿಂದ

ಹೊಡೆದನು. ರಕ್ತಸೋರುತ್ತ ಜ್ಞಾನತಪ್ಪಿದವರನ್ನು ಅನೇಕ ಘಂಟೆಗಳು ಸಾಗಿಸಿದರು," ಎಂದು ಬರೆದಿದ್ದಾರೆ.

ಒಬ್ಬ ಬ್ರಿಟಿಷ್ ಅಧಿಕಾರಿ ಶ್ರೀಮತಿ ನಾಯ್ಡುರವರ ಕೈಹಿಡಿದು, "ನಿಮ್ಮನ್ನು ದಸ್ತಗಿರಿಮಾಡಿದ್ದೇನೆ," ಎಂದನು. ಆಕೆ ಆತನ ಕೈಕೊಡವಿ, "ನಾನು ಬರುತ್ತೇನೆ. ನನ್ನನ್ನು ಮುಟ್ಟಬೇಡಿ," ಎಂದಳು. ಮಣಿಲಾಲ್ ಗಾಂಧಿಯನ್ನೂ ದಸ್ತಗಿರಿ ಮಾಡಿದರು.

ಅನೇಕ ದಿನ ಧಾಳಿಗಳೂ, ದಸ್ತಗಿರಿಗಳೂ ನಡೆದುವು.

ಇಂಡಿಯಾ ಸ್ವತಂತ್ರವಾಯಿತು. ಕಾನೂನಿನ ಪ್ರಕಾರ ಏನೂ ಬದಲಾವಣೆಯಾಗಲಿಲ್ಲ. ಇಂಡಿಯಾ ಇನ್ನೂ ಬ್ರಿಟನ್ನಿನ ವಸಾಹತಾಗಿತ್ತು. ಆದರೆ ಒಂದು ಬದಲಾವಣೆಯಾಗಿತ್ತು. ಅದನ್ನು ಠಾಕೂರ್ ಹೀಗೆ ವಿವರಿಸಿದರು. ೧೯೩೦ರ ಮೇ ೧೭ರ ಮ್ಯಾಂಚೆಸ್ಟರ್ ಗಾರ್ಡಿಯನ್ ಪತ್ರಿಕೆಗೆ, "ಯೂರೋಪು ಏಷ್ಯಾದಲ್ಲಿ ತನ್ನ ನೈತಿಕ ಗೌರವವನ್ನು ಸಂಪೂರ್ಣವಾಗಿ ಕಳೆದುಕೊಂಡಿದೆ. ಜಗತ್ತಿನಲ್ಲಿ ನ್ಯಾಯ, ಉನ್ನತಧ್ಯೇಯಗಳನ್ನು ಎತ್ತಿ ಹಿಡಿಯುವ ದೇಶವೆಂಬ ಖ್ಯಾತಿಯನ್ನು ಕಳೆದುಕೊಂಡಿದೆ. ಈಗ ಅದು ವರ್ಣದ ಅಹಂಕಾರದಿಂದ ವಿದೇಶೀಯರನ್ನು ದರೋಡೆ ಮಾಡುವುದಕ್ಕೆ ಪ್ರಸಿದ್ಧವಾಗಿದೆ. ಇದು ಯೂರೋಪಿಗೆ ದೊಡ್ಡ ನೈತಿಕ ಪರಾಭವ. ಏಷ್ಯ ದುರ್ಬಲವಾಗಿ, ತನ್ನ ಹಕ್ಕುಗಳನ್ನು ಕಾದುಕೊಳ್ಳುವ ಶಕ್ತಿಯನ್ನು ಕಳೆದುಕೊಂಡಿಬರಬಹುದು ಆದರೂ ಅದು ಮೊದಲು ಯಾವ ಯೂರೋಪನ್ನು ಪೂಜಿಸುತ್ತಿತ್ತೋ ಅದನ್ನು ಈಗ ಅಲ್ಲಗಳೆಯಬಹುದು." ಎಂದು ಬರೆದರು. ಇಂಡಿಯಾದ ಈ ಸಾಧನೆಗೆ ಗಾಂಧಿಯೇ ಕಾರಣವೆಂದು ಠಾಕೂರರ ಅಭಿಪ್ರಾಯ.

ಉಪ್ಪಿನಯಾತ್ರೆ ಮತ್ತು ಅದರ ಪರಿಣಾಮವಾಗಿ ಎರಡು ಕೆಲಸಗಳು ನಡೆದುವು. ವಿದೇಶೀ ನೊಗವನ್ನು ತಮ್ಮ ಭುಜಗಳಿಂದ ಇಳಿಸಬಹುದೆಂಬ ಧೈರ್ಯ ಇಂಡಿಯನ್ನರಿಗೆ ಬಂತು. ಇಂಡಿಯಾವನ್ನು ಹಾಸ್ಯಕ್ಕೆ ಒಳಪಡಿಸುತ್ತಿದ್ದೇವೆಂಬ ಅರಿವು ಬ್ರಿಟಿಷರಿಗುಂಟಾಯಿತು. ೧೯೩೦ ಆದ ಮೇಲೆ ಇಂಡಿಯಾ ಒಂದು ದಿನ ಆಳಲ್ಪಡಲು ನಿರಾಕರಿಸುವುದೆಂದೂ, ಅದಕ್ಕಿಂತ ಮುಖ್ಯವಾಗಿ ಒಂದು ದಿನ ಇಂಗ್ಲೆಂಡು ಆಳಲು ನಿರಾಕರಿಸುವುದೆಂದೂ

ಖಚಿತವಾಯಿತು.

ಕೋಲುಗಳಿಂದ, ಬಂದೂಕಿನ ತುದಿಯಿಂದ ಹೊಡೆದರೂ ಇಂಡಿಯನ್ನರು ಅಂಜದೆ, ಇಂಗ್ಲೆಂಡಿಗೆ ಶಕ್ತಿಯಿಲ್ಲವೆಂದೂ, ಇಂಡಿಯಾವನ್ನು ಜಯಿಸಲಸಾಧ್ಯವೆಂದೂ ತೋರಿಸಿಕೊಟ್ಟರು. ಮಿಕ್ಕದ್ದೆಲ್ಲಾ ನಡೆದೇ ತೀರಬೇಕಾಯಿತು.

## ೧೭. ಅರೆಬೆತ್ತಲೆ ಫಕೀರ

ಗಾಂಧಿಯನ್ನು ಸೆರೆಯಲ್ಲಿಡಲು ರಾಂಸೆ ಮ್ಯಾಕ್ಡೊನಾಲ್ಡರಿಗೆ ಸಂಕೋಚವಾಯಿತು. ಮಹಾತ್ಮನನ್ನು ಬಿಡುಗಡೆ ಮಾಡಬೇಕೆಂದು ಜಗತ್ತಿನ ಎಲ್ಲಾ ಕಡೆಗಳಿಂದ, ತನ್ನದೇಶೀಯರಿಂದಲೇ ಟೆಲಿಗ್ರಾಂಗಳ ಪ್ರವಾಹವೇ ಬಂತು. ಗಾಂಧಿಯನ್ನು ಹೊಗಳಿ, ಇಂಡಿಯಾಕ್ಕೆ ಸ್ವಾತಂತ್ರ್ಯ ಕೊಡಬೇಕೆಂದು ಮ್ಯಾಕ್ಡೊನಾಲ್ಡ್ ಮತ್ತು ಆತನ ಮಂತ್ರಿಮಂಡಲದವರೇ ಅನೇಕ ಬಾರಿ ಹೇಳಿದ್ದರು. ಲಾರ್ಡ್ ಇರ್ವಿನ್ನಿಗೆ ಹೆಚ್ಚು ತೊಂದರೆಯಾಯಿತು; ಅಸಹಕಾರದಿಂದ ಸರ್ಕಾರದ ಕೆಲಸನಡೆಯುವುದು ಕಷ್ಟವಾಗಿತ್ತು. ಆದಾಯ ಕಡಿಮೆಯಾಗಿತ್ತು. ದೇಶದಲ್ಲಿ ಕಾನೂನು, ಶಿಸ್ತುಗಳನ್ನು ಕಾಪಾಡುವುದು ಪೋಲೀಸಿನವರಿಗೆ, ಸೈನ್ಯಕ್ಕೆಬಹಳ ಕಷ್ಟವಾಗಿತ್ತು.

೧೯೩೦ರ ನವೆಂಬರಿನಲ್ಲಿ ವೈಸರಾಯಿ ಕಳುಹಿಸಿದ ಕೆಲವರು ಇಂಡಿಯನ್ನರು ಸೇರಿ ನಡೆಸಿದ ಒಂದು ಗುಂಡು ಮೇಜಿನ ಸಮ್ಮೇಳನ ವ್ಯರ್ಥವಾಯಿತು; ಇಂಡಿಯಾದ ಪ್ರಜೆಗಳನ್ನು ಪ್ರತಿನಿಧಿಸಿದ ಒಂದೇ ಸಂಸ್ಥೆ ಕಾಂಗ್ರೆಸ್ಸಿಗೆ ಅಲ್ಲಿ ಸ್ಥಳವಿರಲಿಲ್ಲ. ೧೯೩೧ರ ಜನವರಿ ೧೯ರಲ್ಲಿ ಅದು ಮುಕ್ತಾಯವಾದಾಗ ಮ್ಯಾಕ್ಡೊನಾಲ್ಡ್ ಎರಡನೆಯ ಸಮ್ಮೇಳನಕ್ಕೆ ಕಾಂಗ್ರೆಸ್ ತನ್ನ ಸದಸ್ಯರನ್ನು ಕಳುಹಿಸಬೇಕೆಂದು ಕೋರಿದನು. ಆದರೆ ಅವರೆಲ್ಲಾ ಇಂಡಿಯಾದಲ್ಲಿ ಸೆರೆಯಲ್ಲಿದ್ದರು. ಲಾರ್ಡ್ ಇರ್ವಿನ್ ಈ ಸೂಚನೆ ಅಥವಾ ಅಪ್ಪಣೆಯನ್ನು ಮನ್ನಿಸಿ ಗಾಂಧಿ, ನೆಹ್ರೂತಂದೆ ಮಕ್ಕಳು, ಇನ್ನೂ ಇಪ್ಪತ್ತು ಜನ ಪ್ರಮುಖ ನಾಯಕರನ್ನೂ ಜನವರಿ ೨೬ರಲ್ಲಿ, ಕಾಂಗ್ರೆಸ್ ಸ್ವಾತಂತ್ರ್ಯ ದಿನವೆಂದು ಘೋಷಿಸಿದ ದಿನದ ಹಿಂದಿನ ಸಂಜೆ ಬಿಡುಗಡೆಮಾಡಿದನು. ಈ ಸಮಾಧಾನ ಸೂಚಕ ಕೃತ್ಯಕ್ಕೆ ಮೆಚ್ಚಿ ಗಾಂಧಿ, ಒಂದು ಭೇಟಿ ಕೋರಿ ಇರ್ವಿನ್ನಿಗೆ ಪತ್ರಬರೆದನು.

ಇರ್ವಿನ್ ಒಪ್ಪಿದನು. ಫೆಬ್ರವರಿ ೧೭ನೇ ತಾರೀಖು ಮಧ್ಯಾಹ್ನ ಎರಡೂವರೆ ಘಂಟೆಗೆ ಮೊದಲ ಭೇಟಿ ಮೂರು ಘಂಟೆ ೪೦ ನಿಮಿಷ ನಡೆಯಿತು. ಇರ್ವಿನ್ನಿನ ಚರಿತ್ರಕಾರ, "ಬ್ರಿಟಿಷ್ ರಾಜ್ಯದ ಕುದಿಕುದಿವ ಚರಿತ್ರೆಯಲ್ಲಿ ಒಬ್ಬ ವೈಸರಾಯಿಗೂ, ಇಂಡಿಯಾ ನಾಯಕನಿಗೂ ನಡೆದ ನಾಟಕೀಯ ವೈಯಕ್ತಿಕ ಸಮಾಗಮಕ್ಕೆ ರಂಗಭೂಮಿ ಸಿದ್ಧವಾಯಿತು." ಎಂದು ಬರೆದಿದ್ದಾನೆ.

ಅದು ಬರೀ ನಾಟಕೀಯ ಮಾತ್ರವಲ್ಲ; ಚರಿತ್ರಾರ್ಹವಾಗಿಯೂ, ನಿರ್ಧಾರಕವಾಗಿಯೂ ಇತ್ತು. ಇದು ಎಲ್ಲರಿಗಿಂತ ಸ್ಪಷ್ಟವಾಗಿ ವಿನ್‌ಸ್ಟನ್ ಚರ್ಚಿಲ್ಲಿಗೆ ತಿಳಿಯಿತು. ಬೇಸರದಿಂದ ಆತನು, "ಒಂದಾನೊಂದು ಕಾಲದಲ್ಲಿ ವಕೀಲನಾಗಿದ್ದು, ಈಗ ರಾಜದ್ರೋಹಿ ಫಕೀರನಾಗಿರುವವನು, ಅರೆಬೆತ್ತಲೆಯಾಗಿ ವೈಸರಾಯಿ ಅರಮನೆಯೊಳಕ್ಕೆ ನಡೆದು, ಚಕ್ರವರ್ತಿಯ ಪ್ರತಿನಿಧಿಯೊಡನೆ ಸರಿಸಮಾನನಾಗಿ ಮಾತನಾಡಲು ಹೋಗುವ ಅಸಹ್ಯಕರವಾದ ದೃಶ್ಯ ನನಗೆ ರೋಷವನ್ನುಂಟುಮಾಡುತ್ತದೆ," ಎಂದನು.

ಚರ್ಚಿಲ್ಲನ ಮುಚ್ಚುಮರೆಯಿಲ್ಲದ ರೋಷಪೂರಿತವಾದ ಕೋಪ, ಹೇಸಿಗೆ, ಆತನ ದೃಷ್ಟಿಯನ್ನು ಮಂದ ಮಾಡಲಿಲ್ಲ. ಮುಖ್ಯವಾದ ವಿಚಾರ ಮಹಾತ್ಮನ ತುಂಡು ಬಟ್ಟೆಯಲ್ಲ; ಆತನು ತ್ಯಜಿಸಿದ ಉದ್ಯೋಗವಲ್ಲ; ಆತನು ಇರ್ವಿನ್ನಿನೊಡನೆ ಸಮಾನತೆಯಿಂದ ಮಾತುಕತೆ ನಡೆಸಲು ಪಡೆದ ಹಕ್ಕು. ವೈಸರಾಯ ಬಳಿ ಬರುವ ಇತರರಂತೆ ಆತನು ಬೇಡಿಕೆ ಹಿಡಿದು ಬಂದಿರಲಿಲ್ಲ. ಜನಾಂಗದ ನಾಯಕನಾಗಿ, "ಸರಿಸಮಾನತೆಯಿಂದ" ಬೇರೊಂದು ದೇಶದ ಪ್ರತಿನಿಧಿಯೊಡನೆ ಸಂಧಾನಕ್ಕೆ ಬಂದಿದ್ದನು. ಗಾಂಧಿಗೆ ವಿರುದ್ಧವಾಗಿ ಇಂಡಿಯಾದಲ್ಲಿ ಆಡಳಿತ ನಡೆಸಲು ಸಾಧ್ಯವಿಲ್ಲವೆಂದು ಉಪ್ಪು ಯಾತ್ರೆ ತೋರಿಸಿಕೊಟ್ಟಿತು; ಬ್ರಿಟಿಷ್ ರಾಜ್ಯ ಅರೆಬೆತ್ತಲೆ ಫಕೀರನ ದಯೆ ಬೇಡಬೇಕಾಗಿತ್ತು; ಚರ್ಚಿಲ್ಲರಿಗೆ ಅಸಹ್ಯವಾಯಿತು. ಇಂಗ್ಲೆಂಡು ವಾಸ್ತವವಾಗಿ ಇಂಡಿಯಾಕ್ಕೆ ಸ್ವಾತಂತ್ರ್ಯ ಕೊಟ್ಟಂತೆಯೇ ಆತನಿಗೆ ತೋರಿತು.

ಅನೇಕ ಸಮ್ಮೇಳನ ವ್ಯಾಜ್ಯಗಳಾದಮೇಲೆ ಗಾಂಧಿ, ಇರ್ವಿನ್, "ದೆಹಲಿ ಒಪ್ಪಂದ," ಕ್ಕೆ ಮಾರ್ಚ್ ೫ರಲ್ಲಿ ಸಹಿಹಾಕಿದರು. ಇಬ್ಬರು ರಾಜಕಾರಣಿಗಳು ಒಂದು ಒಪ್ಪಂದಕ್ಕೆ ಬಂದಿದ್ದರು. ಅಸಹಕಾರ ನಿಂತು,

ಬಂದಿಗಳನ್ನು ಬಿಡುಗಡೆಮಾಡಿ, ಸಮುದ್ರದ ದಂಡೆಯಲ್ಲಿ ಉಪ್ಪುಮಾಡುವ ಅಧಿಕಾರ ಜನರಿಗೆ ಕೊಡಲಾಯಿತು. ಲಂಡನ್ನಿನ ಎರಡನೆಯ ಗುಂಡು ಮೇಜಿನ ಸಮ್ಮೇಳನಕ್ಕೆ ಹೋಗಲು ಕಾಂಗ್ರೆಸ್ ಒಪ್ಪಿತು. ಸ್ವಾತಂತ್ರ್ಯ ವನ್ನಾಗಲಿ, ಚಕ್ರಾಧಿಪತ್ಯದಲ್ಲಿ ಸಮಾನತೆಯನ್ನಾಗಲಿ ಕೊಡುವ ವಚನ ವಿರಲಿಲ್ಲ.

ಕೆಲವು ತಿಂಗಳುಗಳಲ್ಲಿ ಒಪ್ಪಂದದ ಪ್ರಾಮುಖ್ಯತೆ ಮಾಯವಾಯಿತು. ಆ ಸಂಧಾನದಲ್ಲಿ ಇರ್ವಿನ್ ವಿಜಯಹೊಂದಿದನೆಂದು ಬ್ರಿಟಿಷ್ ವಾಗ್ಮಿಗಳು ಹೇಳುವ ಮಾತು ನಿಜ. ಸ್ವಾತಂತ್ರ್ಯದ ತುಣುಕನ್ನೂ ಪಡೆಯಲಿಲ್ಲವೆಂದು ಅನೇಕ ಕಾಂಗ್ರೆಸ್ ಸದಸ್ಯರು ಗಾಂಧಿಯನ್ನು ಆಕ್ಷೇಪಿಸಿದರು. ಬೇರೊಬ್ಬ ರಾಜಕಾರಣಿಯಾಗಿದ್ದರೆ ಹೆಚ್ಚು ರಿಯಾಯಿತಿಗಳಿಗೆ ಹೊಡೆದಾಡುತ್ತಿದ್ದನು. ಗಾಂಧಿಗೆ ತಿರುಳು ಸಾಕಾಗಿತ್ತು. ಇಂಡಿಯಾ ಬ್ರಿಟನ್ನುಗಳಿಗೆ ಹೊಸ ಸಂಬಂಧದ ತಳಹದಿ ಹಾಕಿದ್ದನು. ಪುರಾತನ ಜನಾಂಗ ಜೀವನದಲ್ಲಿ ಒಂದು ಕ್ಷಣವೆನ್ನಿಸಬಹುದಾದ, ಹದಿನೇಳುವರ್ಷಗಳ ಅನಂತರ, ಇಂಡಿಯಾ ಸ್ವತಂತ್ರವಾಗುವುದು. ಈ ಒಪ್ಪಂದ ಒಂದು ಮೆಟ್ಟಲು, ಗುರಿಯಲ್ಲ.

ಮಾರ್ಗಕ್ಕೆ ಪ್ರಾಮುಖ್ಯತೆ ಕೊಡುತ್ತಿದ್ದ ಗಾಂಧಿಗೆ ವಿಶಾಲದೃಷ್ಟಿ, ತಾಳ್ಮೆ, ಸಂಯಮಗಳಿದ್ದುವು. ಕೆಲಸ ಸರಿಯಾದ ಧ್ಯೇಯಗಳಿಗನುಸಾರ ವಾಗಿ ನಡೆಯುತ್ತಿದ್ದರೆ ಲಾಭಕ್ಕೆ ಕಾಯುವುದು ಆತನಿಗೆ ಕಷ್ಟವಾಗಿರಲಿಲ್ಲ.

## ೧೮ ಲಂಡನ್ನಿನಲ್ಲಿ ಮೈನಸ್ ಫೋರ್ಸಿನಲ್ಲಿ (Minus fours)

೧೯೩೧ರ ಆಗಸ್ಟ್ ೨೯ರಲ್ಲಿ ತನ್ನ ಕಿರಿಯ ಮಗ ದೇವದಾಸ್ ಗಾಂಧಿ, ಕಾರ್ಯದರ್ಶಿ ಮಹದೇವ ದೇಸಾಯಿ (ಬಾಸ್ವೆಲ್ಲನ್ನು ಮೀರಿಸಿದ ಬಾಸ್ವೆಲ್ ಎಂದು ಈತನನ್ನು ಕರೆಯುತ್ತಿದ್ದನು), ಮಿಸ್. ಸ್ಲೇಡ್, ಪ್ಯಾರಿ ಲಾಲ್, ನಾಯರ್, ಬಟ್ಟೆ ವ್ಯಾಪಾರದ ಲಕ್ಷಾಧಿಕಾರಿ ಜಿ. ಡಿ. ಬಿರ್ಲಾ, ಪಂಡಿತ ಮಾಲವೀಯಾ, ಶ್ರೀಮತಿ ನಾಯ್ಡು ಇವರೊಡನೆ ಗಾಂಧಿ ಬೊಂಬಾಯಿಂದ ರಾಜಪುಟಾಣ ಎಂಬ ಹಡಗಿನಲ್ಲಿ ಹೊರಟನು. ಲಂಡನ್ನಿ ನಲ್ಲಿ ನಡೆಯಲಿದ್ದ ಗುಂಡು ಮೇಜಿನ ಸಮ್ಮೇಳನದಲ್ಲಿ ಭಾಗವಹಿಸಲು ಕಾಂಗ್ರೆಸಿನ ಏಕಮಾತ್ರ ಪ್ರತಿನಿಧಿಯಾಗಿ ಗಾಂಧಿ ಹೋಗುತ್ತಿದ್ದನು. ಆ ಸಂಸ್ಥೆಗೇ ಅಲ್ಲದೆ, ಇಂಡಿಯಾ ದೇಶದ ಹೆಚ್ಚು ಭಾಗಕ್ಕೂ ಆತನು ಪ್ರತಿನಿಧಿ

ಯಾಗಿದ್ದುದರಿಂದ ಬೇರೆ ಪ್ರತಿನಿಧಿಗಳ ಅಗತ್ಯವಿರಲಿಲ್ಲ.

ಲಂಡನ್ನಿನಲ್ಲಿ ಸೆಪ್ಟೆಂಬರ್ ೧೨ ರಿಂದ ಡಿಸೆಂಬರ್ ೫ರ ವರೆಗೂ ತನ್ನನ್ನು ೧೯೩೬ ರಲ್ಲಿ ನೋಡಲು ಬಂದಿದ್ದ ಮುರಿಯಲ್ ಲೆಸ್ಟರ್ ಎಂಬಾಕೆಯ ಮನೆಯಲ್ಲಿ ಕಿಂಗ್ಸ್ಲಿ ಹಾಲಿನಲ್ಲಿ ಇದ್ದನು. ಬೆಳಗ್ಗೆ ಹತ್ತಿರ ವಿದ್ದ ಬಡವರ ಮನೆಗಳ ಬಳಿ ನಡೆದಾಡಿ ಅಲ್ಲಿಯ ಜನರನ್ನು ಗುರುತು ಮಾಡಿಕೊಂಡು ಅವರ ಮನೆಗಳಿಗೆ ಹೋಗಿ ಬರಲಾರಂಭಿಸಿದನು. ಮಕ್ಕಳು ಆತನನ್ನು, "ಗಾಂಧಿ ಮಾವ," ಎಂದು ಕರೆದು ಆತನ ಬಳಿಗೆ ಹೋಗಿ ಕೈಹಿಡಿದುಕೊಳ್ಳುತ್ತಿದ್ದರು. ಒಬ್ಬ ತುಂಟ ಹುಡುಗ, "ಹೇ ಗಾಂಧಿ, ನಿನ್ನ ಷರಾಯಿ ಎಲ್ಲಿ?", ಎಂದು ಕೂಗಿದನು. ಗಾಂಧಿ ತುಂಬಾ ನಕ್ಕರು.

ಪತ್ರಿಕಾ ವರದಿಗಾರರು ಆತನನ್ನು ಸುತ್ತುವರಿದೇ ಇರುತ್ತಿದ್ದರು. ಒಬ್ಬಾತ ಗಾಂಧಿಯ ಬಟ್ಟೆಗಳ ವಿಚಾರ ಪ್ರಸ್ತಾಪಿಸಿದರು. ಗಾಂಧಿ, "ನೀವೆಲ್ಲಾ ಪ್ಲಸ್-ಫೋರ್ಸ್ (plus-fours) ಹಾಕಿಕೊಳ್ಳುತ್ತೀರಿ. ನನ್ನವು ಮೈನಸ್-ಫೋರ್ಸ್ (Minus-fours)" ಎಂದು ಗಾಂಧಿ ಉತ್ತರವಿತ್ತರು. ಬಕಿಂಗ್ ಹ್ಯಾಂ ಅರಮನೆಯಲ್ಲಿ ಆತನನ್ನು ೫ ನೇ ಜಾರ್ಜ್ ದೊರೆ ಮತ್ತು ರಾಣಿ ಮೇರಿ ಉಪಾಹಾರಕ್ಕೆ ಕರೆದಾಗ ಆತನು ಯಾವ ವಸ್ತ್ರ ಧರಿಸುವನೋ ಎಂದು ಇಂಗ್ಲೆಂಡೆಲ್ಲಾ ಕುತೂಹಲದಿಂದ ಕಾದಿತ್ತು. ಆತ ಯಥಾ ಪ್ರಕಾರ, ತುಂಡು ಬಟ್ಟೆ, ಪಾದುಕೆ, ಶಾಲು ಮತ್ತು ಜೋತಾಡುವ ತನ್ನ ಗಡಿಯಾರದೊಡನೆ ಹೋದನು. ಬಟ್ಟೆಗಳು ಸಾಕೇ ಎಂದು ಯಾರೋ ವಿಚಾರಿಸಲು ಗಾಂಧಿ, "ನಮ್ಮಿಬ್ಬರಿಗೂ ಸಾಕಾಗುವಷ್ಟು ಬಟ್ಟೆಯನ್ನು ದೊರೆಯೇ ಧರಿಸಿದ್ದರು," ಎಂದು ಹೇಳಿದರು.

ಆತ ಸುಖವಾಗಿದ್ದರು. ಲಾರ್ಡ್ ಇರ್ವಿನ್, ಯುದ್ಧಕಾಲದ ಮುಖ್ಯ ಮಂತ್ರಿ ಡೇವಿಡ್ ಲಾಯ್ಡ್ ಜಾರ್ಜ್, ಕ್ಯಾಂಟರ್ ಬರಿಯ ಆರ್ಚ್ ಬಿಷಪ್, ಫೀಲ್ಡ್ ಮಾರ್ಷಲ್ ಸ್ಮಟ್ಸ್, ಬರ್ನಾರ್ಡ್ ಷಾ ಮುಂತಾದ ಅನೇಕರೊಡನೆ ಮಾತುಕಥೆ ನಡೆಸಿದರು. ತಾನು ಪೂನಾ ಸೆರೆಮನೆಯಲ್ಲಿದ್ದಾಗ ತನ್ನ ಹೊಟ್ಟೆ ಶಸ್ತ್ರಚಿಕಿತ್ಸೆ ಮಾಡಿದ ಕರ್ನಲ್ ಮ್ಯಾಡಕ್ಕರನ್ನು ನೋಡಿ ವಂದನೆ ಸಲ್ಲಿಸಲು ರೀಡಿಂಗಿನ ಬಳಿ ಹಳ್ಳಿಗೆ ಹೋಗಿ ಬಂದರು. ಆತನನ್ನು ನೋಡಲು ವಿನ್‌ಸ್ಟನ್ ಚರ್ಚಿಲ್ ನಿರಾಕರಿಸಿದರು.

ಅನೇಕ ಸಭೆಗಳಲ್ಲಿ ಮಾತಾಡಿ, ಎರಡು ವಾರಾಂತ್ಯಗಳನ್ನು ಆಕ್ಸ್‌ಫರ್ಡ್‌ನಲ್ಲಿ ಕಳೆದರು. ಎಲ್ಲಾ ಕಡೆಯೂ, ಇಂಡಿಯಾದ ಸ್ವಾತಂತ್ರ್ಯ ಎಂಬುದರ ಅರ್ಥವನ್ನು ವಿವರಿಸಲು ಪ್ರಯತ್ನ ಪಟ್ಟರು. ಇಂಡಿಯಾವನ್ನು ಚಕ್ರಾಧಿಪತ್ಯದಿಂದ ಬೇರ್ಪಡಿಸಬೇಕು; ಬ್ರಿಟಿಷ್ ಜನಾಂಗದಿಂದಲ್ಲ. ಹಾಗಾದರೆ ಮಾತ್ರ ಇಂಡಿಯಾಕ್ಕೆ ಲಾಭ. ಚಕ್ರವರ್ತಿಯ ಅಧಿಕಾರ ಹೋಗಬೇಕು. ಬ್ರಿಟನ್ನಿನ ಸುಖದುಃಖಗಳಲ್ಲಿ ಸಮಭಾಗಿಯಾಗಿ ಅದರ ಸ್ವತಂತ್ರ ಒಳರಾಷ್ಟ್ರಗಳೊಡನೆ ಸರಿಸಮವಾಗಿ ನಿಲ್ಲಬೇಕೆಂಬ ಆಸೆ ನನಗಿದೆ. ಆದರೆ ಸರಿಸಮಾನತೆ ಮುಖ್ಯ. ೧೯೪೮ ರಲ್ಲಿ ಸ್ವತಂತ್ರ ಇಂಡಿಯಾ ಬ್ರಿಟಿಷ್ ಕಾಮನ್ವೆಲ್ತಿನಲ್ಲಿ ಪಡೆದ ಸ್ಥಾನವನ್ನು ಆತನು ಅಸಾಧಾರಣ ಭವಿಷ್ಯತ್ ಜ್ಞಾನದಿಂದ ವರ್ಣಿಸುತ್ತಿದ್ದನು.

ಅದಕ್ಕೂ ಮುಂದೆ ಸಾಗಿ ತನ್ನ ಅನೇಕ ಹಿಂಬಾಲಕರ ಅರಿವಿಗೆ ಬರದೆ ಇದ್ದುದನ್ನೂ ಕಂಡನು. “ಸ್ವತಂತ್ರ ಪ್ರತ್ಯೇಕತೆ ಗುರಿಯಲ್ಲ, ಅದು ಸ್ವಂತ ಇಚ್ಛೆಯಿಂದ ಪರಸ್ಪರ ಅವಲಂಬನೆಯಾಗಿರಬೇಕು,” ಎಂದನು. ಸ್ವಾತಂತ್ರ್ಯ ಹೊಸದಾಗಿ ಪಡೆದ ವಸಾಹತುಗಳಿಗೆ ಆ ಹೊಸ ಸ್ವಾತಂತ್ರ್ಯದಲ್ಲಿ ಅತ್ಯಭಿಮಾನ, ಅದು ಜೀವನಸಾಮರ್ಥ್ಯ ಹೊಂದಿದೆಯೆಂದು ಭಾವಿಸುತ್ತಾರೆ. ಆದರೆ ಪ್ರಕೃತಿನಿಯಮ, ಪ್ರೇಮದಲ್ಲಿ, ಸ್ನೇಹದಲ್ಲಿ, ಪ್ರಗತಿಯಲ್ಲಿ, ನೆಮ್ಮದಿಯಲ್ಲಿ, ಸೃಷ್ಟಿಶಕ್ತಿಯುಳ್ಳ ಅವಲಂಬನೆ.

ಆತನ ಸರಳತೆ, ವಿಶ್ವಾಸಗಳಿಂದ ಎಲ್ಲರೂ ಗೆಳೆಯರಾದರು. ಆತನ ವಿದೇಶೀ ವಸ್ತ್ರ ಬಹಿಷ್ಕಾರದಿಂದ ಕೆಲಸ ಕಳೆದುಕೊಂಡಿದ್ದ ಕಾರ್ಮಿಕರ ಗೂಡಾದ ಲಂಕಾಷೈರಿಗೆ ಕೂಡ ಹೋದನು. ಬಟ್ಟೆಗಿರಿಣಿ ಕಾರ್ಮಿಕರ ಸಭೆಯಲ್ಲಿ ಒಬ್ಬಾತ, “ನಾನೂ ಕೆಲಸ ಕಳೆದುಕೊಂಡವನೇ. ಆದರೆ ನಾನು ಭಾರತೀಯನಾಗಿದ್ದರೆ ಗಾಂಧಿಯ ಮಾತನ್ನು ಒಪ್ಪುತ್ತಿದ್ದೆ,” ಎಂದನು. ಡಾರ್ವೆನ್‌ನಲ್ಲಿ ಗ್ರೀನ್‌ಫೀಲ್ಡ್ ಮಿಲ್ಲಿನ ಹೊರಗಡೆ ತೆಗೆದ ಫೋಟೋ ಒಂದರಲ್ಲಿ ಗಾಂಧಿ ಕತ್ತಿನಿಂದ ಮೊಣಕಾಲಿನವರೆಗೆ ಖಾದಿಬಟ್ಟೆ ಸುತ್ತಿಕೊಂಡು ನಿಂತಿದ್ದಾರೆ. ಕೂಗುತ್ತಾ, ಚಪ್ಪಾಳೆ ತಟ್ಟುತ್ತಾ, ಹೆಂಗಸರು ಆತನನ್ನು ಸುತ್ತುವರಿದು ನಿಂತಿದ್ದಾರೆ. ಒಬ್ಬಾಕೆ ಆತನ ಕೈಹಿಡಿದು ನಿಂತಿದ್ದಾಳೆ. ತಾನೇ ನೋಯಿಸಿದವರ ಪ್ರೀತಿಯನ್ನೂ ಗಳಿಸುವ ಶಕ್ತಿ ಆತನಿಗಿತ್ತು.

ಲಂಡನ್ನಿನಲ್ಲಿ ನೆರೆದಿದ್ದ ಸಭೆಯೊಂದನ್ನುದ್ದೇಶಿಸಿ, "ನನ್ನ ಕೆಲಸ ಸಮ್ಮೇಳನದ ಹೊರಗಿದೆ. ಇದೇ ನಿಜವಾದ ಗುಂಡುಮೇಜಿನ ಸಮ್ಮೇಳನ. ಇಲ್ಲಿ ನಾವು ಬಿತ್ತುತ್ತಿರುವ ಬೀಜ ಬ್ರಿಟಿಷ್ ಅಂತರಾತ್ಮವನ್ನು ಕರಗಿಸಿ, ಮನುಷ್ಯರು ಪಶುಗಳಾಗದಂತೆ ಕಾಪಾಡಬಹುದು," ಎಂದನು.

ಮಹಾತ್ಮ ಅನೇಕಬಾರಿ ರಾತ್ರಿ ಎರಡು ಘಂಟೆಗೆ ಮಲಗಿ, ಪ್ರಾರ್ಥನೆಗಾಗಿ ಮೂರುಮುಕ್ಕಾಲು ಘಂಟೆಗೆ ಎದ್ದು ಕಾಗದಗಳನ್ನು ಬರೆದು, ಪತ್ರಿಕೆಗಳನ್ನೋದಿ, ಪುನಃ ಐದರಿಂದ ಆರರವರೆಗೆ ವಿಶ್ರಾಂತಿ ತೆಗೆದುಕೊಂಡು ಪುನಃ ಮರುದಿನ ರಾತ್ರಿ ಒಂದು ಘಂಟೆಯುವರೆಗೂ ವಿಶ್ರಾಂತಿಯೇ ಇಲ್ಲದೆ ಇರುತ್ತಿದ್ದರೆಂದು ಮಹದೇವ ದೇಸಾಯಿ ದಿನಚರಿ ಪುಸ್ತಕದಲ್ಲಿ ಬರೆದಿದ್ದಾರೆ. ಸಮ್ಮೇಳನ ನಡೆಯುತ್ತಿದ್ದಾಗ ನಡುವೆ ಸ್ವಲ್ಪ ಸ್ವಲ್ಪ ಆತನು ತೂಕಡಿಸುತ್ತಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ. ಅದಕ್ಕೆ ಆತನು ಹೆಚ್ಚು ಗಮನ ಕೊಡಲಿಲ್ಲ.

ಆ ಸಮ್ಮೇಳನ ಮುರಿದುಬೀಳಲೇಬೇಕಾಗಿತ್ತು. ಬ್ರಿಟನ್ನಿನ ಸದಸ್ಯರಲ್ಲೊಬ್ಬನಾದ ಲಾರ್ಡ್ ರೀಡಿಂಗ್ ಬ್ರಿಟಿಷರ ಉದ್ದೇಶವನ್ನು ಒಂದು ವಾಕ್ಯದಲ್ಲಿ ಹೇಳಿದನು. "ನಾವು ಇಂಡಿಯಾದ ಅಭಿಪ್ರಾಯಕ್ಕೆ ಮನ್ನಣೆ ಕೊಡಲು ಪ್ರಯತ್ನಿಸಿದರೂ ನಮ್ಮ ಸ್ಥಾನಮಾನಗಳನ್ನು ಬಿಟ್ಟುಕೊಡಕೂಡದು". ಇಂಡಿಯಾದ ಸ್ವಾತಂತ್ರ್ಯದಾಹದ ಅದಮ್ಯಶಕ್ತಿ, ಬ್ರಿಟನ್ನಿನ ಇಂಡಿಯಾ ಬಿಡಕೂಡದೆಂಬ ನಿಶ್ಚಲ ಆಸೆಯನ್ನೆದುರಿಸಬೇಕಾಗಿತ್ತು. ಇದರಿಂದ ಒಪ್ಪಂದ ಅಸಾಧ್ಯವಾಗಿತ್ತು.

ಗಾಂಧಿಗೆ ಇಂಗ್ಲೆಂಡಿನಲ್ಲಿ ಕಾವಲಿಗಾಗಿ ಇಬ್ಬರು ಸ್ಕಾಟ್ಲೆಂಡ್‌ಯಾರ್ಡ್ ಪತ್ತೇದಾರರನ್ನು ಬ್ರಿಟಿಷ್ ಸರ್ಕಾರ ನಿಯೋಗಿಸಿತ್ತು. ಅವರು ಎತ್ತರವಾಗಿ, ಒಳ್ಳೆ ರಾಕ್ಷಸರಂತಿದ್ದು, ಸಾಧಾರಣವಾಗಿ ರಾಜಮಹಾರಾಜರ ಕಾವಲಿಗಿರುತ್ತಿದ್ದವರು. ಅವರಿಗೆ ಈ "ಪುಟ್ಟಮನುಷ್ಯ"ನಲ್ಲಿ ವಿಶ್ವಾಸ ಹುಟ್ಟಿತು. ಎಲ್ಲಾ ಅಧಿಕಾರಿಗಳಂತೆ ಗಾಂಧಿ ಅವರನ್ನು ಉಪೇಕ್ಷೆಮಾಡಿ ದೂರವಾಗಿಟ್ಟಿರಲಿಲ್ಲ. ಅವರೊಡನೆ ರಾಜಕೀಯ ವೃತ್ತಾಂತಗಳನ್ನು ಮಾತನಾಡಿ, ಅವರ ಮನೆಗಳಿಗೂ ಹೋಗಿ ಬಂದನು. ಇಂಗ್ಲೆಂಡು ಬಿಟ್ಟುಹೋಗುವ ಮೊದಲು ಅವರಿಬ್ಬರೂ ತನ್ನೊಡನೆ ಇಟಲಿಯ ಬ್ರಿಂಡಿಸಿಯುವರೆಗೂ ಬಂದು ಕಳುಹಿಸಿ

ಕೊಡಬೇಕೆಂದು ಕೇಳಿದನು. ಅವರ ಯಜಮಾನ ಏಕೆಂದು ಕೇಳಲು, "ಅವರೆಲ್ಲಾ ನಮ್ಮ ಸಂಸಾರಕ್ಕೆ ಸೇರಿದವರು; ಆದುದರಿಂದ", ಎಂದು ಗಾಂಧಿ ಉತ್ತರವಿತ್ತನು.

ಇಂಡಿಯಾದಿಂದ ಅವರಿಬ್ಬರಿಗೂ "ಎಂ. ಕೆ. ಗಾಂಧಿಯಿಂದ ಪ್ರೀತಿ ಪುರಸ್ಸರವಾಗಿ," ಎಂದು ಕೆತ್ತಿಸಿದ ಗಡಿಯಾರಗಳನ್ನು ಕಳುಹಿಸಿಕೊಟ್ಟನು.

**೧೯. ದೇವರ ಮಕ್ಕಳು.**

ಡಿಸೆಂಬರ್ ೨೮ರಲ್ಲಿ ಬೊಂಬಾಯಲ್ಲಿ ಹಡಗಿಳಿದಾಗ, ಅಲ್ಲಿ ಸೇರಿದ್ದ ಅಗಾಧ ಜನಸಂದಣಿಗೆ ಗಾಂಧಿ, "ನಾನು ಬರಿಗೈಯ್ಯಲ್ಲಿ ಹಿಂದಿರುಗಿದ್ದೇನೆ," ಎಂದು ಹೇಳಿದರು. ಸುಭಾಷ್‌ಚಂದ್ರಬೋಸ್ ಕಟುವಾಗಿ "ಆತನಿಗೆ ಜನ ಸಲ್ಲಿಸಿದ ವಿಶ್ವಾಸದ ಸ್ವಾಗತವನ್ನು ನೋಡಿದರೆ ಮಹಾತ್ಮ ಅಂಗೈಯ್ಯಲ್ಲಿ ಸ್ವರಾಜ್ಯ ತಂದಹಾಗಿತ್ತು," ಎಂದನು. ಸತ್ಯಕ್ಕೆ ಚ್ಯುತಿಯಿಲ್ಲದೆ, ಅಪಾರ ವಿಶ್ವಾಸ ಗಳಿಸಿ ಆತನು ಹಿಂದಿರುಗಿದ್ದನು. ಆತನು, "ನಾನು ಇಂಗ್ಲೆಂಡು ಯೂರೋಪುಗಳಲ್ಲಿ ಕಳೆದ ಮೂರು ತಿಂಗಳಲ್ಲಿ ನನಗೆ ಪೂರ್ವಪಶ್ಚಿಮಗಳಿಗೆ ಸಂಬಂಧವಿಲ್ಲವೆಂಬ ಅಭಿಪ್ರಾಯವೆಂದೂ ಬರಲಿಲ್ಲ. ಮಾನವ ಸ್ವಭಾವ ಎಲ್ಲಿರಲಿ, ಒಂದೇ, ಎಂಬ ಅಭಿಪ್ರಾಯ ಖಚಿತವಾಯಿತು, ಜನರನ್ನು ನಂಬಿಕೆ ವಿಶ್ವಾಸಗಳಿಂದ ಕಂಡರೆ ಅದರ ಹತ್ತರಷ್ಟು ನಂಬಿಕೆ ವಿಶ್ವಾಸಗಳು ನಿಮಗೆ ದೊರಕುತ್ತವೆ," ಎಂದನು.

ಸರಿಯಾಗಿ ಒಂದು ವಾರದನಂತರ ಆತನು ಸೆರೆಮನೆ ಸೇರಿದನು. ಇರ್ವಿನ್ ಸ್ಥಾನದಲ್ಲಿ ಲಾರ್ಡ್ ವಿಲಿಂಗ್‌ಡನ್ ವೈಸರಾಯಾಗಿ ಬಂದಿದ್ದನು. ೧೯೩೧ರ ಅಕ್ಟೋಬರಿನಲ್ಲಿ, ಇಂಗ್ಲೆಂಡಿನಲ್ಲಿ ರ್‍ಯಾಂಸೆ ಮ್ಯಾಕ್ಡೊನಾಲ್ಡ್ ಮುಖ್ಯ ಮಂತ್ರಿಯಾಗಿ ಹೊಸ ಸರ್ಕಾರ ಬಂದಿತ್ತು. ಆದರೆ ಸಂಪ್ರದಾಯ ಪಕ್ಷದವರು ಮುಖ್ಯಸ್ಥಾನಗಳಲ್ಲಿದ್ದರು. ಸರ್ ಸಾಮ್ಯುಯಲ್ ಹೋರ್ ಇಂಡಿಯಾದ ಸೆಕ್ರೆಟರಿ ಆಫ್ ಸ್ಟೇಟ್ ಆಗಿದ್ದನು. ಕೆಲವು ವಾರಗಳಲ್ಲಿ ಬಂಗಾಳ, ಸಂಯುಕ್ತ ಪ್ರಾಂತ್ಯಗಳು, ವಾಯವ್ಯ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ರಾಜದ್ರೋಹ ಪಕ್ಷವೆಂದು ಘೋಷಿಸಲ್ಪಟ್ಟಿತು. ಸರ್ ಹ್ಯಾರಿ ಹೇಗ್, "ಕಾಂಗ್ರೆಸ್ ತನ್ನ ಅಭಿಪ್ರಾಯಗಳನ್ನು ದೇಶದಲ್ಲೆಲ್ಲಾ ಹರಡುವುದೇ ಎಂಬುದೇ ಪ್ರಶ್ನೆ," ಎಂದನು.

ಜವಾಹರ್‌ಲಾಲ್ ಮುಂತಾದ ನಾಯಕರು ಆಗಲೇ ಸೆರೆಯಲ್ಲಿದ್ದರು. ಈಗ ಗಾಂಧಿಯನ್ನು ಯರವಾಡಾ ಸೆರೆಯಲ್ಲಿಟ್ಟರು. ಅಲ್ಲಿಗೆ ಸ್ವಲ್ಪ ದಿನಗಳಲ್ಲೇ ವಲ್ಲಭಾಯಿಪಟೇಲರೂ, ಮಹದೇವ ದೇಸಾಯಿ ಬಂದರು. ಗಾಂಧಿ ವಲ್ಲಭಾಯರಿಗೆ, "ಸರ್ದಾರ್" ಎಂಬ ಬಿರುದು ಕೊಟ್ಟರು.

ಮಹಾತ್ಮ ಸೆರೆಮನೆಯ ಕಟ್ಟಳೆಗಳನ್ನು ಎಂದೂ ಮೀರುತ್ತಿರಲಿಲ್ಲ. ಅದಲ್ಲದೆ ಸೆರೆಮನೆಯಿಂದ ಯಾವ ಚಳುವಳಿಯನ್ನೂ ಮಾಡಕೂಡದೆಂದು ತನ್ನ ಮೇಲೆ ತಾನೇ ನಿರ್ಬಂಧ ಹೊರಿಸಿದ್ದನು. ರಾಜಕೀಯ ವೃತ್ತದಲ್ಲಿ ಕೆಲಸ ಮಾಡುವ ಅವಕಾಶವಿಲ್ಲದುದರಿಂದ ಸಂತನಾಗುವ ಕೆಲಸದ ಕಡೆ ಗಮನಕೊಟ್ಟನು. ವಲ್ಲಭಾಯಿ ಮತ್ತು ಮಹದೇವರೊಡನೆ ಪವಿತ್ರ ವಿಚಾರಗಳನ್ನೆಷ್ಟೋ ಚರ್ಚಿಸಿದನು. ಕೆಲವು ವೇಳೆ ಬೇರೆ ಖೈದಿಗಳೂ, ಬ್ರಿಟಿಷ್ ಕಾವಲುಗಾರರೂ, ವೈದ್ಯರೂ ಈ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು.

ಕೆಲವು ಕಾಲದ ಮೇಲೆ ಗಾಂಧಿ, ದೇವರ ವಿಚಾರದಲ್ಲೂ, ಮನುಷ್ಯನ ನಡತೆಯ ಮೇಲೂ ತನ್ನ ಅಭಿಪ್ರಾಯಗಳನ್ನು ಬರೆದಿಡಲಾರಂಭಿಸಿದನು. ಇವು "ಯರವಾಡಾ ಮಂದಿರ್," ಎಂಬ ಹೆಸರಿನ ಸಣ್ಣ ಪುಸ್ತಕ ರೂಪದಲ್ಲಿ ಪ್ರಕಟವಾದುವು. ಮಂದಿರ್ ಎಂದರೆ ದೇವಾಲಯವೆಂದು ಅರ್ಥ. ದೇವರ ಪೂಜೆ, ಆತನ ವಿಚಾರವಾಗಿ ಚರ್ಚೆ ನಡೆಯುವ ಸೆರೆಮನೆ, ದೇವಾಲಯವಾಗುವುದು. "ದೇವರಿದ್ದಾನೆ" ಎಂದು ಗಾಂಧಿ ಬರೆದನು. 'ಸತ್ಯ'ವೆಂದರೆ ನಿಜ; ಸತ್ ಎಂದರೆ ಇರುವಿಕೆ; ದೇವರು. ಆದುದರಿಂದ ಸತ್ಯವೇ ದೇವರು. "ದೇವರೊಬ್ಬನೇ ಸತ್ಯ. ಇಂದ್ರಿಯಗಳಿಂದ ಕಾಣುವುದು ಯಾವುದೂ ಶಾಶ್ವತವಲ್ಲ," ಎಂದು ಗಾಂಧಿ ಬರೆದನು.

ಗಾಂಧಿ ದೇವರ ಇರುವಿಕೆಯನ್ನು ಸಾಧಿಸಲು ಅನೇಕ ವರ್ಷಗಳು ಪ್ರಯತ್ನಿಸಿದನು. "ದೇವರ ಇರುವಿಕೆಯನ್ನು ಸ್ವಲ್ಪದೂರ ಮಾತ್ರ ಸಾಧಿಸಿ ತೋರಿಸಬಹುದು. ಜಗತ್ತಿನಲ್ಲಿ ನಿಯಮವಿದೆ; ಎಲ್ಲಾ ವಸ್ತುಗಳನ್ನೂ, ಜೀವಿಗಳನ್ನೂ ಹಿಡಿತದಲ್ಲಿಟ್ಟುಕೊಳ್ಳುವ ಒಂದು ಬದಲಿಸಲಾಗದ ಕಟ್ಟಿದೆ. ಅದು ಕುರುಡು ನಿಯಮವಲ್ಲ; ಯಾವ ಕುರುಡು ನಿಯಮವೂ ಮಾನವ

ಜೀವಿಗಳ ನಡತೆಯನ್ನು ಹಿಡಿತದಲ್ಲಿಟ್ಟುಕೊಳ್ಳಲಾರದು. ಆದುದರಿಂದ ಸಮಸ್ತ ಜೀವಿಗಳನ್ನೂ ಹಿಡಿತದಲ್ಲಿಟ್ಟುಕೊಂಡಿರುವ ಶಕ್ತಿಯೇ ದೇವರು. ಸುತ್ತಲೂ ಇರುವುದೆಲ್ಲಾ ಬದಲಾಯಿಸುತ್ತಾ, ಸಾಯುತ್ತಾ ಇದ್ದರೂ, ಆ ಬದಲಾವಣೆಯಲ್ಲಿ ಬದಲಾವಣೆಯಿಲ್ಲದ ಒಂದು ಜೀವಂತಶಕ್ತಿ ಎಲ್ಲವನ್ನೂ ಹಿಡಿತದಲ್ಲಿಟ್ಟುಕೊಂಡು ಸೃಷ್ಟಿಸಿ, ಕರಗಿಸಿ ಪುನಃ ಸೃಷ್ಟಿಸುವುದನ್ನು ಮಸಕಾಗಿ ಕಾಣುತ್ತೇನೆ. ಆ ಶಕ್ತಿಯೇ ದೇವರು. ಸಾವಿನ ನಡುವೆ ಜೀವ ಉಳಿಯುತ್ತೆ; ಸುಳ್ಳಿನ ನಡುವೆ ಸತ್ಯ ನಿಲ್ಲುತ್ತದೆ. ಕತ್ತಲೆಯಲ್ಲಿ ಬೆಳಕು ತೋರುತ್ತದೆ. ಆದುದರಿಂದ ದೇವರು ಜೀವ, ಸತ್ಯ, ಪ್ರೇಮವೆಂದು ನಾನು ತಿಳಿಯುತ್ತೇನೆ. ಆತನೇ ಪ್ರೇಮ. ಆತನು ಸರ್ವಶಕ್ತನಾದ ಭಗವಂತ.

ಆದರೆ ತನ್ನ ಚರ್ಚೆಯ ಬಲದಲ್ಲಿ ನಂಬಿಕೆಯಿಲ್ಲದೆ, "ನಂಬಿಕೆ ವಿಚಾರ ಶಕ್ತಿಯನ್ನು ಮೀರಿದುದು. ಈ ಜಗತ್ತಿನ ರಹಸ್ಯಗಳನ್ನೆಲ್ಲಾ ನಾವು ಬಿಡಿಸುವಂತಿದ್ದರೆ ದೇವರಿಗೆ ಸಮನಾಗುತ್ತಿದ್ದೆವು. ಸಮುದ್ರದ ಕಣಗಳೆಲ್ಲಾ ಸಮುದ್ರದ ಹೆಚ್ಚಳದಲ್ಲಿ ಭಾಗಿಗಳಾಗಿದ್ದರೂ, ಸಮುದ್ರವೇ ಆಗಲಾರವು"- ಹಾಗೆಯೇ ಪ್ರತಿಯೊಬ್ಬ ಮನುಷ್ಯನಿಗೂ ದೇವನ ಸ್ವಭಾವದಲ್ಲಿ ಭಾಗವಿದ್ದರೂ, ಅವನು ದೇವನಾಗಲಾರ, ದೇವರನ್ನರಿಯಲಾರ. ಜಗತ್ತನ್ನು ಒಂದು ದೈವಿಕಶಕ್ತಿ ಹಿಡಿತದಲ್ಲಿಟ್ಟುಕೊಂಡಿದೆಯೆಂದು ನಂಬಿ, ಆ ಶಕ್ತಿಯೇ ಸತ್ಯ, ಪ್ರೇಮವೆಂದು ತಿಳಿಯುವುದೊಳ್ಳೆಯದು. ದೇವರ ವಿಚಾರದಲ್ಲಿ ಗಾಂಧಿಗೆ ತೀವ್ರಾಸಕ್ತಿಯಿದ್ದರೂ, ಆತನು ಅತಿಮಾನುಷ ಅನುಭವವನ್ನೆಂದೂ ಪಡೆಯಲಿಲ್ಲ. ದೇವರು ಕಾಣಿಸಿದನೆನ್ನಲಿಲ್ಲ. ವಿದೇಶೀ ಅತೀಂದ್ರಿಯವಾದಿಗಳು, ತಮ್ಮ ವಾದಕ್ಕೆ ಸ್ವರೂಪಕೊಡಲು ಗಾಂಧಿಯೊಡನೆ ಸೇರಿದರೂ, ಆತನು ಆ ವಾದವನ್ನೆಂದೂ, ಒಪ್ಪಿಕೊಳ್ಳಲಿಲ್ಲ. "ನನಗೆ ದೇವರ ಇಚ್ಛೆಯ ವೈಯಕ್ತಿಕ ಅನುಭವವಾಗಿಲ್ಲ. ಆತನು ಪ್ರತಿದಿನ ಸಮಸ್ತ ಜೀವಿಗಳಿಗೂ ಪ್ರತ್ಯಕ್ಷನಾಗುತ್ತಾನೆ. ನಾವು ಆತನ ಕ್ಷೀಣಸ್ವರ ಕೇಳದಂತೆ ಕಿವಿಮುಚ್ಚಿಕೊಳ್ಳುತ್ತೇವೆ. ದೇವರು ಸ್ವರೂಪ ತೋರುವುದಿಲ್ಲ; ಕಾರ್ಯದಲ್ಲಿ ಕಾಣಿಸಿಕೊಳ್ಳುತ್ತಾನೆ.

ಯರವಾಡಾ ಸೆರೆಮನೆಯ ನಿಶ್ಶಬ್ದತೆಯಲ್ಲಿ ಮಹಾತ್ಮನಿಗೆ ಕೆಲಸಕ್ಕೆ ಕೈಹಾಕಬೇಕೆಂಬ ಭಗವಂತನ ಕ್ಷೀಣಧ್ವನಿ ಕೇಳಿಸಿತು. ಆದರ ಫಲಿತಾಂ

ಶವೇ ಇಂಡಿಯಾ ಆಧುನಿಕ ಚರಿತ್ರೆಯ ಅತ್ಯಂತ ಉದ್ವೇಗಪೂರಿತ ಪಕ್ಷ. "ಸೆಪ್ಟೆಂಬರ್ ೧೯೩೨ರ ಗೋಳಿಗೆ ಸಮಾನವಾದದ್ದು ಸಿಕ್ಕಬೇಕಾದರೆ ನಾವು ೨೩ ಶತಮಾನಗಳ ಹಿಂದಿನ ಅಥೆನ್ಸ್ ನಗರಕ್ಕೆ ಹೋಗಿ, ಸೆರೆಯಲ್ಲಿದ್ದ ಸಾಕ್ರಟೀಸನನ್ನು ಸ್ನೇಹಿತರು ಮುತ್ತಿ, ಸಾವಿನಿಂದ ತಪ್ಪಿಸಿಕೊಳ್ಳಬೇಕೆಂದು ಬೇಡಿದುದನ್ನು ನೆನಸಿಕೊಳ್ಳಬೇಕು. ಸಾಕ್ರಟೀಸ್ ಸೂಚನೆಗೆ ನಕ್ಕು ಆತ್ಮದ ಅಮೃತತತ್ವವನ್ನು ಉಪದೇಶಿಸಿದನು," ಎಂದು ರಾಜಗೋಪಾಲಾಚಾರಿ ಬರೆದಿದ್ದಾರೆ.

ಸಾವಿನ ಹೆದರಿಕೆಯಿಲ್ಲದೆ, ಆತ್ಮಕ್ಕೆ ಸಾವಿಲ್ಲವೆಂದು ಸ್ಥಿರವಾಗಿ ನಂಬಿ ಮಹಾತ್ಮ ತನಗೆ ಧರ್ಮವೆಂದು ತೋರಿದ ವಿಚಾರಕ್ಕಾಗಿ ಆಮರಣಾಂತ ಉಪವಾಸ ಕೈಕೊಂಡನು. ಇಂಡಿಯಾ ದೇಶದ ಅನೇಕ ನಿರ್ಭಾಗ್ಯರಲ್ಲಿ ಅತ್ಯಂತ ನಿರ್ಭಾಗ್ಯರಾದ ಅಸ್ಪೃಶ್ಯರ ವಿಚಾರವಾಗಿಯೇ ಈ ಉಪವಾಸ.

ನಿಷ್ಠನಾದ ಹಿಂದು ಅಸ್ಪೃಶ್ಯನನ್ನಾಗಲಿ, ಅವನು ಮುಟ್ಟಿದ ವಸ್ತುವನ್ನಾಗಲಿ ಮುಟ್ಟುವುದಿಲ್ಲ. ಆಕಸ್ಮಾತ್ ಮುಟ್ಟಿದರೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾನೆ. ಇಂಡಿಯಾದ ಕೆಲವು ಭಾಗಗಳಲ್ಲಿ ಅಸ್ಪೃಶ್ಯನ ನೆರಳುಕೂಡ ಅಶುದ್ಧವೆಂದು ಭಾವಿಸುತ್ತಾರೆ. ಅಸ್ಪೃಶ್ಯರು ದೇವಾಲಯದೊಳಗೆ ಪ್ರವೇಶಿಸಕೂಡದು. ಜಗತ್ತಿನ ಅತಿಕೊಳಕು ಪ್ರದೇಶಗಳಲ್ಲಿ ಅತಿಕೊಳಕು ಭಾಗಗಳಲ್ಲಿ ವಾಸಿಸುತ್ತಾರೆ; ಹಳ್ಳಿಗಳಲ್ಲಿ ಬಚ್ಚಲು ನೀರೆಲ್ಲಾ ಸೇರುವ ಕಡೆ ಆ ನೀರನ್ನೇ ಉಪಯೋಗಿಸುತ್ತಾ ವಾಸಿಸುತ್ತಾರೆ. ಊರುಭಾವಿಯನ್ನು ಅವರು ಮುಟ್ಟಿದರೆ ಅದು ಅಪರಿಶುದ್ಧವಾಗುತ್ತದೆ.

ಅಸ್ಪೃಶ್ಯರು ಹಿಂದುಗಳ ನಾಲ್ಕುವರ್ಣಗಳಾದ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರಿಂದ ಹೊರತಾದವರು. ಹಿಂದೂಸಮಾಜದ ತೀರ ಕೆಳಗಿನ ಮೆಟ್ಟಿಲಲ್ಲೂ ನಿಲ್ಲುವ ಹಕ್ಕಿಲ್ಲದೆ ಅಸ್ಪೃಶ್ಯರು ಜೀವಿಸುತ್ತಾರೆ.

ಶತಮಾನಗಳ ಕೆಳಗೆ ಜಾತಿಭೇದಗಳು ಕಸಬುಗಳನ್ನವಲಂಬಿಸಿದ್ದುವು, ಗಾಂಧಿ ವೈಶ್ಯಜಾತಿಯ ಮೋಥ ಬನಿಯರ ಪಂಗಡಕ್ಕೆ ಸೇರಿದವನು. ಬಹಳ ಕಾಲದ ಹಿಂದೆ ಗಾಂಧಿಯ ವಂಶದವರು ವ್ಯಾಪಾರಗಾರರಾಗಿದ್ದರು. ಗಾಂಧಿ ಎಂದರೆ ವ್ಯಾಪಾರಿ ಎಂದರ್ಥ. (!) ಉತ್ತಮವರ್ಣೀಯರೊಡನೆ ಕೀಳುಪಂಗಡದವರು ಸೇರದಂತೆ, ಕೀಳುಪಂಗಡದವರ ಕಸ

ಬನ್ನು ಉತ್ತಮವರ್ಗದವರು ಮಾಡದಂತೆ ಜಾತಿಪದ್ಧತಿಗಳು ಅಡ್ಡಿಯಾಗಿದ್ದವು. ಇದರಿಂದ ಎಲ್ಲಾ ಪಂಗಡದವರಿಗೂ ಆರ್ಥಿಕನೆಮ್ಮದಿಯಿತ್ತು. ಆದರೆ ವೈಯಕ್ತಿಕ ಸ್ವಾತಂತ್ರ್ಯವಿರಲಿಲ್ಲ.

ಜಾತಿಪದ್ಧತಿಗಳಿಂದ ಆರ್ಥಿಕಭದ್ರತೆಯಿದ್ದರೂ ಅದರ ಮೂಲ ರಾಜಕೀಯ, ಅದರ ಬಲ ಮತೀಯ. ಸಾವಿರಾರು ವರ್ಷಗಳ ಕೆಳಗೆ ಚರಿತ್ರೆಯ ಪ್ರಾತಃಕಾಲದ ಹಿಂದಿನ ಅಂಧಕಾರದಲ್ಲಿ ಮಧ್ಯ ಏಷ್ಯದಿಂದ ಬಂದ ಆರ್ಯರು, ಸಿಂಧೂನದಿ, ಹಿಮಾಲಯಗಳಿಂದ ಕನ್ಯಾಕುಮಾರಿಯವರೆಗೆ ಜಯಿಸಿ, ತಮ್ಮ ಆಚಾರ ಸಂಸ್ಕೃತಿಗಳನ್ನು ಪೂರ್ವನಿವಾಸಿಗಳ ಸಂಸ್ಕೃತಿಯೊಂದಿಗೆ ಉದಾರವಾಗಿ ಬೆರಸುತ್ತಾ ಹಿಂದೂಧರ್ಮವನ್ನು ಸ್ಥಾಪಿಸಿದರು. ಆದರೂ ಪೂರ್ವನಿವಾಸಿಗಳನ್ನು ತಮ್ಮ ಆರ್ಥಿಕ ಸಲಕರಣೆಗಳಾಗಿ ಮಾಡಿಕೊಂಡು, ರಾಜ್ಯಭಾರ, ಯುದ್ಧಮಾಡುವುದು ಮುಂತಾದ ಲಾಭಕರವಾದ, ಆಕರ್ಷಣೀಯ ಕೆಲಸಗಳನ್ನು ತಮಗೇ ಮೀಸಲಾಗಿಟ್ಟುಕೊಂಡರು. ಜಾತಿಪದ್ಧತಿಗಳಿಗೆ ಮತೀಯ ಮುಸುಕುಹಾಕಿ, ಬ್ರಾಹ್ಮಣರು ಅತ್ಯುತ್ತಮ ವರ್ಣವೆನ್ನಿಸಿಕೊಂಡು ಅರಸರಿಗಿಂತ ಸೇನಾಧಿಪತಿಗಳಿಗಿಂತ ಉತ್ತಮರೆನ್ನಿಸಿಕೊಂಡರು. ಜಾತಿಪದ್ಧತಿಗೆ ಅದೃಷ್ಟದ ಬಿಡಿಸಲಾಗದ ಕಟ್ಟನ್ನು ಬಿಗಿದರು. ಹಿಂದಿನ ಜನ್ಮದ ಪಾಪಪುಣ್ಯಗಳ ಫಲವಾಗಿ ಬ್ರಾಹ್ಮಣ, ಶೂದ್ರ, ಅಸ್ಪೃಶ್ಯನಾಗುವುದು ಪೂರ್ವಕೃತ ಫಲವಾದುದರಿಂದ ಜಾತಿಪದ್ಧತಿಗಳಿಗೆ ಎಲ್ಲರೂ ತಲೆಬಾಗಬೇಕು. ಆದರೆ ಈ ಜನ್ಮದ ಪುಣ್ಯಪಾಪಗಳು ಮನುಷ್ಯನ ಅಂತಸ್ತನ್ನು ಕೀಳು, ಮೇಲು ಮಾಡಬಹುದು. ದುರಾಶಾಪರನಾದ ಬ್ರಾಹ್ಮಣ ವೈಶ್ಯನಾಗಿ ಹುಟ್ಟಬಹುದು; ಧಾರ್ಮಿಕನಾದ ವೈಶ್ಯ ಬ್ರಾಹ್ಮಣನಾಗಬಹುದು; ಹೆಂಗಸು ಮುಂದಿನ ಜನ್ಮದಲ್ಲಿ ಗಂಡಸಾಗಬಹುದು. ಕೆಲವು ಹಿಂದುಗಳಿಗೆ ತಾವು ಮುಂದಿನ ಜನ್ಮದಲ್ಲೂ ಒಂದೇ ಸಂಸಾರದಲ್ಲಿ ಜನಿಸಬೇಕೆಂಬ ಆಕಾಂಕ್ಷೆ ಸಂಬಂಧಗಳು ಬದಲಾಗಬಹುದು.; ಗಂಡಹೆಂಡಿರು, ಅಣ್ಣ ತಂಗಿಯರಾಗಿ ಹುಟ್ಟಬಹುದು. ರಕ್ತಪಿಪಾಸೆಯುಳ್ಳ ಹಿಂದು ಪಶುವಾಗಿ ಹುಟ್ಟಬಹುದು.

ತಮ್ಮ ಭೀಕರ ಸ್ಥಿತಿಯಿಂದ ತಪ್ಪಿಸಿಕೊಳ್ಳಲು ಕೆಲವು ಅಸ್ಪೃಶ್ಯರು ಕ್ರೈಸ್ತ ಮುಸಲ್ಮಾನರ ಮತಗಳಿಗೆ ಸೇರಿದ್ದಾರೆ. ಆದರೆ ಐವತ್ತು, ಅರವತ್ತು

ಲಕ್ಷಜನ ಅದೃಷ್ಟಕ್ಕೆ ತಲೆಬಾಗಿ, ಪೂರ್ವಿಕರ ಪಾಪಕ್ಕೆ ಪ್ರಾಯಶ್ಚಿತ್ತವನ್ನನುಭವಿಸಿ, ಮುಂದಿನ ಜನ್ಮದಲ್ಲಿ ಉತ್ತಮಸ್ಥಿತಿಗೇರಬಹುದೆಂಬ ನಿರೀಕ್ಷೆಯಲ್ಲಿರುವರು. ಕೆಲವು ನೂರು ಜನರನ್ನು ಬಿಟ್ಟು ಮಿಕ್ಕ ಅಸ್ಪೃಶ್ಯರು ಬೀದಿ ಗುಡಿಸುತ್ತಾ, ಕಕ್ಕಸು ಶುದ್ಧಿಪಡಿಸುತ್ತಾ, ಜೋಡುಹೊಲಿಯುತ್ತಾ, ಉತ್ತಮವರ್ಣೀಯರು ಮಾಡದ ಕೆಲಸಗಳನ್ನು ಮಾಡುತ್ತ ದೂರವಾಗಿ ಜೀವಿಸುತ್ತಾರೆ. ಇಂದಿಗೂ ಆಸ್ಪತ್ರೆಯ ದಾದಿ ಮಲಪಾತ್ರೆ ಮುಟ್ಟುವುದಿಲ್ಲ; ಊಟ ತರುವ ಆಳು ನೆಲದ ಮೇಲಿರುವ ಗಾಯದ ಪಟ್ಟಿಯನ್ನು ಮುಟ್ಟುವುದಿಲ್ಲ; ಕಕ್ಕಸಿನಲ್ಲಿರುವ ಪದಾರ್ಥಗಳನ್ನು ಸೋಕುವುದಿಲ್ಲ; ಅವೆಲ್ಲಾ ಅಸ್ಪೃಶ್ಯರ ಕೆಲಸ. ಅಸ್ಪೃಶ್ಯರಲ್ಲೂ ಪಂಗಡಗಳಿವೆ. ಬೊಂಬಾಯಿಯ ಒಬ್ಬ ಧನಿಕನ ಮನೆಯಲ್ಲಿರುವ ಅಸ್ಪಶ್ಯ ಆಳುಗಳು ಕಕ್ಕಸನ್ನು ಶುದ್ಧಿ ಮಾಡುವುದಿಲ್ಲ, ಊರಿನಲ್ಲಿ ವರ್ತಮಾನ ತಿಳಿದು ತಮಗೆ ಅವಮಾನವಾದೀತೆಂಬ ಹೆದರಿಕೆ. ಊರಿನಲ್ಲಿರುವ ಇನ್ನೂ ಕೀಳು ಅಸ್ಪಶ್ಯರನ್ನು ಆ ಕೆಲಸಕ್ಕೆ ಹಿಡಿದು ತರುತ್ತಾರೆ.

೧೯ನೆಯ ಶತಮಾನ, ಅದಕ್ಕಿಂತ ಸ್ವಲ್ಪ ಮುಂಚೆ, ಅಸ್ಪೃಶ್ಯರ ವಿಚಾರದ ಕೀಳು ಅಭಿಪ್ರಾಯ ಬಿಟ್ಟು ಮಿಕ್ಕ ಔದ್ಯೋಗಿಕ ಕಟ್ಟುಗಳು ಸಡಿಲವಾಗುತ್ತಾ ಬಂದುವು. ಗಾಂಧಿಯ ತಾತ, ಮುತ್ತಾತಂದಿರು ವರ್ತಕರಾಗಿರಲಿಲ್ಲ; ಮುಖ್ಯಮಂತ್ರಿಗಳಾಗಿದ್ದರು. ಈಗ ಬ್ರಾಹ್ಮಣ ಟ್ಯಾಕ್ಸಿಡ್ರೈವರಾಗಿರಬಹುದು. (ಕೆಲವು ಪ್ರಾಂತ್ಯಗಳಲ್ಲಿ ಮಾತ್ರ ಕೃತನಾಗಿದ್ದರೆ ತಾನೇ ಉಳದೆ ಕೀಳುವರ್ಣೀಯರಿಂದ ಉಳಿತಾಯ ಮಾಡಿಸಿ ಹಣ ಕೊಡುತ್ತಾನೆ). ವೈಶ್ಯ ಸರ್ಕಾರಿ ಉದ್ಯೋಗಸ್ಥನಾಗಿರಬಹುದು; ಶಾಲಾ ಅಧ್ಯಾಪಕನಾಗಿರಬಹುದು; ಕ್ಷತ್ರಿಯ ಲೆಕ್ಕಪತ್ರ ಬರೆಯಬಹುದು.

ಆಧುನಿಕ ಆರ್ಥಿಕ ನಿರ್ಬಂಧಗಳಿಂದ ಔದ್ಯೋಗಿಕ ಕಟ್ಟಲೆಗಳು ಮುರಿದುಬೀಳುತ್ತಿದ್ದರೂ ಸಾಮಾಜಿಕ ಕಟ್ಟಲೆಗಳು ಸಡಿಲವಾಗಿಲ್ಲ. ಬ್ರಾಹ್ಮಣ ಎಷ್ಟು ಬಡವನಾಗಿರಲಿ, ಯಾವ ಉದ್ಯೋಗದಲ್ಲಿರಲಿ, ಆತನ ಮಕ್ಕಳು ಕೀಳುಜಾತಿಯವರನ್ನು ವಿವಾಹವಾಗುವಂತಿಲ್ಲ, ಅವರೊಡನೆ ಊಟಮಾಡುವಂತಿಲ್ಲ.

ಮಹಾತ್ಮನಾದ ಮೊದಲ ದಿನಗಳಲ್ಲಿ ಗಾಂಧಿಗೆ ಈ ಜಾತಿಪದ್ಧತಿ

ಗಳಲ್ಲಿ ವಿಶ್ವಾಸವಿತ್ತು. ೧೯೨೦ರಲ್ಲಿ "ಚಾತುರ್ವರ್ಣ್ಯ ಮುಖ್ಯ, ಸ್ವಾಭಾವಿಕ ವೆಂದು ನಾನು ಪರಿಗಣಿಸುತ್ತೇನೆ," ಎಂದು ಹೇಳಿದನು. ಅಕ್ಟೋಬರ್ ೬, ೧೯೨೧ ರ ಯಂಗ್ ಇಂಡಿಯಾದಲ್ಲಿ "ಆತ್ಮೋನ್ನತಿಗೆ, ವರ್ಣವರ್ಣ ಗಳಲ್ಲಿ ವಿವಾಹ, ಊಟ, ಉಪಚಾರ ಸಂಬಂಧಗಳಿಲ್ಲದಿರುವುದು ಅಗತ್ಯ" ಎಂದು ಬರೆದನು. ಹಿಂದೂಮತದ ಈ ಕಟ್ಟಳೆಗಳನ್ನು ಪ್ರತಿಪಾದಿಸಿದನೆಂಬುದು ಗಾಂಧಿಯ ಮೇಲೆ ದೊಡ್ಡ ಅಪವಾದ. ಆದರೆ ಮುಂದೆ ಕಾರ್ಯತಃ ಈ ಮಾತುಗಳಿಗೆ ವಿರುದ್ಧವಾಗಿ ಗಾಂಧಿ ನಡೆದುಕೊಂಡನು. ೧೯೩೨ ರ ನವೆಂಬರ್ ೪ ರಲ್ಲಿ "ಬೇರೆ ಬೇರೆ ಜಾತಿಗಳವರು ಊಟ, ವಿವಾಹಗಳಲ್ಲಿ ಬೆರೆಯಕೂಡದೆಂದು ಹಿಂದೂಮತ ಹೇಳುವುದಿಲ್ಲ. ಇವೆರಡು ಕಟ್ಟಳೆಗಳಿಂದ ಹಿಂದೂಸಮಾಜ ಶಿಥಿಲವಾಗುತ್ತಿದೆ," ಎಂದನು. ಹಿಂದೂಸಮಾಜವನ್ನು ಶಿಥಿಲಪಡಿಸುತ್ತಿದ್ದ ಭೇದಭಾವಗಳಿಗೆ ಬೆಂಬಲ ಕೊಡಲು ಆತ ತುಂಬಾ ವಿವೇಕಿ, ಪ್ರಾಮಾಣಿಕ.

ವೈಯಕ್ತಿಕ ಅನುಭವವೊಂದು ಆತನ ಮನಸ್ಸನ್ನು ತಿರುಗಿಸಿರಬಹುದು. ೧೯೨೭ ರಲ್ಲಿ ಗಾಂಧಿಯ ಕಿರಿಯಮಗ ದೇವದಾಸ್, ಶ್ರೀ ಸಿ. ರಾಜಗೋಪಾಲಾಚಾರಿಯವರ ಮಗಳನ್ನು ಮದುವೆಯಾಗಲು ಇಚ್ಛೆಪಟ್ಟನು. ರಾಜಗೋಪಾಲಾಚಾರಿ ಬ್ರಾಹ್ಮಣರು, ಗಾಂಧಿ ವೈಶ್ಯ. ಆದುದರಿಂದ ಗಾಂಧಿಗೆ ಈ ಪ್ರೇಮವಿವಾಹ ಇಷ್ಟವಾಗಲಿಲ್ಲ. ಅನೇಕ ವಿದ್ಯಾವಂತ ಹಿಂದುಗಳು ಈಗಲೂ ಅಭಿಪ್ರಾಯಪಡುವಂತೆ, ಗಾಂಧಿ ತಂದೆತಾಯಿಗಳು ಒಪ್ಪಿ ಮಾಡಿದ ವಿವಾಹವೇ ಪ್ರೇಮವಿವಾಹಗಳಿಗಿಂತ ಮೇಲೆಂದು ಭಾವಿಸಿದ್ದನು. ಆದರೆ ದೇವದಾಸ್ ಮತ್ತು ಆ ಹುಡುಗಿ ಹಠಹಿಡಿದುದರಿಂದ ಇಬ್ಬರ ತಂದೆಗಳೂ, ಐದುವರ್ಷಗಳಾದನಂತರವೂ ಅವರಿಗೆ ಅದೇ ಇಚ್ಛೆಯಿದ್ದರೆ ಮದುವೆಯಾಗಬಹುದೆಂದು ಒಪ್ಪಿದರು. ಇಬ್ಬರೂ ಕಷ್ಟದಿಂದ ಕಾದಿದ್ದು ೧೯೩೩ ರ ಜೂನ್ ೧೬ ರಲ್ಲಿ ಹಿರಿಯರ ಆಶೀರ್ವಾದದೊಡನೆ ಪೂನಾದಲ್ಲಿ ಮದುವೆಯಾದರು.

ಮುಂದೆ ವಿವಾಹ ಅಂತರ್ಜಾತೀಯವಲ್ಲದಿದ್ದರೆ ಗಾಂಧಿ ಅಂತಹ ಮದುವೆಗಳಿಗೆ ಹೋಗುತ್ತಿರಲಿಲ್ಲ. ಸಂಪ್ರದಾಯ ಬಿಟ್ಟು, ದೂರ ದೂರ ಸರಿದು, ೧೯೪೬ರ ಜನವರಿ ೪ರಲ್ಲಿ ಹಿಂದೂಸ್ಥಾನ್ ಸ್ಟಾಂಡರ್ಡ್‌ನಲ್ಲಿ

"ಇಬ್ಬರಲ್ಲಿ ಒಬ್ಬರಾದರೂ ಅಸ್ಪೃಶ್ಯರಾಗಿರದ ಮದುವೆಗಳಿಗೆ ಸೇವಾಗ್ರಾಮದಲ್ಲಿ ಅವಕಾಶವಿಲ್ಲ," ಎಂದು ಬರೆದನು. ಮೊದಲು ಅಂತರ್ಜಾತೀಯ ವಿವಾಹಗಳಿಗೆ ಸಮ್ಮತಿ ಕೊಡದಿದ್ದು, ಅನಂತರ ಅವೇ ಸರಿಯೆಂದು ಹೇಳಿ ಕಡೆಗೆ ಅಸ್ಪೃಶ್ಯರೊಡನೆ ವಿವಾಹವನ್ನೂ ಆಶೀರ್ವದಿಸಿದನು. ಆದರೂ ಆತನ ಹಿಂದೂ ಹಿಂಬಾಲಕರ ಸಂಖ್ಯೆ ಹೆಚ್ಚುತ್ತಿದ್ದುದು ಗಾಂಧಿಯ ಮಾಯೆ, ಹಿಂದುಗಳ ವಿಶಾಲಮನೋಭಾವ. ಗಾಂಧಿಯ ವಿವೇಕ, ಜಾತಿ ಪದ್ಧತಿಯ ಕೆಡುಕನ್ನು ತೋರಿಸಿಕೊಟ್ಟಿತು. ಆದರೆ ಅಸ್ಪೃಶ್ಯತೆಗೆ ವಿರೋಧ, ಚಿಕ್ಕಂದಿನಿಂದಲೇ ಕಾಣಿಸಿಕೊಂಡ ಭಾವನಾವಿಶೇಷ. ಚಾರ್ಲ್ಸ್ ಫ್ರೀರ್ ಆಂಡ್ರೂಸ್‌ಗೆ ಬರೆಯುತ್ತಾ, "ನಾವು ಯಾರಾದರೂ ಪರಯನನ್ನು ಮುಟ್ಟಿದರೆ ನಮ್ಮ ತಾಯಿ ಸ್ನಾನ ಮಾಡಿಸುತ್ತಿದ್ದರೆಂದು ನಾನು ಹಾಸ್ಯಮಾಡುತ್ತಿದ್ದೆ," ಎಂದರು. ಆತನ ಪ್ರೀತಿಯ ಪುತಲೀಬಾಯಿ ಬೇಡವೆಂದರೂ ಒಬ್ಬ ಅಸ್ಪೃಶ್ಯ ಹುಡುಗನೊಡನೆ ಆಟವಾಡುತ್ತಿದ್ದನು. ದಕ್ಷಿಣ ಆಫ್ರಿಕದಲ್ಲಿ ಆತನ ಕಕ್ಷಿಗಾರರು, ಸ್ನೇಹಿತರು, ಅನೇಕರು ಅಸ್ಪೃಶ್ಯರು. ಒಬ್ಬಾತನು ಮನೆಯಲ್ಲೇ ಇದ್ದನು. ೧೯೨೮ರ ಮೇ ತಿಂಗಳಲ್ಲಿ ಬೊಂಬಾಯಿಗೆ ಬಂದಾಗ ಅಸ್ಪೃಶ್ಯರ ಸ್ಥಿತಿಯನ್ನು ಸುಧಾರಿಸುವ ಸಲುವಾಗಿ ಸೇರಿದ್ದ ಸಭೆಯೊಂದಕ್ಕೆ ಹೋದನು. ಆತನ ಪರಿಚಯವನ್ನು ಸಭೆಗೆ ಯಾರೋ ಮಾಡಿಕೊಡಲು, "ಇಲ್ಲಿ ಒಬ್ಬನಾದರೂ ಅಸ್ಪೃಶ್ಯನಿದ್ದಾನೆಯೇ?" ಎಂದು ಕೇಳಿದನು. ಯಾರೂ ಇಲ್ಲವೆಂದು ತಿಳಿಯಲು ಮಾತನಾಡಲು ನಿರಾಕರಿಸಿದನು. ಸಬರ್ಮತಿಯಲ್ಲಿ ನೆಲಸುತ್ತಲೇ ಅಸ್ಪೃಶ್ಯ ದಂಪತಿಗಳನ್ನೂ, ಅವರ ಚಿಕ್ಕ ಮಗಳು ಲಕ್ಷ್ಮಿಯನ್ನೂ ಅಲ್ಲಿ ವಾಸಮಾಡಲು ಕರೆದನು. ಬೊಂಬಾಯಿ, ಅಹಮದಾಬಾದಿನ ಧನಿಕರು ಆಶ್ರಮಕ್ಕೆ ಹಣ ಕೊಡಲು ನಿರಾಕರಿಸಿದರು. ಹೆದರದೆ ಗಾಂಧಿ, ತಾನೂ ಅಸ್ಪೃಶ್ಯರ ನಡುವೆ ಗುಡಿಸಿಲಿನಲ್ಲಿರುವುದಾಗಿ ಹೇಳಿದನು. ಆದರೆ ಒಂದು ಪ್ರಾತಃಕಾಲ ಒಬ್ಬಾತ (ಮುಂದೆ ಆತನು ಅಹಮದಾಬಾದಿನ ದೊಡ್ಡ ಬಟ್ಟೆ ವ್ಯಾಪಾರಿ ಅಂಬಾಲಾಲ್ ಸಾರಾಭಾಯ್ ಎಂದು ತಿಳಿಯಿತು) ಕಾರಿನಲ್ಲಿ ಬಂದು ಗಾಂಧಿಯ ಕೈಯಲ್ಲಿ ೧೩,೦೦೦ ರೂಪಾಯಿಗಳನ್ನಿಟ್ಟು ಹೊರಟು ಹೋದನು. ಆಶ್ರಮದ ಹೆಂಗಸರು ಆ ಅಸ್ಪೃಶ್ಯ ಹೆಂಗಸು ಅಡಿಗೆ ಮನೆಗೆ

ಬರಕೂಡದೆಂದು ವಿರೋಧಿಸಿದರು. ಹಿಂದುಗಳಿಗೆ ಊಟದ ವಿಚಾರ ಬಹು ಮುಖ್ಯ ; ಅಸ್ಪೃಶ್ಯ ಸ್ತ್ರೀ ಅಡಿಗೆ ಮನೆಯೊಳಕ್ಕೆ ಬಂದರೆ ಅಡಿಗೆ ಯೆಲ್ಲಾ ಅಪವಿತ್ರವಾಯಿತೆಂದು ಅವರ ಭಾವನೆ. ಗಂಡನ ವಿಚಿತ್ರ ವರ್ತನೆ ಯೆಲ್ಲಾ ಅಭ್ಯಾಸವಾಗಿದ್ದ ಕಸ್ತೂರಿಬಾಯಿಗೆ ಕೂಡ ಇದು ಒಪ್ಪಲಿಲ್ಲ. ಆತನು ಆಕೆಯ ವಿವೇಕ, ಔದಾರ್ಯಗಳಿಗೆ ಮೊರೆಯಿಟ್ಟನು. ಆದರೆ ಅಸ್ಪೃಶ್ಯತೆಯಲ್ಲಿ ನಂಬಿಕೆ, ವರ್ಣದ್ವೇಷದಂತೆ, ಮಿದುಳಿನ ಯಾವುದೋ ಭಾಗದಲ್ಲಿ ಅಡಗಿದ್ದು, ವಿವೇಕ ದಯೆಗಳಿಗೆ ಬಗ್ಗುವುದಿಲ್ಲ. ಇದು ಪಾಪ ವಾದರೆ ಅದು ತನ್ನ ಹೊಣೆಯೆಂದೂ, ಹಿಂದೂ ಸ್ತ್ರೀ ಪತಿಯ ಮಾತಿಗೆ ವಿರುದ್ಧವಾಗಿ ನಡೆಯಕೂಡದೆಂದೂ ಗಾಂಧಿ ಹೇಳಿದನು. ಇದು ಆಕೆಗೆ ಅರ್ಥವಾಗುವ ಮಾತು, ಆಶ್ರಮದ ಮಿಕ್ಕ ಹೆಂಗಸರೂ ಆಕೆಯೊಡನೆ ಒಪ್ಪಿದರು. ಇದರಿಂದ ತೊಂದರೆ ತಪ್ಪಲಿಲ್ಲ. ಲಕ್ಷ್ಮಿಯನ್ನು ತನ್ನ ಮತ್ತು ಕಸ್ತೂರಿಬಾಯಿಯ ಮಗಳಾಗಿ ದತ್ತು ತೆಗೆದುಕೊಳ್ಳುವುದಾಗಿ ಗಾಂಧಿ ಹೇಳಿದನು. ಪೂರ್ಣ ಅಕ್ಷರ ಜ್ಞಾನವಿಲ್ಲದ ದೈವಭಕ್ತಳಾದ ಕಸ್ತೂರಿ ಬಾಯಿಗೆ ಅರ್ಥವಾಗಲಿಲ್ಲ. ಗಾಬರಿಯಾಯಿತು. ಆದರೆ ಅನೇಕ ವಿಧ ಗಳಲ್ಲಿ ಗಂಡನಿಗಿಂತ ಆಕೆಯದು ಸಾಧುಯೋಗಶಕ್ತಿ. ಆತನು ಇಂದ್ರಿಯಾ ಪೇಕ್ಷೆಯನ್ನು ಬಿಟ್ಟಮೇಲೆ ಆಕೆ ಆತನನ್ನೇ ಗುರುವಾಗಿ ಸ್ವೀಕರಿಸಿದ್ದಳು. ಈ ದೈವಭಕ್ತನನ್ನು ಪ್ರಶ್ನಿಸಲು ತಾನು ಯಾರು ? ಆದರೂ ಅಸ್ಪೃಶ್ಯ ರೆಂದರೆ ಹೇಸಿಗೆ ಆಕೆಯನ್ನು ಬಿಡದೆ ಬಾಧಿಸಿತು.

ಗಾಂಧಿಯೊಡನೆ ಊಟಮಾಡಿ ಮಾತನಾಡುವುದು ಗೌರವವೆಂದು ಎಷ್ಟೋ ಜನ ಉತ್ತಮ ಜಾತಿಯವರು ಭಾವಿಸಿದರು. ಕೆಲವರು ಅನಂತರ ಪ್ರಾಯಶ್ಚಿತ್ತ ಮಾಡಿಕೊಂಡರೂ ಎಲ್ಲರೂ ಇಂತಹ ಆಷಾಢಭೂತಿಗಳಾಗಿರ ಲಿಲ್ಲ. ಅಸ್ಪೃಶ್ಯತೆಯ ಶಾಪ ಕಡಮೆಯಾಯಿತು. ಆದರೆ ಜನ ಸಾಮಾನ್ಯ ರಿಗೆ ಗಾಂಧಿಯಲ್ಲಿ ಗೌರವವಿದ್ದರೂ ಅಸ್ಪೃಶ್ಯರು ಹೀನರೆಂಬ ಭಾವನೆ ಹೋಗಲಿಲ್ಲ.

ಅಪವಿತ್ರವೆಂದು ಅಸ್ಪೃಶ್ಯತೆಯ ಪದ್ಧತಿಯನ್ನನುಸರಿಸಿದರೆ, ಅದು ಅನುಸರಿಸುವವರನ್ನೂ, ಅವರ ದೇಶವನ್ನೂ ಅಪವಿತ್ರಗೊಳಿಸುತ್ತದೆ. ಅವ ಮಾನ ಪಡಿಸುವವರು, ಹೊಂದುವವರೊಡನೆ ನೈತಿಕವಾಗಿ, ಆರ್ಥಿಕವಾಗಿ,

ಸಾಮಾಜಿಕವಾಗಿ ಕೀಳ್ಮಟ್ಟಕ್ಕೆ ಇಳಿಯುವರು. ಹಿಂದೂ ಧರ್ಮವನ್ನು ಅಸ್ಪೃಶ್ಯರೆಲ್ಲರೂ ಬಿಟ್ಟುಹೋದರೆ ಹಿಂದುಗಳ ಅಂತರಾತ್ಮಕ್ಕೆ ಕೆಡುಕೆನ್ನಿಸುತ್ತದೆ; ಅಸ್ಪೃಶ್ಯರಿಗೇನೂ ಒಳ್ಳೆಯದಾಗುವುದಿಲ್ಲ. ಅಂತಹ ಸೋಲನ್ನೊಪ್ಪಿಕೊಳ್ಳುವುದಕ್ಕಿಂತ ಗಾಂಧಿ, "ಹಿಂದೂ ಅಂತರಾತ್ಮವನ್ನು ಎಬ್ಬಿಸಿ ಧರ್ಮಕಾರ್ಯಮಾಡುವಂತೆ," ಪ್ರೇರಿಸಲು ಅನುವಾದನು. ಕೆಲವು ನಾಯಕರು ಅವರು ಬಿಟ್ಟುಹೋದರೆ ಒಳ್ಳೆಯದೆಂದು ಅಭಿಪ್ರಾಯಪಟ್ಟರೂ, ಮತದಲ್ಲಿ ವಿಶ್ವಾಸವಿದ್ದ ಅಸ್ಪೃಶ್ಯರು ಮುಂದಿನ ಜನ್ಮದಲ್ಲಾದರೂ ಸಿಕ್ಕುವ ಒಳ್ಳೆಯದನ್ನು ಬಿಟ್ಟುಕೊಡಲು ಸಿದ್ಧರಾಗಿರಲಿಲ್ಲ. ಗಾಂಧಿ ಇದಕ್ಕಾಗಿ ಉಪವಾಸ ಕೈಗೊಂಡನು.

ಈ ನಾಟಕದಲ್ಲಿ .ಮುಖ್ಯ ಪಾತ್ರಗಳು ಮಹಾತ್ಮ ಮತ್ತು ಅಂಬೇಡ್ಕರ್. ಅಸ್ಪೃಶ್ಯರ ನಾಯಕ ಡಾಕ್ಟರ್ ಭೀಮರಾವ್ ರಾಮ್‌ಜಿ ಅಂಬೇಡ್ಕರ್ ಶಕ್ತಿಯುತವಾದ ಶರೀರವನ್ನೂ, ಹಠಸ್ವಭಾವವನ್ನೂ ಹೊಂದಿದ್ದನು. ಆತನ ತಂದೆ, ತಾತ, ಬ್ರಿಟಿಷ್ ಸೈನ್ಯದಲ್ಲಿ ಹೆಸರು ಗಳಿಸಿದ್ದರು. ಅವರ ಮೂಲಕ ಅಂಬೇಡ್ಕರ್‌ಗೆ ಬರೋಡದ ಗಾಯಕವಾಡರ ಪರಿಚಯವಾಗಲು ಆತನು ಈತನನ್ನು ನ್ಯೂಯಾರ್ಕಿನ ಕೊಲಂಬಿಯಾ ಯೂನಿವರ್ಸಿಟಿಯ ನ್ಯಾಯಶಾಸ್ತ್ರ ಶಾಲೆಗೆ ವೇತನಕೊಟ್ಟು ಕಳುಹಿಸಿದನು. ಆತನು ಪ್ರತಿಭೆಯಿಂದ ಅಸ್ಪೃಶ್ಯರ ನಾಯಕನಾದನು. ಹಾಗೆ ೧೯೩೧ರ ಸೆಪ್ಟೆಂಬರ್– ಡಿಸೆಂಬರಿನಲ್ಲಿ ನಡೆದ ಎರಡನೆಯ ಗುಂಡುಮೇಜಿನ ಸಮ್ಮೇಳನಕ್ಕೆ ಹೋಗಿ, ಅಸ್ಪೃಶ್ಯರಿಗೇ ಪ್ರತ್ಯೇಕ ಪ್ರಾತಿನಿಧ್ಯ ಬೇಕೆಂದೂ ಅಥವಾ ನ್ಯಾಯಾಂಗ ಸಭೆಯ ಹಿಂದೂ ಪಂಗಡದಲ್ಲಿ ಕೆಲವು ಸ್ಥಾನಗಳನ್ನಾದರೂ ಅವರಿಗೆ ಮೀಸಲಾಗಿಡಬೇಕೆಂದೂ ಬೇಡಿದನು. ಗಾಂಧಿ ಅದು ಪ್ರತ್ಯೇಕತೆಯನ್ನುಂಟು ಮಾಡುವುದೆಂದು ವಿರೋಧಿಸಿದನು.

ಲಂಡನ್ನಿನ ಅಧಿಕಾರ ವೃತ್ತಗಳಲ್ಲಿ ಈ ವಿಚಾರ ಚರ್ಚಿಸಲ್ಪಟ್ಟು ಮುಸಲ್ಮಾನರಿಗೆ ಬೇರೆ ಚುನಾವಣೆಯ ಅಧಿಕಾರಕೊಟ್ಟುದಲ್ಲದೆ, "ಹಿಂದುಳಿದ ಜನಾಂಗ," ಎಂದು ಅಸ್ಪೃಶ್ಯರನ್ನು ಕರೆದು ಅವರಿಗೂ ಆ ಅಧಿಕಾರ ಕೊಟ್ಟರು. (ಗಾಂಧಿ ಅವರನ್ನು ದೇವರ ಮಕ್ಕಳು, ಹರಿಜನರು ಎಂದು ಕರೆದು ತನ್ನ ಹೊಸ ವಾರಪತ್ರಿಕೆಯನ್ನು "ಹರಿಜನ್" ಎಂದು ಕರೆದನು).

೧೯೦೯ರಲ್ಲಿ ಬ್ರಿಟಿಷರು ಹಿಂದೂ ಮುಸ್ಲಿಮರಿಗೆ ಪ್ರತ್ಯೇಕ ಪ್ರಾತಿನಿಧ್ಯ ಕೊಟ್ಟಿದ್ದರು. ಇದರ ಪರಿಣಾಮವಾಗಿ, ಇಂಡಿಯಾದಲ್ಲಿ ಬ್ರಿಟಿಷ್ ರಾಜ್ಯ ವಿರುವವರೆಗೂ ಮುಸ್ಲಿಮರು ಮುಸ್ಲಿಂ ಪ್ರತಿನಿಧಿಗೆ, ಹಿಂದುಗಳು ಹಿಂದೂ ಪ್ರತಿನಿಧಿಗೆ ಮಾತ್ರ ಮತದಾನಮಾಡಬಹುದಾಗಿತ್ತು.

ಈ ಪದ್ಧತಿಯಿಂದಾದ ಕೇಡು ಎಣಿಸಲಸಾಧ್ಯ; ರಾಜಕೀಯ ಪ್ರಶ್ನೆಗಳನ್ನೆಲ್ಲಾ ಮತಭೇದಗಳಿಂದ ತೀರಿಸಬೇಕಾಗಿತ್ತು. ಇಂಗ್ಲೆಂಡು, ಅಮೆರಿಕಾ, ಫ್ರಾನ್ಸುಗಳಲ್ಲಿ ಕ್ಯಾಥೊಲಿಕ್ಕರು ಕ್ಯಾಥೊಲಿಕ್ಕರಿಗೂ, ಪ್ರಾಟೆಸ್ಟೆಂಟರು ಪ್ರಾಟೆಸ್ಟೆಂಟರಿಗಾಗಿಯೂ, ಜ್ಯೂಗಳು ಜ್ಯೂಗಳಿಗಾಗಿ ಮಾತ್ರ ಮತದಾನ ಮಾಡಬಹುದು ಎಂದಾಯಿತು. ಹಿಂದೂ ಮುಸ್ಲಿಮರ ವಿರೋಧವನ್ನು ಕಳೆದು ಇಂಡಿಯಾವನ್ನು ಒಂದು ಜನಾಂಗವಾಗಿ ಮಾಡಬೇಕಾದ ಸಂದರ್ಭದಲ್ಲಿ ಈ ಪ್ರತ್ಯೇಕ ಪ್ರಾತಿನಿಧ್ಯ ರಾಜಕೀಯ ಐಕ್ಯತೆಯ ಬಾಗಿಲನ್ನು ಮುಚ್ಚಿ, ಸೇರಿಸಬಹುದಾಗಿದ್ದ ಸೇತುವೆಯನ್ನು ಮುರಿದು, ನಡುವಿನ ಬಿರುಕನ್ನು ದೊಡ್ಡದಾಗಿ ಮಾಡಿತು.

ಇದರ ಜೊತೆಗೆ ಈಗ ಇಂಗ್ಲೆಂಡ್, ನಿಮ್ನ ಜನಾಂಗಕ್ಕೂ ಪ್ರತ್ಯೇಕ ಪ್ರಾತಿನಿಧ್ಯಕೊಡಲು ಹವಣಿಸಿತು. ೧೯೩೨ರ ಮಾರ್ಚ್ ೧೧ರಲ್ಲಿ ಗಾಂಧಿ ಸರ್ ಸ್ಯಾಮ್ಯೂಯೆಲ್‌ಹೋರರಿಗೆ ಪತ್ರ ಬರೆದು ಬ್ರಿಟಿಷರು ಅಸ್ಪೃಶ್ಯರಿಗೆ ಪ್ರತ್ಯೇಕ ಪ್ರಾತಿನಿಧ್ಯಕೊಟ್ಟರೆ ತಾನು ಆಮರಣಾಂತ ಉಪವಾಸ ಕೈಗೊಳ್ಳಬೇಕಾಗುವುದೆಂದು ತಿಳಿಸಿದನು. "ಇದರಿಂದ ತನ್ನನ್ನು ಸೆರೆಯಲ್ಲಿಟ್ಟ ಬ್ರಿಟಿಷರಿಗೆ ತೊಂದರೆಯಾದರೂ, ನನಗೆ ಆ ಹೆಜ್ಜೆ ಒಂದು ಹಾದಿಯಲ್ಲ; ಅದು ನನ್ನ ಜೀವದ ಭಾಗ."

ಅದುವರೆಗೂ ಯಾವ ನಿರ್ಧಾರಕ್ಕೂ ಬಂದಿರಲಿಲ್ಲವೆಂದೂ, ಬರುವ ಮೊದಲು ಆತನ ಅಭಿಪ್ರಾಯವನ್ನೂ ಗಮನಿಸಲಾಗುವುದೆಂದೂ ಮಂತ್ರಿ ಉತ್ತರಕೊಟ್ಟನು. ೧೯೩೨ರ ಆಗಸ್ಟ್ ೧೭ರವರೆಗೂ ಏನೂ ನಡೆಯಲಿಲ್ಲ. ಆಗ ಮುಖ್ಯಮಂತ್ರಿ ರ್‍ಯಾಮ್ಸೆ ಮ್ಯಾಕ್ಡೊನಾಲ್ಡ್ ಪ್ರತ್ಯೇಕ ಪ್ರಾತಿನಿಧ್ಯವಿರಬೇಕೆಂದು ಘೋಷಿಸಿದನು. ಮಾರನೆಯ ದಿನ ಗಾಂಧಿ, "ನಿಮ್ಮ ನಿರ್ಧಾರವನ್ನು ನನ್ನ ಪ್ರಾಣದಿಂದ ಎದುರಿಸಬೇಕಾಗಿದೆ" ಎಂದು ಮುಖ್ಯಮಂತ್ರಿಗೆ ಪತ್ರ ಬರೆದನು. ಉಪವಾಸ ಸೆಪ್ಟೆಂಬರ್ ೨೦ರ ಮಧ್ಯಾಹ್ನ ಪ್ರಾರಂಭ

ವಾಗುವುದೆಂದು ತಿಳಿಸಿದನು.

೧೯೩೨ರ ಸೆಪ್ಟೆಂಬರ್ ೮ನೇ ತಾರೀಕು ಡೌನಿಂಗ್ ರಸ್ತೆಯ ೧೦ನೇ ನಂಬರಿನ ಮನೆಯಿಂದ ಮ್ಯಾಕ್ಡೊನಾಲ್ಡ್ ಉದ್ದವಾದ ಉತ್ತರ ಬರೆದರು. "ನಿಮ್ಮ ಕಾಗದದಿಂದ ನನಗೆ ತುಂಬಾ ಆಶ್ಚರ್ಯ, ಅಸಮಾಧಾನ ಗಳುಂಟಾಗಿವೆ. ನಿಮಗೆ ಅರ್ಥವಾಗಿಲ್ಲ. ನಿಮಗೆ ಅಸ್ಪೃಶ್ಯರ ವಿಚಾರ ದಲ್ಲಿರುವ ಆಸಕ್ತಿಯನ್ನು ಪರಿಗಣಿಸಿದ್ದೇವೆ. ಈ ಹೊಸ ಕಾನೂನಿನಿಂದ ಅಸ್ಪೃಶ್ಯರು ಹಿಂದುಗಳೊಡನೆ ಸಮಾನರಾಗಿ ನಿಂತು ಮತದಾನ ಮಾಡ ಬಹುದು. ನಿಮಗೆ ಬೇಕಾದುದೂ ಅದೇ ಅಲ್ಲವೆ? ೩೦ ವರ್ಷಕಾಲ ಪ್ರತ್ಯೇಕ ಪ್ರಾಂತ್ಯಗಳಲ್ಲಿ ಅಸ್ಪೃಶ್ಯರನ್ನೇ ಪ್ರತಿನಿಧಿಗಳಾಗಿ ಅವರು ಚುನಾ ಯಿಸಬಹುದು. ಹಾಗಾಗಿ ಅಸ್ಪೃಶ್ಯರಿಗೆ ಎರಡು ಮತದಾನದ ಹಕ್ಕುಂಟಾ ದಂತಾಯಿತು. ಅವರ ಹಿತಾಕಾಂಕ್ಷಿಯಾದ ನಿಮಗೆ ಇದೇ ಇಷ್ಟ ವಲ್ಲವೆ?" ಎಂದು ಬರೆದರು.

ಯರವಾಡಾ ಸೆರೆಮನೆಯಿಂದ ಡೌನಿಂಗ್ ರಸ್ತೆಗೆ ಬರೆದ ಗಾಂಧಿಯು ಪತ್ರದಲ್ಲಿ, "ಅಸ್ಪೃಶ್ಯರಿಗೆ ಎರಡು ಮತಗಳು ದಕ್ಕುವುದರಿಂದ ಅವರ ರಕ್ಷಣೆ ಯಾಗುವುದಿಲ್ಲ. ಹಿಂದೂ ಸಮಾಜದ ಒಡಕು ನಿಲ್ಲುವುದಿಲ್ಲ. ಅಸ್ಪೃಶ್ಯರಿಗೆ ಹೆಚ್ಚು ಹಕ್ಕುಗಳು ಸಿಕ್ಕಿದರೆ ನನಗೆ ಅಸಮಾಧಾನವಿಲ್ಲ. ಆದರೆ ಕಾನೂನಿ ನಲ್ಲಿ ಅವರು ಪ್ರತ್ಯೇಕವಾಗಕೂಡದು. ಅವರಿಗೆ ಸಮ್ಮತವಿರುವವರೆಗೂ ಅವರು ಹಿಂದೂ ಸಮಾಜದಿಂದ ಹೊರಗಾಗಕೂಡದು" ಎಂದು ಬರೆದನು.

ಅಲ್ಲಿಗೆ ಬಂದಿಗೂ, ಮುಖ್ಯಮಂತ್ರಿಗೂ ಪತ್ರವ್ಯವಹಾರ ನಿಂತಿತು. ಗಾಂಧಿಯ ಉಪವಾಸ ನಿಶ್ಚಯವಾಯಿತು. ಎರಡು ಪ್ರಾತಿನಿಧ್ಯಗಳು ಇಂಡಿಯಾವನ್ನು ಇಬ್ಭಾಗವಾಗಿ ಮಾಡಿದ್ದೇ ಸಾಕಾಗಿತ್ತು. ಮೂರು ಇಂಡಿಯಾಗಳನ್ನು ಅವನಿಗೆ ಕಲ್ಪಿಸಿಕೊಳ್ಳಲು ಅಸಾಧ್ಯವಾಗಿ ತೋರಿತು.

ಗಾಂಧಿಯ ನಿರ್ಧಾರವನ್ನು ಬದಲಾಯಿಸಲು ಎಲ್ಲಾ ಕಡೆಗಳಿಂದ ಕಾಗದಗಳೂ, ತಂತಿಗಳೂ, ಪ್ರಾರ್ಥನೆಗಳೂ ಬಂದುವು. ಈ ವಿಚಾರಕ್ಕಾಗಿ ಆತನು ಸಾಯಲು ನಿರ್ಧರಿಸಿದುದು ಆತನ ಸ್ನೇಹಿತರಿಗೆ ಅರ್ಥವಾಗಲಿಲ್ಲ. ಜೈಲಿನಲ್ಲಿದ್ದ ನೆಹ್ರು, "ಸ್ವಾತಂತ್ರ್ಯದೆಡೆಗೆ" ಎಂಬ ತನ್ನ ಆತ್ಮಕಥೆಯಲ್ಲಿ, "ಈ ಅಮುಖ್ಯ ವಿಚಾರಕ್ಕಾಗಿ ಆತನು ಪ್ರಾಣಬಲಿಕೊಡಲು ನಿರ್ಧರಿಸಿ

ದುದು ನನಗೆ ಅಸಮಾಧಾನವನ್ನುಂಟುಮಾಡಿತು. ಕೋಪ ಬಂತು" ಎಂದು ಬರೆದಿದ್ದಾನೆ.

ಗಾಂಧಿಯ ನಿರ್ಧಾರ ಕದಲಲಿಲ್ಲ. ಆತನ ದೃಷ್ಟಿ ಕಾನೂನುಗಳನ್ನೂ, ಸರಿತಪ್ಪುಗಳನ್ನೂ ಮೀರಿತ್ತು. ಮ್ಯಾಕ್ಡೊನಾಲ್ಡ್‌ರ ಆಲೋಚನೆ ಹರಿಜನರಿಗೆ ಪ್ರತ್ಯೇಕ ಅಭಿಮತವನ್ನೂ, ಹಿಂದೂಗಳೊಡನೆ ಸಹಮತಗಳನ್ನೂ ಕೊಟ್ಟದ್ದು ನಿಜ. ಆದರೆ ಸಹಮತದ ಒಳ್ಳೆಯ ಪರಿಣಾಮ, ಪ್ರತ್ಯೇಕ ಅಭಿಮತದಿಂದ ನಾಶವಾಗುವುದು. ಪ್ರತ್ಯೇಕ ಅಭಿಮತಪಡೆದ ಹರಿಜನ ಪ್ರತಿನಿಧಿಗಳು ಹಿಂದುಗಳಿಗೂ, ತಮಗೂ ಇದ್ದ ಭಿನ್ನಾಭಿಪ್ರಾಯಗಳಿಗೆ ಹಿರಿತನಕೊಡುವರು. ಜಾತೀಯ ಹಿಂದುಗಳಿಗೂ, ಅಸ್ಪೃಶ್ಯರಿಗೂ ಇದ್ದ ವೈಮನಸ್ಯವನ್ನು ಶಾಶ್ವತಮಾಡುವ ಒಂದು ರಾಜಕೀಯ ಪಕ್ಷವೇರ್ಪಡುವುದು. ಅದರ ಅಸ್ತ್ರ ಹಿಂದೂ ಅನ್ಯಾಯವೆಂಬ ದೊಡ್ಡ ಆಯುಧವಾಗುವುದು. ಇದು ಗಾಂಧಿಯ ಮೂಲತತ್ವಗಳಿಗೆ ವಿರೋಧವಾಗಿತ್ತು; ವೈವಿಧ್ಯತೆಯಲ್ಲಿ ಸಾಮರಸ್ಯ, ವಿರೋಧಗಳಿದ್ದರೂ ವಿಶ್ವಾಸಭೇದ ದೃಷ್ಟಿಯಿಂದ ಹೊಡೆದಾಟ, ಪ್ರಭೇದಗಳಿಂದ ಮನಸ್ಸು ಕಾರ್ಯಗಳಲ್ಲಿ ದ್ವೇಷ, ಕ್ರೋಧಗಳು ಹುಟ್ಟುವುವು.

ಗಾಂಧಿ ಉಪವಾಸಮಾಡುತ್ತಿದ್ದುದು ಬ್ರಿಟನ್ನಿಗೆ ವಿರೋಧವಾಗಿ ಅಲ್ಲ; ಹರಿಜನರ ತೊಂದರೆಗಳನ್ನು ತಪ್ಪಿಸಿ, ಹಿಂದುಗಳೊಡನೆ ಏಕರಾಜಕೀಯ ಪಕ್ಷವನ್ನು ಕಟ್ಟಲೆಂದು; ಆತನ ಗುರಿ ಹಿಂದೂ ಸಮಾಜ. ಹರಿಜನರೂ ಹಿಂದೂಗಳೂ ಒಂದು ಒಪ್ಪಿಗೆಗೆ ಬಂದರೆ ಬ್ರಿಟನ್ನೂ ಒಪ್ಪುವುದೆಂದು ಮ್ಯಾಕ್ಡೊನಾಲ್ಡ್ ಹೇಳಿದರು.

ಸೆಪ್ಟೆಂಬರ್ ೨೦ರಲ್ಲಿ ಮಧ್ಯಾಹ್ನ ೧೧-೩೦ಕ್ಕೆ ಗಾಂಧಿ ಕಡೆಯ ಊಟವನ್ನು ಮಾಡಿದನು; ಒಂದು ಲೋಟಾ ಬಿಸಿನೀರು, ಸ್ವಲ್ಪ ಜೇನುತುಪ್ಪ, ನಿಂಬೆರಸ.

## ೩೦. ಮಾಟಗಾರ

ಉಪವಾಸ ಪ್ರಾರಂಭಿಸಿದ ದಿನ, ಗಾಂಧಿ ರಾತ್ರಿ ಎರಡೂವರೆಗೆ ಎದ್ದು ರವೀಂದ್ರನಾಥ ಠಾಕೂರರಿಗೆ ಒಂದು ಪತ್ರ ಬರೆದನು. "ಈಗ ಮಂಗಳವಾರದ ಪ್ರಾತಃಕಾಲ ಮೂರಘಂಟೆ. ಮಧ್ಯಾಹ್ನ ಉರಿಯುವ ಬಾಗಿಲನ್ನು

ಹೊಗುತ್ತೇನೆ. ಈ ಕಾರ್ಯಕ್ಕೆ ನಿಮ್ಮ ಆಶೀರ್ವಾದವಿದ್ದರೆ ನನಗದು ಅಗತ್ಯವಾಗಿ ಬೇಕು. ನಿಮ್ಮ ಹೃದಯ ನನ್ನ ಕಾರ್ಯವನ್ನು ಒಪ್ಪದಿದ್ದರೆ ನನಗೆ ಆಶೀರ್ವಾದ ಬೇಕು. ಅದು ನನಗೆ ಶಕ್ತಿಕೊಡುತ್ತದೆ," ಎಂದು ಮಹಾತ್ಮ ವಿನಯದಿಂದ ಬೇಡಿದನು.

ಬೇರೆಯವರಿಗೆ ಅರ್ಥವಾಗದಿರಬಹುದು. ಆದರೆ ಠಾಕೂರರಿಗೆ ಇಂಡಿಯಾ ತಿಳಿದಿತ್ತು. ಗಾಂಧಿ ಆತನ ಅಭಿಪ್ರಾಯಗಳನ್ನು ಮನ್ನಿಸುತ್ತಿದ್ದನು. ಕಾಗದವನ್ನು ಗಾಂಧಿ ಅಂಟಿಸುತ್ತಿರಲು ಠಾಕೂರರಿಂದ ತಂತಿ ಸುದ್ದಿ ಬಂತು. "ಇಂಡಿಯಾದ ಐಕ್ಯತೆಗಾಗಿ, ಅದರ ಸಾಮಾಜಿಕ ಸಮಗ್ರತೆಗಾಗಿ ಅಮೂಲ್ಯ ಜೀವದಾನ ಮಾಡುವುದು ಸಾರ್ಥಕ. ಇಂತಹ ದೇಶದ ವಿಪತ್ತನ್ನು ನಾವು ಕಡೆಯವರೆಗೂ ಆಲಸ್ಯದಿಂದ ಆಗಗೊಡುವುದಿಲ್ಲವೆಂದು ನಂಬಿದ್ದೇನೆ," ಎಂದು ಬರೆದಿದ್ದರು.

ಗಾಂಧಿ ತನ್ನ ಕಾಗದಕ್ಕೆ ಒಂದು ಪಿ. ಸೂ. ಸೇರಿಸಿದರು. "ನಿಮ್ಮ ಪ್ರೀತಿಯ ಸೊಗಸಾದ ತಂತಿ ತಲುಪಿತು. ನಾನು ಪ್ರವೇಶಿಸುತ್ತಿರುವ ಬಿರುಗಾಳಿಯ ನಡುವೆ ಅದು ನನಗೆ ಶಕ್ತಿ ನೀಡುತ್ತೆ........"

ಆ ಸಂಜೆ ಠಾಕೂರರು ಶಾಂತಿನಿಕೇತನದ ಶಾಲೆಯಲ್ಲಿ ಮಾತನಾಡುತ್ತಾ, "ಈ ದಿನ ಗ್ರಹಣದಂತಹ ನೆರಳು ಇಂಡಿಯಾದ ಮೇಲೆ ಬಾಗುತ್ತಿದೆ.... ಜೀವನದ ಅರ್ಪಣೆಯಿಂದ ಇಂಡಿಯಾವನ್ನು ತನ್ನದಾಗಿ ಮಾಡಿಕೊಂಡು ಮಹಾತ್ಮಾಜಿ ಶ್ರೇಷ್ಠ ಬಲಿದಾನ ಮಾಡಲು ನಿಶ್ಚಯಿಸಿದ್ದಾರೆ. ಉಪವಾಸವನ್ನು ವಿವರಿಸಿ, "ಎಲ್ಲಾ ದೇಶಗಳಿಗೂ ಆತ್ಮ ನೆಲೆಸಿರುವ ಭೂಭಾಗ ಬಂದಿದೆ. ಅಲ್ಲಿಯ ಒಂದಂಗುಲ ನೆಲವನ್ನೂ ದೈಹಿಕಶಕ್ತಿ ಗೆದ್ದುಕೊಳ್ಳಲಾರದು. ಹೊರಗಿನಿಂದ ಬರುವ ಅರಸರು ಬಾಗಿಲ ಹೊರಗೇ ನಿಲ್ಲಬೇಕಾಗುವುದು. ಇಂಗ್ಲೆಂಡು ಇಂಡಿಯಾದ ಆತ್ಮವನ್ನು ಜಯಿಸಿರಲಿಲ್ಲ. ಆದರೆ ಹಿರಿಯ ಆತ್ಮ ದೈಹಿಕವಾಗಿ ಮಾಯವಾದರೂ ಆಳುತ್ತಲೇ ಇರುವನು. ಮಹಾತ್ಮಾಜಿ ಕೈಗೊಂಡಿರುವ ಉಪವಾಸ ವ್ರತವಲ್ಲ; ಇಂಡಿಯಾಕ್ಕೂ, ಜಗತ್ತಿಗೂ ಒಂದು ಸಂದೇಶ. ಮಾನವತ್ವವನ್ನು ಸಂಪೂರ್ಣವಾಗಿ ನಾಶಮಾಡಿ ಅಂತಹ ಹತಾಶರನ್ನು ಆಳಿ ಯಾವ ಸಂಸ್ಕೃತ ಸಮಾಜವೂ ಊರ್ಜಿತವಾಗಲಾರದು. ಕೈಲಾಗದ

ಮನುಷ್ಯನನ್ನು ಅವಮಾನಪಡಿಸುವುದು ನಮ್ಮ ಮಾನವತೆಗೇ ಅಪಮಾನ. ನಮ್ಮ ಸಮಾಜದ ಈ ಆಳವಾದ ದೌರ್ಬಲ್ಯವನ್ನು ಮಹಾತ್ಮಾಜಿ ಎದುರಿಸುತ್ತಿದ್ದಾರೆ," ಅದರಲ್ಲಿ ಆಟವೇನೂ ಇರಲಿಲ್ಲ. ಗಾಂಧಿ ಇಂಡಿಯಾದ ಆತ್ಮ ರಕ್ಷಣೆಗಾಗಿ ಉಪವಾಸವನ್ನು ಕೈಗೊಂಡಿದ್ದನು.

ತಕ್ಷಣ ಬೊಂಬಾಯಲ್ಲಿ ಹಿಂದೂ ನಾಯಕರು, ಹರಿಜನ ನಾಯಕರೊಡನೆ ಅದರಲ್ಲಿ ಮುಖ್ಯವಾಗಿ ಅಂಬೇಡ್ಕರರೊಡನೆ ಸಂಧಾನಕ್ಕಾಗಿ ಕಲೆತರು. ತನ್ನವರು ಅನುಭವಿಸಿದ್ದ ತಲೆತಲಾಂತರದ ಕ್ರೌರ್ಯದಿಂದ ಅಂಬೇಡ್ಕರರು ರೋಷದ್ವೇಷಗಳಿಂದ ತುಂಬಿದ್ದರು. ಗಾಂಧಿಯ ಸಾವು ಯಾರಮೇಲಾದರೂ ಪರಿಣಾಮವನ್ನುಂಟುಮಾಡದಿದ್ದರೆ ಆ ಮನುಷ್ಯ ಅಂಬೇಡ್ಕರ್. ಆತ ಉಪವಾಸವನ್ನು "ಪ್ರದರ್ಶನ" ವೆಂದು ಕರೆದನು. ಸಮ್ಮೇಳನದಲ್ಲಿ ದೇಶದ ಅದ್ಭುತ ಹಿಂದೂ ನಾಯಕರು, ತಮ್ಮ ಪ್ರೀತಿಯ ಮಹಾತ್ಮನ ಜೀವವನ್ನುಳಿಸಲು, ತನ್ನನ್ನು ಬೇಡುತ್ತಿದ್ದುದು ಆತನಿಗೆ ತುಂಬಾ ಆನಂದವನ್ನುಂಟುಮಾಡಿತು.

ಸಾಮಾನ್ಯ ಚುನಾವಣೆಯಿದ್ದರೂ, ಅಂಬೇಡ್ಕರರಿಗೆ ಸಮಾಧಾನವಾಗುವಂತೆ ನ್ಯಾಯಾಂಗ ಸಭೆಯಲ್ಲಿ ಹರಿಜನ ಪ್ರತಿನಿಧಿಗಳಿರಲು ಯಾವ ಆತಂಕವೂ ಇಲ್ಲದಂತೆ ಮಾಡುವುದೇ ಹಿಂದೂ ನಾಯಕರ ಆಸೆಯಾಗಿತ್ತು. ಹರಿಜನರನ್ನು ಹರಿಜನರೂ ಹಿಂದೂಗಳೂ ಕೂಡಿಯೇ ಚುನಾಯಿಸಿದರೆ, ಹರಿಜನರು ಹಿಂದುಗಳ ಅನುಯಾಯಿಗಳಾಗಿ ತಮ್ಮ ಸುಖದುಃಖಗಳನ್ನು ವಿವರಿಸಲು ಹೆದರುವರೆಂದು ಅಂಬೇಡ್ಕರ್ ವಾದಿಸಿದನು.

ಈ ಹೆದರಿಕೆಯನ್ನು ನಿವಾರಿಸಲು, ಪ್ರಸಿದ್ಧ ನ್ಯಾಯಶಾಸ್ತ್ರಪ್ರವೀಣ ಸರ್ ತೇಜಬಹದ್ದೂರ್ ಸಪ್ರೂ ಹೊಸದಾದ ಆಲೋಚನೆಯನ್ನು ಮಂಡಿಸಿದರು. ನ್ಯಾಯಾಂಗ ಸಭೆಯ ಕೆಲವು ಸ್ಥಾನಗಳಿಗೆ ಹರಿಜನ ಪ್ರತಿನಿಧಿಗಳನ್ನು ಹರಿಜನರೂ ಹಿಂದೂಗಳೂ ಸೇರಿ ಆರಿಸಬೇಕು. ಹರಿಜನರಿಗಾಗಿ ಮೀಸಲಾದ ಮಿಕ್ಕಸ್ಥಾನಗಳಿಗೆ—ಉಪವಾಸದ ಹಿಂದಿನದಿನ ಹರಿಜನರಿಗೆ ಪ್ರತ್ಯೇಕ ಸ್ಥಾನಗಳನ್ನು ಕೊಡಬೇಕೆಂದು ಗಾಂಧಿ ಒಪ್ಪಿದ್ದನು.—ಹರಿಜನರು ಮಾತ್ರ ಮತದಾನ ಮಾಡತಕ್ಕದ್ದು. ಪ್ರತಿಯೊಂದು ಸ್ಥಾನಕ್ಕೂ ಮೂರು ಹರಿಜನರ ಹೆಸರುಗಳನ್ನು ಸೂಚಿಸಿ, ಕಡೆಯಲ್ಲಿ ಅವರಲ್ಲೊಬ್ಬರಿಗೆ ಹಿಂದೂ

ಗಳು ಮತದಾನ ಮಾಡತಕ್ಕದ್ದು. ಹೀಗಾಗುವುದರಿಂದ ಹರಿಜನರು ತಮ್ಮಲ್ಲಿ ಶಕ್ತರಾದವರನ್ನು ಚುನಾವಣೆಗೆ ನಿಲ್ಲಿಸಬಹುದು; ಹಿಂದೂಗಳಿಂದ ಅವರಿಗೆ ಸೋಲುಂಟಾಗುವಂತಿಲ್ಲ.

ಅಂಬೇಡ್ಕರ್ ಈ ಸೂಚನೆಯನ್ನು ನಿಧಾನವಾಗಿ ಪರೀಕ್ಷಿಸಿದನು. ತನ್ನವರೊಡನೆ ದೀರ್ಘವಾಗಿ ಆಲೋಚನೆ ನಡೆಸಿದನು. ಹಿಂದಿರುಗಿ ತಾತ್ಕಾಲಿಕವಾಗಿ ಒಪ್ಪಿಕೊಂಡನು.

ಉಳಿದ ಸಮಸ್ಯೆ ಗಾಂಧಿ. ಮಧ್ಯರಾತ್ರಿಯ ರೈಲಿನಲ್ಲಿ ಸಪ್ರು, ಜಯಕರ್, ರಾಜಗೋಪಾಲಾಚಾರಿ, ದೇವದಾಸ್ ಗಾಂಧಿ, ರಾಜೇಂದ್ರಪ್ರಸಾದ್, ಬಿರ್ಲಾ ಬೊಂಬಾಯಿಂದ ಪೂನಾಗೆ ಹೋಗಿ, ಉಪವಾಸದ ಮರುದಿನ ಏಳು ಘಂಟೆಗೆ ಗಾಂಧಿಯ ಬಳಿ ಹೋದರು. ಗಾಂಧಿಯ ಶಕ್ತಿ ಕುಗ್ಗುತ್ತಿತ್ತು. ಯೋಜನೆಯನ್ನು ಕೇಳಿ ಪ್ರಶ್ನಿಸಿದರೂ ಯಾವ ನಿರ್ಧಾರಕ್ಕೂ ಬರಲಿಲ್ಲ. ಅದನ್ನು ಕಾಗದದ ಮೇಲೆ ಬರೆಸಿ, ಅಂಬೇಡ್ಕರರೊಡನೆಯೂ, ನ್ಯಾಯಾಂಗಸಭೆಯಲ್ಲಿದ್ದ ತತ್ವವನ್ನೊಪ್ಪಿದ್ದ ಎಂ. ಸಿ. ರಾಜಾರವರೊಡನೆಯೂ ಮಾತನಾಡಲು ಇಚ್ಛಿಸಿದನು.

ಮಾರನೆಯ ದಿನ ಗಾಂಧಿ ಸಪ್ರು ಸೂಚನೆಯನ್ನು ಟೀಕಿಸಿದನು. ಹರಿಜನ ಪ್ರತಿನಿಧಿಗಳ ಚುನಾವಣೆಯಲ್ಲಿ ವ್ಯತ್ಯಾಸವೇಕೆ? ಎಲ್ಲಾ ಪ್ರತಿನಿಧಿಗಳನ್ನೂ ಹರಿಜನರೇ ಚುನಾಯಿಸಬಹುದಲ್ಲ. ಹರಿಜನ ಹಿಂದುಗಳಿಗೇಕೆ ಋಣಿಗಳಾಗಬೇಕು?

ಮಧ್ಯಾಹ್ನ ಅಂಬೇಡ್ಕರ್ ಗಾಂಧಿಯ ಸೆರೆಮನೆಗೆ ಹೋದನು. ಆತನೇ ಹೆಚ್ಚು ಮಾತನಾಡಿದನು. ಮಹಾತ್ಮರ ಜೀವವನ್ನುಳಿಸಲು ತಾನು ಸಿದ್ಧನೆಂದೂ ಆದರೆ ಅದಕ್ಕಾಗಿ ತನಗೆ ಪ್ರತಿಫಲ ಕೊಡಬೇಕೆಂದೂ ಹೇಳಿದನು.

ಗಾಂಧಿಯ ಶಕ್ತಿ ಕುಗ್ಗುತ್ತಿತ್ತು. ಉಪವಾಸ ಆತನ ಮೇಲೆ ತೀವ್ರ ಪರಿಣಾಮವನ್ನುಂಟುಮಾಡುತ್ತಿತ್ತು. ಮೊದಲ ಉಪವಾಸಗಳಲ್ಲಿ ಆತನು ಗಂಟೆಗೊಂದುಬಾರಿ ನೀರು ಕುಡಿಯುತ್ತಿದ್ದನು. ಈಗ ಹೊತ್ತುಗೊತ್ತಿಲ್ಲದೆ ಕುಡಿಯುತ್ತಿದ್ದನು. ಮೊದಲು ಕೈಕಾಲುಗಳನ್ನೊತ್ತಿಸಿಕೊಂಡು ನೋವು ಕಳೆದುಕೊಳ್ಳುತ್ತಿದ್ದನು. ಈ ಸಲ ಒತ್ತಿಸಿಕೊಳ್ಳಲು ನಿರಾಕರಿಸಿದನು.

ಮನಸ್ಸು ನೆಮ್ಮದಿಯಿರಲಿಲ್ಲ. ಮೈಯೆಲ್ಲಾ ನೋವಿನಿಂದ ಜರ್ಝರಿತವಾಗಿತ್ತು. ಬಚ್ಚಲುಮನೆಗೂ ಎತ್ತಿಕೊಂಡುಹೋಗಬೇಕಾಗಿತ್ತು. ಸ್ವಲ್ಪ ಕದಲಿದರೂ, ಕೆಲವುಬಾರಿ ಮಾತನಾಡಿದರೂ ಕೂಡ ಆತನಿಗೆ ವಾಂತಿ ಬರುವಂತಾಗುತ್ತಿತ್ತು.

ಅಂಬೇಡ್ಕರ್, "ನನಗೆ ಪ್ರತಿಫಲ ಬೇಕು," ಎಂದಾಗ ಗಾಂಧಿ ಕಷ್ಟದಿಂದ ತಲೆಯನ್ನು ಮೊಣಕೈ ಮೇಲಿಟ್ಟು ಅನೇಕ ನಿಮಿಷಗಳು ಮಾತನಾಡಿದನು. ತನಗೆ ಅಸ್ಪೃಶ್ಯರಲ್ಲಿದ್ದ ಆದರವನ್ನು ವಿವರಿಸಿದನು. ಸಪ್ರು ಯೋಜನೆಯನ್ನು ವಾಕ್ಯವಾಕ್ಯವಾಗಿ ಚರ್ಚಿಸಿ, ತನ್ನ ಆಕ್ಷೇಪಣೆಯನ್ನೂ ತಿಳಿಸಿದನು. ಹರಿಜನ ಪ್ರತಿನಿಧಿಗಳನ್ನೆಲ್ಲಾ ಹರಿಜನರೇ ಏಕೆ ಚುನಾಯಿಸಕೂಡದು ? ಆಯಾಸವಾಗಿ ದಿಂಬಿನಮೇಲೆ ಒರಗಿದರು.

ಅಂಬೇಡ್ಕರರಿಗೆ ಸಂತೋಷವಾಯಿತು. ಸಾಯುತ್ತಿದ್ದ ಮಹಾತ್ಮನೆದುರು ತನ್ನನ್ನು ಬಲವಂತಕ್ಕೆ ಗುರಿಮಾಡಿ ತನ್ನಿಂದ ಒಪ್ಪಿಗೆ ಪಡೆಯುವರೆಂದು ಆತನು ಎಣಿಸಿದ್ದನು. ಬದಲಾಗಿ ತಾನು ಕೇಳಿದ್ದಕ್ಕಿಂತ ಹೆಚ್ಚಾಗಿಯೇ ಗಾಂಧಿ ಕೊಡುತ್ತಿದ್ದನು. ಸಪ್ರೂಸೂಚನೆಗೆ ಗಾಂಧಿ ಮಾಡಿದ ತಿದ್ದುಪಡಿಯನ್ನು ಅಂಬೇಡ್ಕರ್ ಸಂತೋಷದಿಂದ ಒಪ್ಪಿದನು.

ಅದೇ ದಿನ ಶ್ರೀಮತಿ ಗಾಂಧಿಯನ್ನು ಸಬರಮತಿ ಸೆರೆಯಿಂದ ಯರವಾಡಾ ಸೆರೆಮನೆಗೆ ವರ್ಗಾಯಿಸಿದರು. ನಿಧಾನವಾಗಿ ಪತಿಯ ಬಳಿಗೆ ನಡೆಯುತ್ತಾ, ತಲೆಯಾಡಿಸಿ, " ಪುನಃ ಇದೇ ಕಥೆ ಪ್ರಾರಂಭಿಸಿದಿರಾ ? " ಎಂದಳು. ಆತ ನಕ್ಕನು. ಆಕೆ ಬಂದುದು ಆತನಿಗೆ ಉಲ್ಲಾಸವನ್ನುಂಟುಮಾಡಿತು. ಆಕೆ ದೇಹವನ್ನೊತ್ತಲು ಒಪ್ಪಿಗೆಯಿತ್ತು, ಅನಂತರ ಆಕೆಯ ಬಲವಂತದ ಮೇಲೆ ಬೇರೆಯವರಿಂದಲೂ ಒತ್ತಿಸಿಕೊಳ್ಳಲು, ಒಪ್ಪಿಕೊಂಡನು.

ಸೆಪ್ಟೆಂಬರ್ ೨೩, ಶುಕ್ರವಾರ ಹೃದಯ ವೈದ್ಯ ಡಾಕ್ಟರ್ ಗಿಲ್ಡರ್ ಬೊಂಬಾಯಿಂದ ಬಂದು, ಬೇರೆ ವೈದ್ಯರೊಡನೆ ಗಾಂಧಿಯನ್ನು ಪರೀಕ್ಷಿಸಿ ಆತನ ಸ್ಥಿತಿ ಚಿಂತಾಜನಕವಾಗಿದೆಯೆಂದು ತಿಳಿಸಿದರು. ರಕ್ತದ ಒತ್ತಡ ಮಿತಿಮೀರಿ ಏರಿತ್ತು. ಮಹತ್ತರವಾದ ನಿರ್ಧಾರಗಳಾಗಬೇಕಾದಾಗಲೆಲ್ಲಾ ಗಾಂಧಿಯ ರಕ್ತದ ಒತ್ತಡ ಏರುತ್ತಿತ್ತು. ಸಾವು ಸಮೀಪಿಸಿತ್ತು.

ದಿನವೆಲ್ಲಾ ಅಂಬೇಡ್ಕರ್ ಹಿಂದೂ ನಾಯಕರೊಡನೆ ಚರ್ಚೆನಡೆಸಿದನು. ಹೊಸ ಬೇಡಿಕೆಗಳನ್ನು ಮುಂದಿಟ್ಟನು.

೧. ಮ್ಯಾಕ್ಡೊನಾಲ್ಡರ ಹೇಳಿಕೆಯ ಮೇರೆಗೆ ಅಸ್ಪೃಶ್ಯರಿಗೆ ಪ್ರಾಂತ್ಯ ನ್ಯಾಯಾಂಗ ಸಭೆಗಳಲ್ಲಿ ೭೧ ಸ್ಥಾನಗಳು ಕೊಡಲ್ಪಟ್ಟಿದ್ದುವು. ಅಂಬೇಡ್ಕರ್ ೧೯೭ ಬೇಕೆಂದು ಕೇಳಿದನು.

೨. ಪ್ರತಿಸ್ಥಾನಕ್ಕೂ ಮೂರು ಹರಿಜನರ ಹೆಸರುಗಳನ್ನು ಸೂಚಿಸಬೇಕೆಂದು ಸಪ್ರೂ ಹೇಳಿದರು; ಗಾಂಧಿ ಐದಿರಬಹುದೆಂಬ ಅಭಿಪ್ರಾಯಪಟ್ಟರು. ಅಂಬೇಡ್ಕರ್ ಎರಡೇ ಸಾಕೆಂದನು. ಜನಕಡಮೆಯಾದಷ್ಟೂ ಅಂಬೇಡ್ಕರ್ ಅವರನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಸುಲಭ ಎಂದೆಣಿಸಿದನು.

೩. ಕಡೆಯದಾಗಿ, ಹರಿಜನರು ತಮಗೆ ಪ್ರತ್ಯೇಕ ಪ್ರಾತಿನಿಧ್ಯ ಬೇಕೋ ಬೇಡವೋ ಎಂದು ನಿರ್ಧರಿಸುವ ಕಾಲವನ್ನು ಗಾಂಧಿ ಐದುವರ್ಷವೆಂದನು. ಅಂಬೇಡ್ಕರ್ ಹದಿನೈದೆಂದನು.

ಶುಕ್ರವಾರ ಅಂಬೇಡ್ಕರ್ ಪುನಃ ಗಾಂಧಿಯ ಬಳಿಗೆ ಹೋದನು. ಬಿಸಿಲಿನ ಬೇಗೆ ಹೆಚ್ಚಾಗಿತ್ತು. ಗಾಂಧಿ ಸೆರೆಮನೆಯ ಒಂದು ಮಾವಿನ ಮರದ ಕೆಳಗೆ ಮಂಚದ ಮೇಲೆ ಮಲಗಿದ್ದನು. ಒಂದು ಎಲೆಯೂ ಕದಲುತ್ತಿರಲಿಲ್ಲ. ಗಾಂಧಿಯ ರಕ್ತದ ಒತ್ತಡ ಹೆಚ್ಚಾಗಿತ್ತು. ಗಟ್ಟಿಯಾಗಿ ಮಾತನಾಡಲು ಕೂಡ ಆಗುತ್ತಿರಲಿಲ್ಲ. ಅಂಬೇಡ್ಕರ್ ಬಡಪಟ್ಟಿಗೆ ಒಪ್ಪಲಿಲ್ಲ. ಯಾವ ನಿರ್ಧಾರಕ್ಕೂ ಬರಲು ಆಗಲಿಲ್ಲ.

ಉಪವಾಸದ ಐದನೆಯ ದಿನ ವೈದ್ಯರೆಲ್ಲರೂ ಗಾಂಧಿಯ ಜೀವನ ಮುಗಿಯುವುದೆಂದುಕೊಂಡರು. ಪ್ರಾತಃಕಾಲವೆಲ್ಲಾ ಅಂಬೇಡ್ಕರ್ ಹಿಂದುಗಳೊಡನೆ ವಾದಿಸಿ ಮಧ್ಯಾಹ್ನ ಮಹಾತ್ಮನ ಬಳಿಗೆ ಹೋದನು. ಮ್ಯಾಕ್ಡೊನಾಲ್ಡ್ ಹೇಳಿದ ೭೧ ಸ್ಥಾನಗಳಿಗೂ, ತಾನು ಕೇಳಿದ ೧೯೭ಕ್ಕೂ ನಡುವೆ ೧೪೭ ಸ್ಥಾನಗಳಿಗೆ ಒಪ್ಪಿರುವುದಾಗಿ ತಿಳಿಸಿದನು. ಗಾಂಧಿಯೂ ಒಪ್ಪಿದನು. ಪ್ರತಿಸ್ಥಾನಕ್ಕೂ ಇರಬೇಕಾದ ಪ್ರತಿನಿಧಿಗಳ ಸಂಖ್ಯೆಯ ವಿಚಾರವಾಗಿಯೂ ಒಪ್ಪಂದ ನಡೆದಿತ್ತು.

ಒಪ್ಪಂದಕ್ಕೆ ಬರದ ಸಂಗತಿಯೆಂದರೆ ಪ್ರತ್ಯೇಕ ಪ್ರಾತಿನಿಧ್ಯ ಎಷ್ಟು

ಕಾಲವಿರಬೇಕೆಂಬುದು. ಅಂಬೇಡ್ಕರ್ ೧೦ ವರ್ಷಕ್ಕಿಳಿಸಿದನು. ಗಾಂಧಿ ೫ಕ್ಕಿಂತ ಹೆಚ್ಚು ಒಪ್ಪಲು ನಿರಾಕರಿಸಿದನು.

ಪುನಃ ಸಮ್ಮೇಳನ ಸೇರಿತು. ಅಂಬೇಡ್ಕರರನ್ನು ಒಪ್ಪಿಸುವುದು ಅಸಾಧ್ಯವಾಗಿ ತೋರಿತು. ಆ ಸಮಯದಲ್ಲಿ ರಾಜಗೋಪಾಲಾಚಾರ್ಯರು ಮಾಡಿದ ಕೆಲಸದಿಂದ ಪ್ರಾಯಶಃ ಗಾಂಧಿಯ ಜೀವ ಉಳಿಯಿತು. ಗಾಂಧಿಯನ್ನು ಕೇಳದೆಯೇ ಪ್ರತ್ಯೇಕ ಪ್ರಾತಿನಿಧ್ಯದ ಕಾಲದ ವಿಚಾರವನ್ನು ಅನಂತರ ನಿರ್ಧರಿಸಬಹುದೆಂದು ಅಂಬೇಡ್ಕರರನ್ನು ಒಪ್ಪಿಸಿದನು. ಇದರಿಂದ ಬಹುಮತದ ಅಗತ್ಯವೂ ಇಲ್ಲದೆಇರಬಹುದು.

ರಾಜಗೋಪಾಲಾಚಾರಿ ಸೆರೆಮನೆಗೆ ಹೋಗಿ ಈ ಹೊಸ ಒಪ್ಪಂದವನ್ನು ಗಾಂಧಿಗೆ ವಿವರಿಸಿ ಹೇಳಿದನು.

"ಪುನಃ ಹೇಳುವಿರಾ ?" ಗಾಂಧಿ ನಿಶ್ಶಕ್ತಿಯಿಂದ ಕೇಳಿದನು.

ರಾಜಗೋಪಾಲಾಚಾರಿ ವಿವರಿಸಿದರು.

"ಸರಿ" ಗಾಂಧಿ ಪಿಸುಮಾತಿನಲ್ಲೆಂದರು.

ಆ ಶನಿವಾರ, ಇಂಡಿಯಾಚರಿತ್ರೆಯಲ್ಲಿ "ಯರವಾಡಾ ಒಪ್ಪಂದ" ವೆಂದು ಪ್ರಸಿದ್ಧವಾಗಿರುವ ಪತ್ರಕ್ಕೆ ಹಿಂದೂ ಮತ್ತು ಹರಿಜನ ನಾಯಕರು ಸಹಿಹಾಕಿದರು.

ಆದರೆ ಬ್ರಿಟಿಷ್ ಸರ್ಕಾರ ಮ್ಯಾಕ್ಡೊನಾಲ್ಡ್‌ರ ಏರ್ಪಾಟಿಗೆ ತಿದ್ದುಪಡಿಯನ್ನು ಒಪ್ಪುವವರೆಗೂ ಗಾಂಧಿ ಉಪವಾಸ ನಿಲ್ಲಿಸುವಂತಿಲ್ಲ. ಲಂಡನ್ನಿಗೆ ತಂತಿಯ ಮೂಲಕ ತಿಳಿಸಲಾಯಿತು. ಆದರೆ ಆ ದಿನ ಭಾನುವಾರವಾಗಿದ್ದುದರಿಂದ ಸರ್ಕಾರದ ಸದಸ್ಯರನೇಕರು ಊರಲ್ಲಿರಲಿಲ್ಲ. ಮ್ಯಾಕ್ಡೊನಾಲ್ಡ್ ಸಸೆಕ್ಸ್‌ನಲ್ಲಿ ಒಬ್ಬ ಚಿಕ್ಕಮ್ಮನ ದಹನ ಸಂಸ್ಕಾರಕ್ಕೆ ಹೋಗಿದ್ದರು.

ಪೂನಾ ಒಪ್ಪಂದದ ವಿಚಾರ ತಿಳಿಯುತ್ತಲೇ ಮ್ಯಾಕ್ಡೊನಾಲ್ಡ್ ಅವಸರವಸರವಾಗಿ ಡೌನಿಂಗ್ ರಸ್ತೆಯ ೧೦ನೇ ನಂಬರ್ ಮನೆಗೆ ಬಂದರು. ಮಧ್ಯರಾತ್ರಿಯವರೆಗೂ ಸರ್ ಸ್ಯಾಮ್ಯುಯಲ್ ಹೋರ್ ಮತ್ತು ಲಾರ್ಡ್ ಲೋಥಿಯನ್ನರೊಡನೆ ಅದನ್ನು ಪರೀಕ್ಷಿಸಿದರು.

ಗಾಂಧಿಯ ಜೀವ ಸೋಲುತ್ತಿತ್ತು. ಮಂಚದ ಬಳಿ ಇದ್ದ ತನ್ನ ಪದಾರ್ಥಗಳನ್ನು ಯಾರು ಯಾರಿಗೆ ಕೊಡಬೇಕೆಂದು ಕಸ್ತೂರಿಬಾಯಿಗೆ

ಹೇಳಿದರು. ಕಲ್ಕತ್ತೆಯಿಂದ ಠಾಕೂರರು ಬಂದು ಸಾಯುತ್ತಿರುವ ಕೈದಿಗೆ ಸಮಾಧಾನಕೊಡುವಂತಹ ಹಾಡುಗಳನ್ನು ಹಾಡಿದರು.

ಸೋಮವಾರ ಪ್ರಾತಃಕಾಲ ಬ್ರಿಟಿಷ್ ಸರ್ಕಾರ ಲಂಡನ್ನಿನಲ್ಲೂ, ಹೊಸ ದೆಹಲಿಯಲ್ಲೂ, ತಾವು ಯರವಾಡ ಒಪ್ಪಂದವನ್ನು ಅಂಗೀಕರಿಸಿರುವುದಾಗಿ ಘೋಷಿಸಿತು. ಸಂಜೆ ಐದೂಕಾಲೂ ಘಂಟೆಗೆ ಗಾಂಧಿ ಕಸ್ತೂರಿಬಾಯಿ ಕೊಟ್ಟ ಒಂದು ಬಟ್ಟಲು ಕಿತ್ತಿಳೆಹಣ್ಣಿನ ರಸಕುಡಿದು ಉಪವಾಸವನ್ನು ಮುಕ್ತಾಯಗೊಳಿಸಿದರು.

ಈ ಮಹಾಉಪವಾಸ ನಡೆದ ಆರು ದಿನಗಳಲ್ಲಿ, ಸೆರೆಮನೆಯಲ್ಲಾಗಲಿ ಅಂಬೇಡ್ಕರ್ ಬಲಾತ್ಕಾರದಿಂದ ಹಿಂದುಗಳನ್ನು ಬಗ್ಗುವಂತೆ ಮಾಡಿದ ಕೊಠಡಿಯಲ್ಲಾಗಲಿ, ಲಂಡನ್ನಿನಲ್ಲಾಗಲಿ ಮುಖ್ಯವಾದುದೇನೂ ನಡೆಯಲಿಲ್ಲ. ಅದು ಇಂಡಿಯಾದ ಆದ್ಯಂತ ನಡೆಯಿತು. ಅಸ್ಪೃಶ್ಯತೆಯ ವಿಚಾರಕ್ಕಾಗಿ ಉಪವಾಸಮಾಡಿದ ಗಾಂಧಿಯಮೇಲೆ ಮೊದಮೊದಲು ಅಸಮಾಧಾನಗೊಂಡಿದ್ದ ನೆಹ್ರೂಗೆ ಬೆಳಕುಕಂಡಿತು. ಆತನ ಆತ್ಮಕಥೆಯಲ್ಲಿ, "ದೇಶಾದ್ಯಂತ ನಡೆದ ಅದ್ಭುತಘಟನೆಗಳ ವರ್ತಮಾನ ಬಂತು ......ಯರವಾಡ ಸೆರೆಮನೆಯಲ್ಲಿ ಕುಳಿತಿದ್ದ ಈ ಪುಟ್ಟಮನುಷ್ಯ ಎಂತಹ ಮಾಯಾವಿ! ಜನರ ಹೃದಯತಂತಿಗಳನ್ನು ಮಿಡಿಯುವ ಶಕ್ತಿ ಈತನಿಗೆಷ್ಟಿದೆ!" ಎಂದು ಬರೆದಿದ್ದಾನೆ.

ಗಾಂಧಿ ಉಪವಾಸಮಾಡಿದುದು ಹಿಂದುಗಳ ಹೃದಯಪರಿವರ್ತನೆಗಾಗಿ. ಉಪವಾಸ ಪ್ರಾರಂಭವಾಗುವ ಐದು ದಿನಗಳ ಮೊದಲು ಆತನು "ಸನಾತನ ಹಿಂದೂಗಳಿಗೂ ಅಸ್ಪೃಶ್ಯಜನಾಂಗದ ನಾಯಕರಿಗೂ ಆಗುವ ತೇಪೆ ಒಪ್ಪಂದದಿಂದ ಪ್ರಯೋಜನವಿಲ್ಲ. ಒಪ್ಪಂದ ನಿಜವಾದುದಾಗಿರಬೇಕು. ಅಸ್ಪೃಶ್ಯತೆಯನ್ನು ಬುಡಸಹಿತ ಕಿತ್ತೊಗೆಯಲು ಹಿಂದೂಮನೋಭಾವವಿನ್ನೂ ಸಿದ್ಧವಾಗಿರದಿದ್ದರೆ, ಅದು ಅನುಮಾನವಿಲ್ಲದೆ ನನ್ನನ್ನು ಬಲಿಕೊಡಬಹುದು" ಎಂದನು. ಮರಣಶಯ್ಯೆಯಲ್ಲಿ ಮಲಗಿದ್ದಾಗ ಒಪ್ಪಂದಗಳಿಂದಾಚೆ, ಹಿಂದೂ ಅಸ್ಪೃಶ್ಯರ ನಿಜವಾದ ಸಂಬಂಧದ ಕಡೆ ಆತನ ದೃಷ್ಟಿ ಇತ್ತು.

ಉಪವಾಸದ ವಿಚಾರ ಇಂಡಿಯಾದಲ್ಲೆಲ್ಲಾ ಹರಡಿತು. ಓದುಬರಹ

ಬಲ್ಲವರು ತಿಳಿಯದವರಿಗೆ ಹೇಳಿದರು. "ಮಹಾತ್ಮ ಉಪವಾಸ ಮಾಡು ತ್ತಿದ್ದಾರೆ."

"ಮಹಾತ್ಮಾಜಿ ಏತಕ್ಕೋಸ್ಕರ ಉಪವಾಸ ಮಾಡುತ್ತಿದ್ದಾರೆ?"

"ಹಿಂದೂಗಳಾದ ನಾವು ಅಸ್ಪೃಶ್ಯರಿಗೆ ದೇವಾಲಯದ ಬಾಗಿಲು ಗಳನ್ನು ತೆರೆಯದೆ ಹಿಂಸಿಸುತ್ತಿರುವುದರಿಂದ."

ಪಟ್ಟಣಗಳಲ್ಲೆಲ್ಲಾ ಉದ್ವೇಗವುಂಟಾಯಿತು. ಪಟ್ಟಣಕ್ಕೆ ವ್ಯಾಪಾರ ಕ್ಕಾಗಿ ಬಂದಿದ್ದ ರೈತರು ವರ್ತಮಾನವನ್ನು ಹಳ್ಳಿಗಳಿಗೊಯ್ದರು. ಇಂಡಿಯಾ ಸಮಾಚಾರ ತಿಳಿಯಲು ಕಿವಿದೆರೆದು ಕಾದಿತ್ತು. "ಮಹಾತ್ಮಾ ಜಿಯ ದೌರ್ಬಲ್ಯ ಹೆಚ್ಚುತ್ತಿದೆ," "ಮಹಾತ್ಮ ಸಾಯುತ್ತಿದ್ದಾರೆ," "ನಾವು ತ್ವರೆಮಾಡಬೇಕು," "ಗಾಂಧಿಯ ಗೋಳನ್ನು ತಡೆಯದಿರುವುದು ಪಾಪಕರ, ಆತನು ದೇವರ ಅವತಾರ, ದೇವದೂತ. ಜನರಿಗೂ, ಆತ ನಿಗೂ ಇದ್ದ ಸಂಬಂಧ ಬೌದ್ಧಿಕವಾದುದಲ್ಲ; ಭಾವನಾಲೋಕಕ್ಕೆ ಸೇರಿ ದುದು." ಉಪವಾಸವಾರದ ಪ್ರಾರಂಭದಲ್ಲೇ, ಹಿಂದೂ ಚರಿತ್ರೆಯ ಸಾವಿ ರಾರು ವರ್ಷಗಳಲ್ಲಿ ಮೊದಲ ಬಾರಿಗೆ, ಕಲ್ಕತ್ತೆಯ ಪ್ರಸಿದ್ಧ ಹಿಂದೂ ಸನಾ ತನ ಧರ್ಮದ ಕೋಟೆಗಳಂತಿದ್ದ ಕಾಳೀಘಾಟ್, ದೇವಾಲಯ, ಕಾಶಿಯ ರಾಮಮಂದಿರ ಅಸ್ಪೃಶ್ಯರಿಗೆ ತೆರೆಯಲ್ಪಟ್ಟವು. ಬೊಂಬಾಯಿಯಲ್ಲಿ ಹೆಂಗಸರ ಒಂದು ಸಂಸ್ಥೆ ಏಳು ದೊಡ್ಡ ಹಿಂದೂ ದೇವಾಲಯಗಳಲ್ಲಿ ಬಹು ಮತವನ್ನು ಶೇಖರಿಸಿದರು. ೨೪೭೯೭ ಜನ ಅಸ್ಪೃಶ್ಯರನ್ನು ದೇವಾಲಯ ಗಳಿಗೆ ಬಿಡಬೇಕೆಂದೂ, ೪೪೫ ಜನ ಕೂಡದೆಂದೂ ಮತಕೊಟ್ಟರು. ತಕ್ಷಣ ಹರಿಜನರು ಹೆಜ್ಜೆಯಿಡದ ದೇವಸ್ಥಾನಗಳು ಎಲ್ಲರಿಗೂ ತೆರೆಯ ಲ್ಪಟ್ಟವು. ಅಲಹಾಬಾದಿನಲ್ಲಿ ಗಾಂಧಿಯ ಉಪವಾಸದ ಮೊದಲನೆಯ ದಿನವೇ ಹನ್ನೆರಡು ದೇವಸ್ಥಾನಗಳು ಹರಿಜನರಿಗೆ ತೆರೆಯಲ್ಪಟ್ಟವು. ಬರೋಡ, ಕಾಶ್ಮೀರ, ಭೋರ್, ಕೊಲ್ಹಾಪುರ ಮುಂತಾದ ಸಂಸ್ಥಾನಗಳ ದೇವಾಲಯಗಳಲ್ಲಿ ಭೇದಭಾವವನ್ನು ಬಿಡಲಾಯಿತು. ಹೀಗೆ ಮಾಡಿದ ನೂರಾರು ದೇವಾಲಯಗಳ ಹೆಸರನ್ನು ಪತ್ರಿಕೆಗಳು ಪ್ರಕಟಿಸಿದುವು.

ದೆಹಲಿಯಲ್ಲಿ ಹಿಂದೂಗಳೂ, ಅಸ್ಪೃಶ್ಯರೂ ಬಹಿರಂಗವಾಗಿ ರಸ್ತೆ ಗಳಲ್ಲಿ ಕಲೆತರು. ಕಾಶಿ ವಿಶ್ವವಿದ್ಯಾಲಯದ ಶಾಲಾಧ್ಯಕ್ಷ ಧ್ರುವಾರವರು,

ಅನೇಕ ಬ್ರಾಹ್ಮಣರು ಬಹಿರಂಗವಾಗಿ, ಬೀದಿಗುಡಿಸುವವರು, ಜೋಡು ಹೊಲಿಯುವವರು, ಝಾಡಮಾಲಿಗಳೊಡನೆ ಊಟಮಾಡಿದರು. ಮೊದಲು ಅಸ್ಪೃಶ್ಯರಿಗಾಗಿ ಪ್ರತ್ಯೇಕವಾಗಿಟ್ಟಿದ್ದ ಬೆಂಚುಗಳ ಮೇಲೆ ಹಿಂದೂ ವಿದ್ಯಾರ್ಥಿಗಳೂ ಕುಳಿತರು. ರಸ್ತೆಗಳು ಹರಿಜನರಿಗೆ ತೆರೆಯಲ್ಪಟ್ಟವು. ಸಣ್ಣ ಪಟಣಗಳಲ್ಲಿ ಅಸ್ಪೃಶ್ಯರು ಬಾವಿಗಳನ್ನುಪಯೋಗಿಸಬಹುದಾಯಿತು.

ಜವಹರ್‌ಲಾಲರ ಸಂಪ್ರದಾಯ ಬದ್ಧಳಾದ ತಾಯಿ ಶ್ರೀಮತಿ ಸ್ವರೂಪರಾಣಿ ನೆಹರು ತಾನು ಅಸ್ಪೃಶ್ಯನ ಕೈಯಿಂದ ಆಹಾರ ತೆಗೆದು ಕೊಂಡುದಾಗಿ ಪ್ರಕಟಿಸಿದಳು. ಸಾವಿರಾರು ಗಣ್ಯ ಹಿಂದೂ ಸ್ತ್ರೀಯರು ಆಕೆಯಂತೆ ಮಾಡಿದರು. ಇಂಡಿಯಾ ದೇಶಾದ್ಯಂತ ಸಾವಿರಾರು ಸಂಸ್ಥೆಗಳು ತಾವು ಹರಿಜನರಿಗಾಗುತ್ತಿದ್ದ ಅನ್ಯಾಯವನ್ನು ತಡೆಗಟ್ಟುವುದಾಗಿ ಪಣ ತೊಟ್ಟುವು. ಇಂತಹ ನಿರ್ಧಾರ ಸೂಚಿಸುವ ಅನೇಕ ಪತ್ರಗಳು ಗಾಂಧಿಯ ಸೆರೆಮನೆಯ ಅಂಗಳದಲ್ಲಿ ಆಳೆತ್ತರ ಬಿದ್ದುವು. ಜ್ವರದಿಂದ ನರಳುವ ಮಗುವಿನ ಮಂಚದ ಬಳಿ ನಿಂತ ತಾಯಿಗಿಂತ ಅತಿಶಯವಾದ ಆತಂಕದಿಂದ, ಇಂಡಿಯಾ ಸಾಯುತ್ತಿದ್ದ ಮಹಾತ್ಮನ ಮಂಚದಬಳಿ ಕಾದು ನಿಂತಿತ್ತು. ತಾನು ಆಧ್ಯಾತ್ಮಿಕ ವ್ಯಕ್ತಿಯಲ್ಲದಿದ್ದರೂ ಬೇರೆಯವರ ಮೇಲೆ ಆತನ ಪರಿಣಾಮ ಅತಿ ಮಾನುಷವಾಗಿತ್ತು. ಬುದ್ಧಿಗೆ ಸ್ಥಳವಿರಲಿಲ್ಲ. ಸಾವಿನ ಗಳಿಗೆ ಯಾವುದೆಂದು ತಿಳಿಯದೆ ಗಾಬರಿಯಿಂದ, ಉದ್ವೇಗದಿಂದ, ಹಿಂದುಗಳೆಲ್ಲಾ ಒಂದು ಆಸೆಯಿಂದ ಕೆಲಸಮಾಡುತ್ತಿದ್ದರು. ಆತನು ಸಾಯಕೂಡದು.

ಆ ಉಪವಾಸದ ಆರು ದಿನಗಳು, ಮದುವೆಗಳು ಮುಂದಕ್ಕೆ ಹಾಕಲ್ಪಟ್ಟುವು. ಅನೇಕ ಹಿಂದುಗಳು ಸಿನಿಮಾ, ನಾಟಕಗಳು, ಉಪಹಾರ ಮಂದಿರಗಳಿಗೆ ಹೋಗಲಿಲ್ಲ. ಸುಧಾರಣೆ, ತಪಸ್ಸು, ಆತ್ಮಶುದ್ಧಿಗಳ ಗಾಳಿ ದೇಶದಲ್ಲೆಲ್ಲಾ ಹಾದುಹೋಯಿತು. ಆ ಮಾಯಾವಿ, ಸಂಗೀತಗಾರನೂ ಹೌದು. ಅಂತರಾತ್ಮನ ಹೃದಯ ತಂತಿಗಳನ್ನು ಮೀಟುವ ಕಲೆಗಾರನ ಶಕ್ತಿ ಆತನಿಗಿತ್ತು.

ಯರವಾಡಾ ಒಪ್ಪಂದದಲ್ಲಿ, "ಹುಟ್ಟಿನಿಂದ ಯಾರೂ ಅಸ್ಪೃಶ್ಯನೆಂದು ಪರಿಗಣಿಸಲ್ಪಡುವುದಿಲ್ಲ", ಎಂದಿತ್ತು. ಅನೇಕಜನ ಶಿಷ್ಯರನ್ನು ಪಡೆದಿದ್ದ ವೈದಿಕರು ಈ ಮಾತಿಗೆ ಸಹಿಹಾಕಿದರು. ಜಾತಿಯ ಸುಧಾರಣೆ, ಮಾನಸಿಕ

ಕ್ರಾಂತಿ, ಹಿಂದೂಧರ್ಮದ ಯುಗಾಂತರದ ರೋಗದ ಶಾಂತಿ ನಡೆದಿತ್ತು. ಇಂಡಿಯಾದ ನೈತಿಕ ಆರೋಗ್ಯಕ್ಕೆ ಅದು ಆಹಾರವಾಯಿತು. ಉಪವಾಸವಿಲ್ಲದೆ ಗಾಂಧಿ ಅಂಬೇಡ್ಕರರು ಯಾವ ರಾಜಕೀಯ ಒಪ್ಪಂದಕ್ಕೆ ಬಂದಿದ್ದರೂ, ಇಂತಹ ಪರಿಣಾಮವುಂಟಾಗುತ್ತಿರಲಿಲ್ಲ.

ಈ ಮಹಾ ಉಪವಾಸ ಹರಿಜನರ ಸ್ಥಿತಿಯನ್ನು ಶಾಶ್ವತವಾಗಿ ಉತ್ತಮಗೊಳಿಸಿ, ಹತ್ತು ಲಕ್ಷ ಜನರನ್ನು ಗುಲಾಮರಾಗಿ ಮಾಡಿದ್ದ ಪುರಾತನ ಸರಪಣಿಯನ್ನು ಮುರಿಯಿತು. ಸರಪಣಿಯ ಚೂರುಗಳಿನ್ನೂ ಉಳಿದಿವೆ. ೧೯೫೨ರ ಜೂನ್ ೧೪ರ ಹರಿಜನ ಪತ್ರಿಕೆಯಲ್ಲಿ, "ನಾಥಂ ಬಳಿ ಪರ್ಲಿಯಲ್ಲಿ ಒಬ್ಬ ಹರಿಜನ ಯುವಕ ತೆಂಗಿನ ಚಿಪ್ಪಿನಲ್ಲಿ ಚಹಾ ಕುಡಿಯಲು! ತಿರಸ್ಕರಿಸಿ, ಗಾಜಿನ ಬಟ್ಟಲೇ ಬೇಕೆಂದು ಕೇಳಲು ಅವನನ್ನು ಒಬ್ಬ ಹಿಂದೂ ಒದೆದು, ತಲೆಯಮೇಲೆ ಹೊಡೆಯಲು, ಅವನಿಗೆ ದಂಡ ವಿಧಿಸಲಾಯಿತು. ಕೊಟ್ಟೆಗುಡಿಯಲ್ಲಿ ಹಳ್ಳಿಯ ನಾಪಿತ ಹರಿಜನ ಹುಡುಗನ ಕೂದಲು ಕತ್ತರಿಸಲು ನಿರಾಕರಿಸಿದನು. ಅವನಮೇಲೆ ಪೋಲೀಸರು ಮೊಕದ್ದಮೆ ಹೂಡಲು ಸಬ್ ಮ್ಯಾಜಿಸ್ಟ್ರೇಟ್ ಅವನನ್ನು ಶಿಕ್ಷೆಗೊಳಪಡಿಸಿದನು. ಆದರೆ ಅನಂತರ ಹಿಂದುಗಳು ಹರಿಜನರನ್ನು ಕರೆದು ಆ ನಾಪಿತನಿಂದ ಕೆಲಸ ಮಾಡಿಸಿಕೊಂಡರೆ ಅವರೆಲ್ಲಾ ದಂಡತೆರಬೇಕಾಗುವುದೆಂದು ಹೇಳಿದರು..... ಕಿಡಾರಪಟ್ಟಿಯಲ್ಲಿ ಹರಿಜನರು ಹೆಣಗಳನ್ನು ರಸ್ತೆಗಳಲ್ಲಿ ತೆಗೆದುಕೊಂಡು ಹೋಗುವಂತಿಲ್ಲ. ರಸ್ತೆಗಳಲ್ಲಿ ಬೈಸಿಕಲ್ ಹತ್ತಿಕೊಂಡು ಹೋಗುವಂತಿಲ್ಲ.... ಕೆಲಪಾಲೂವಿನಲ್ಲಿ ಹರಿಜನರು ಸ್ನಾನಮಾಡಿದ ದನಕರುಗಳನ್ನು ತೊಳೆದ ನೀರನ್ನೇ ಕುಡಿಯಲು ಉಪಯೋಗಿಸಬೇಕು", ಎಂದು ಬರೆದಿದೆ. ಇಂತಹ ಘಟನೆಗಳು ಲೆಕ್ಕವಿಲ್ಲದಷ್ಟು, ಅಂತರ್ಗತ ಅವಿಚಾರಗಳು ಒಂದು ದಿನದಲ್ಲಿ, ಹತ್ತುವರ್ಷಗಳಲ್ಲಿ ಮಾಯವಾಗುವುದಿಲ್ಲ. ಆದರೆ ಉಪವಾಸ ಅಸ್ಪೃಶ್ಯತೆಯನ್ನು ಅವಶ್ಯ ಧರ್ಮದಿಂದ ನೈತಿಕ ಪಾಪವಾಗಿ ಮಾರ್ಪಡಿಸಿ, ಹರಿಜನರ ಹಕ್ಕುಗಳ ಪ್ರಾರಂಭೋತ್ಸವ ಮಾಡಿತು.

ಗಾಂಧಿಗೆ ಸಮಾಧಾನವಾಯಿತು. ಉಪವಾಸ ಮುಗಿದ ಐದು ದಿನಗಳ ನಂತರ, ಅನೇಕ ಘಂಟೆಗಳಕಾಲ ಬರೆದು, ನೂಲುತ್ತಿದ್ದನು. ಆತನ ತೂಕ ೯೯ ೩/೪ ಪೌಂಡುಗಳಷ್ಟಕ್ಕೆ ಏರಿತು. ಮಿಸ್ ಸ್ಲೇಡ್‌ಗೆ ಕಾಗದ

ಬರೆಯುತ್ತಾ "ಅಸ್ಪೃಶ್ಯರು ಯುಗಾಂತರಗಳಿಂದ ಅನುಭವಿಸುತ್ತಿರುವ ಕಷ್ಟ ನೋಡಿದರೆ ನನ್ನ ಉಪವಾಸ ಲೆಕ್ಕಕ್ಕೇ ಬರದು. ಆದುದರಿಂದ ನಾನು "ದೇವರು ದೊಡ್ಡವನು, ದಯಾಮಯನು ಎಂದು ಹಾಡಿರುತ್ತೇನೆ. ಆತನು ಸೆರೆಯಲ್ಲಿಯೇ ಇದ್ದನು.

೨೧. ವೈಯಕ್ತಿಕ

೧೯೩೩ರ ಮೇ ೮ರಲ್ಲಿ ಒಬ್ಬ ಸುಂದರಿಯಾದ ಅಮೆರಿಕಾ ಹುಡುಗಿಯಿಂದ ಆಶ್ರಮದಲ್ಲಿ ತೊಂದರೆಯಾಯಿತೆಂದು ಗಾಂಧಿ ಮೂರುವಾರ ಉಪವಾಸ ಆರಂಭಿಸಿದನು. ಮೊದಲದಿನವೇ ಸರ್ಕಾರ ಆತನನ್ನು ಬಿಡುಗಡೆ ಮಾಡಿತು; ಹರಿಜನರಿಗೋಸ್ಕರ ಆತನು ಮಾಡಿದ ಮಹಾ ಉಪವಾಸದ ನೆನಪಿನಿಂದ ಮಹಾತ್ಮನ ಸಾವಿನ ಹೊಣೆಯಿಂದ ಅದು ತಪ್ಪಿಸಿಕೊಂಡಿತು. ಆದರೆ ಉಪವಾಸದಿಂದ ತೊಂದರೆಯಾಗಲಿಲ್ಲ. ದೇಹ ಮನಸ್ಸುಗಳೆರಡೂ ವಿಶ್ರಾಂತಿ ಪಡೆದುವು.

ಸಬರ್ಮತಿ ಆಶ್ರಮದ ಮೇಲ್ವಿಚಾರಣೆಯನ್ನು ಕೆಲವು ಹರಿಜನರಿಗೆ ವಹಿಸಿ ತಾನು ಇಂಡಿಯಾದ ಮಧ್ಯಪ್ರದೇಶದಲ್ಲಿದ್ದ ವಾರ್ಧಾದಲ್ಲಿ ನಿಂತನು. ಕೆಲವು ಕಾಲದ ನಂತರ ವಾರ್ಧಾಕ್ಕೆ ಕೆಲವುಮೈಲಿ ದೂರದಲ್ಲಿದ್ದ ಸೇವಾಗ್ರಾಮ ಹಳ್ಳಿಯಲ್ಲಿ ನಿಂತನು. ೧೯೩೩ರ ನವೆಂಬರಿನಲ್ಲಿ ಹರಿಜನೋದ್ಧಾರಕ್ಕಾಗಿ ಹತ್ತು ತಿಂಗಳು ಪ್ರವಾಸ ಮಾಡಿದನು. ೧೯೩೪ರಿಂದ ೩೯ರ ವರೆಗಿನ ಅಂತರವನ್ನು ನೂಲುವುದು, ಮೂಲಶಿಕ್ಷಣ, ಹಿಂದೀ ಮತ್ತು ಹಿಂದೂಸ್ಥಾನೀ ಪ್ರಚಾರ, ಆಹಾರ ವಿಚಾರ, ಪ್ರಕೃತಿವೈದ್ಯ, ಅಸ್ಪೃಶ್ಯತಾ ನಿವಾರಣೆ, ಕಾಂಗ್ರೆಸ್ ಕೆಲಸಗಳಿಗಾಗಿ ವಿನಿಯೋಗಿಸಿದನು. ಕಾಂಗ್ರೆಸ್ ಪಕ್ಷದ ಮುಖ್ಯ ವ್ಯವಸ್ಥಾಪಕ ಸರ್ದಾರ್ ವಲ್ಲಭಾಯ್ ಪಟೇಲ್, ಚುರುಕುಬುದ್ಧಿ, ಅಮಿತ ಜ್ಞಾಪಕ ಶಕ್ತಿಯುಳ್ಳ ಈ ಲಾಯರ್, ವಿಶ್ವಾಸ ದೃಢತೆಗಳೆರಡನ್ನೂ ತೋರಿಸ ಬಲ್ಲವನಾಗಿ ಕಾಂಗ್ರೆಸಿನೊಳಗಿದ್ದ ಪ್ರಾಂತ್ಯ, ಜಾತಿ, ಮತ, ರಾಜಕೀಯಗಳ ಸಮಸ್ಯೆಗಳನ್ನು ಬಗೆಹರಿಸುವ ಶಕ್ತಿಯುಳ್ಳವನಾಗಿದ್ದನು. ಕಾಂಗ್ರೆಸ್ಸನ್ನು ಜನಪ್ರಿಯಮಾಡಲು ಮುಖ್ಯ ಕಾರಣನಾದವನು ಚಲುವನಾದ, ಸೂಕ್ಷ್ಮ ಸ್ವಭಾವದ ಜವಹರ್‌ಲಾಲ್ ನೆಹ್ರೂ. ಈತನಿಗೆ ಸಮಾಜವಾದದಲ್ಲಿ ವಿಶ್ವಾಸವಿದ್ದು ಯುವಕರಿಗೂ, ಪ್ರಜ್ಞಾವಂತರಿಗೂ ತನ್ನ ವಾಕ್ಶಕ್ತಿಯಿಂದಲೂ

ನಡತೆಯಿಂದಲೂ ಪ್ರಿಯನಾಗಿದ್ದನು. ಗಾಂಧಿ ಕಾಂಗ್ರೆಸ್ ಸಂಸ್ಥೆಗೆ ಗಮನ ಕೊಟ್ಟರೂ, ಸಮಾಜ ಸುಧಾರಣೆಯಕಡೆ ಹೆಚ್ಚು ಗಮನಕೊಟ್ಟನು. ತನ್ನ ಪತ್ರಿಕೆಯಲ್ಲಿ, ಗೊಬ್ಬರ ತಯಾರಿಸುವ ವಿಧಾನವನ್ನೂ, ಹಾವಿನ ವಿಷಕ್ಕೆ ಔಷಧಿಯನ್ನೂ, ಮಲೇರಿಯಾ ವಾಸಿಮಾಡುವ ವಿಧಾನವನ್ನೂ ಬರೆದನು. ಕಡಲೇಕಾಯಿಯ ಒಳ್ಳೆಯ ಗುಣಗಳನ್ನೂ ವರ್ಣಿಸಿದನು. ಕಡಲೇಕಾಯಿ ಸಂಸ್ಥೆಗಳಂತೆ, ಮತದಾನದಂತೆ, ಸಮ್ಮೇಳನಗಳಂತೆ ರಾಜಕೀಯಕ್ಕೆ ಸೇರಿತ್ತು. ಇಂಡಿಯಾದೇಶಕ್ಕೆ ಸಂಬಂಧಪಟ್ಟ ಯಾವುದೂ ಆತನಿಗೆ ಪರಕೀಯವಾಗಿರಲಿಲ್ಲ. ಆತನೇ ಇಂಡಿಯಾ; ಇಂಡಿಯಾ ಆತನನ್ನು ತನ್ನದಾಗಿ ಮಾಡಿಕೊಂಡಿತ್ತು. ಎಲ್ಲಾ ಪ್ರಶ್ನೆ ಸಮಸ್ಯೆಗಳನ್ನೂ ಆತನಬಳಿಗೆ ತರುತ್ತಿದ್ದರು; ಆತನ ಅಭಿಪ್ರಾಯಗಳಿಗೆ ಕಾನೂನಿನ ಅಧಿಕಾರ. ನ್ಯಾಯಾಲಯದ ತೀರ್ಪಿನ ಗೌರವವಿತ್ತು. ಆತನು ಗೋಡೆಗಳಿಂದ ಸುತ್ತುವರಿಯಲ್ಪಡದೆ ಎಲ್ಲರಿಗೂ ಸುಲಭನಾಗಿದ್ದನು. ಬಹಿರಂಗವಾಗಿ ಊಟ, ನಿದ್ದೆ, ನಡಿಗೆ, ಮಾತು, ಕೆಲಸ, ಓದು, ನೂಲುವುದು ಎಲ್ಲವನ್ನೂ ನಡೆಸುತ್ತಿದ್ದರು. ಆತನ ಪ್ರತಿ ಕಾರ್ಯ, ಮಾತು, ಸರ್ವರಿಗೂ ಸೇರಿತ್ತು. ರೋಗದಿಂದ ನರಳುತ್ತಿದ್ದ ಕರುವೊಂದನ್ನು ಡಾಕ್ಟರ ಸಹಾಯದಿಂದ ಆತನು ಕೊಲ್ಲಿಸಿದರೆ ತೀಕ್ಷ್ಣ ನಿಂದಾಪತ್ರಗಳು ಅಸಂಖ್ಯಾತವಾಗಿ ಬರುತ್ತಿದ್ದುವು. ತಾನು ಮಾಡಿದುದೇ ಸರಿಯೆಂದು ಗಾಂಧಿ ಸಾಧಿಸುತ್ತಿದ್ದನು. ಒಬ್ಬ ಬಟ್ಟೆ ವ್ಯಾಪಾರಿ ಅರವತ್ತು ಬೀದಿನಾಯಿಗಳನ್ನು ಕೊಲ್ಲಿಸಿದಾಗ "ಆತನೇನು ಮಾಡಲು ಸಾಧ್ಯ", ಎಂದು ಗಾಂಧಿ ಹೇಳಿದುದರಿಂದ ಜನರು ಬಹಳ ಉದ್ರೇಕದಿಂದ ಪತ್ರಗಳನ್ನು ಬರೆದರು. ಟೀಕೆ ಮಾಡಿದವರು "ಇದು ಹಿಂದೂಮತಕ್ಕೆ ವಿರುದ್ಧ" ಎಂದು ಅರಚಿದರು. ತನ್ನ ಪತ್ರಿಕೆಯ ತುಂಬಾ ಅವರ ಪತ್ರಗಳನ್ನು ಪ್ರಕಟಿಸಿದನು. ಪಾಶ್ಚಾತ್ಯ ಕ್ರೌರ್ಯಕ್ಕೆ ತಲೆಬಾಗಿದನೆಂದು ಗಾಂಧಿಯನ್ನು ದೂಷಿಸಿದರು. ಆತನು ಚುಚ್ಚುವಂಥಾ ಉತ್ತರ ಕೊಟ್ಟನು. ನಿಧಾನವಾಗಿ "ಪಶ್ಚಿಮದಲ್ಲಿ ಅನುಕಂಪ ಕಡಿಮೆಯಾಗಿರಬಹುದು, ಆದರೆ ನಮಗಿಂತ ಅವರ ಆಚರಣೆ ಹೆಚ್ಚು ಪರಿಪೂರ್ಣವಾದುದು. ನಾವು ಉನ್ನತ ಧ್ಯೇಯದಿಂದ ತೃಪ್ತಿಗೊಂಡು ಅದರಂತೆ ಆಚರಿಸಲು ಸೋಮಾರಿತನ ತೋರುತ್ತೇವೆ.

ಬಾಲ ವಿಧವೆಯರ ವಿಚಾರದಲ್ಲೂ ಆತನು ಸಹಾನುಭೂತಿ ತೋರಿಸಿದನು. ಚಿಕ್ಕ ಹುಡುಗರಿಗಾಗಲಿ, ಮುದುಕರಿಗಾಗಲಿ ಪುಟ್ಟ ಹುಡುಗಿಯರನ್ನು ವಿವಾಹಮಾಡಿಕೊಡುತ್ತಿದ್ದರು. ಗಂಡ ಸತ್ತರೆ ಆ ಮೂರು ವರ್ಷದ್ದೋ, ಆರು ವರ್ಷದ್ದೋ ವಿಧವೆ ಹಿಂದೂ ಕಾನೂನಿನ ಪ್ರಕಾರ ಪುನಃ ವಿವಾಹವಾಗುವಂತಿರಲಿಲ್ಲ. "ಈ ಚಿಕ್ಕ ವಿಧವೆಯರ ಇರುವಿಕೆ ಹಿಂದೂಧರ್ಮದ ಒಂದು ದೊಡ್ಡ ದೋಷ. ಬಾಲವಿಧವೆಯರ ಪುನರ್ವಿವಾಹ ಅಂತಹವರ ತಂದೆತಾಯಿಗಳ ಅವಶ್ಯ ಕರ್ತವ್ಯ," ಎಂದು ಗಾಂಧಿ ಬರೆದನು. ಅದು ಧರ್ಮವಿರುದ್ಧವೆಂದು ಹೇಳಿದವರಿಗೆ ಗಾಂಧಿ, "ಅವರಿಗೆ ಮದುವೆ ಆಗಿಯೇ ಇರಲಿಲ್ಲ", ಎಂದು ಉತ್ತರವಿತ್ತನು. ಪ್ರತಿಯೊಬ್ಬ ಮಾನವನಿಗೂ ಪ್ರೇಮದ ಅಗತ್ಯವಿದೆಯೆಂದೂ, ಬಾಲವಿಧವೆಯರು ಪ್ರೇಮ ವಂಚಿತರಾದವರೆಂದೂ ಹೇಳಿದನು.

ಆದರೆ ದೈಹಿಕ ಪ್ರೇಮ ಮಿತವಾಗಿರಬೇಕು. ಅಧಿಕ ಕಾಮೇಚ್ಛೆಯಿಂದ ಇಂಡಿಯಾ ದೇಶೀಯರು ಬಲವಿಹೀನರಾಗುವರೆಂದು ಆತನು ಅಭಿಪ್ರಾಯಪಟ್ಟನು. ೧೯೩೫ರ ಡಿಸೆಂಬರಿನಲ್ಲಿ ಮಾರ್ಗರೆಟ್ ಸ್ಯಾಂಗರ್ ಸಂತಾನ ನಿರೋಧ ಪದ್ಧತಿಗೆ ಆತನ ಬೆಂಬಲ ಬೇಡಿದಾಗ ಆತನಿಂದ ಯಾವ ಪ್ರೋತ್ಸಾಹವೂ ಸಿಕ್ಕಲಿಲ್ಲ. "ಸಂತಾನ ನಿರೋಧ ಕೃತಕ ಸಲಕರಣೆಗಳ ಸಹಾಯದಿಂದ ನ್ಯಾಯವೆಂದು ಕೆಲವು ಸಂದರ್ಭಗಳಲ್ಲಿ ಭಾವಿಸಿದರೂ ದಿನಕ್ಕೆ ಬಿಡಿಕಾಸು ಸಂಪಾದಿಸುವ ಲಕ್ಷಾಂತರ ಜನರು ಅದರಿಂದ ಉಪಯೋಗ ಪಡೆಯಲು ಸಾಧ್ಯವಿಲ್ಲ". ಇಂಡಿಯಾ ದೇಶದ ಜನಸಂಖ್ಯೆಯನ್ನು ತಗ್ಗಿಸಬೇಕೆಂದು ಆತನಿಗೆ ತಿಳಿದಿತ್ತು. "ಸ್ವಂತ ಇಚ್ಛೆಯಿಂದ ಜನರ ಸಂಖ್ಯೆಯನ್ನು ಕಡಿಮೆಮಾಡುವ ಮಾರ್ಗ ನನಗೆ ತಿಳಿದಿದ್ದರೆ, ಇಂಡಿಯಾದ ಈ ದುಃಸ್ಥಿತಿಯಲ್ಲಿ ನಾನು ಅದಕ್ಕೆ ಬೆಂಬಲಕೊಡುತ್ತಿದ್ದೆ", ಎಂದು ಆತನು ಸಿ. ಎಫ್. ಆಂಡ್ರೂಸ್‌ಗೆ ಬರೆದನು. ಆತನಿಗಿಷ್ಟವಾದುದು ಮನಸ್ಸಿನ ಹತೋಟಿ: "ಆತ್ಮ ಸಂಯಮವೇ ಸಂತಾನನಿರೋಧಕ್ಕೆ ಖಂಡಿತವಾದ ದಾರಿ". ಜನಸಂಖ್ಯೆಯನ್ನು ಪರಿಮಿತಿಗೊಳಿಸಲು ವಿವಾಹದ ವಯಸ್ಸನ್ನು ಹೆಂಗಸರಿಗೆ ೨೧, ಗಂಡಸರಿಗೆ ೨೫ರ ಮೇಲೆ ಗೊತ್ತುಮಾಡಬೇಕೆಂದು ಅಭಿಪ್ರಾಯಪಟ್ಟನು. ತನ್ನ ಮಕ್ಕಳು ಬೇಗ ಮದುವೆಯಾಗದಂತೆ ಪ್ರಯತ್ನಿಸಿದನು.

ಆದರೆ ೧೯೪೦ ರಲ್ಲಿ, ೧೯೫೦ ರಲ್ಲಿ ವರ್ಷಕ್ಕೆ ೫ ಕೋಟಿ ಜನಸಂಖ್ಯೆ ಹೆಚ್ಚಾದುದರಿಂದ ಸ್ವಾತಂತ್ರ್ಯೋತ್ತರ ಆರ್ಥಿಕ ಪ್ರಗತಿಯಿಂದಲೂ ಪ್ರಯೋಜನವಾಗಲಿಲ್ಲ. ಮದುವೆಯ ವಯಸ್ಸನ್ನು ಸ್ವಲ್ಪಕಾಲ ಹೆಚ್ಚಿಸಿದುದರಿಂದ ಅದರ ದುಷ್ಪರಿಣಾಮವನ್ನು ತಡೆಗಟ್ಟಲು ಸಾಧ್ಯವಾಗಿ ತೋರಲಿಲ್ಲ.

ಮಕ್ಕಳಿಗಾಗಿ ಅಲ್ಲದ ಸಂಭೋಗ ಅವಶ್ಯವಲ್ಲವೆಂದು ಗಾಂಧಿ ಹೇಳಿದಾಗ ಆತನಿಗೆ ತನ್ನ ಯೌವ್ವನಕಾಲ ಮರೆತಿರಬೇಕು. ಮುಂದೆಯೂ ಕೂಡ, ೩೭ನೆಯ ವಯಸ್ಸಿನಿಂದ ಸಾಯುವವರೆಗೂ ಆತನು ಸನ್ಯಾಸಿಯಾಗಿದ್ದರೂ, ಕಾಮೇಚ್ಛೆ ಹಿಂಗಲಿಲ್ಲ. ೬೭ ವರ್ಷದ ಮಹಾತ್ಮ ೧೯೩೬ರ ಡಿಸೆಂಬರ್ ೨೬ರ ಹರಿಜನಪತ್ರಿಕೆಯಲ್ಲಿ, "ಕೆಲವು ತಿಂಗಳ ಕೆಳಗೆ ನಾನು ಬೊಂಬಾಯಿಯಲ್ಲಿದ್ದಾಗ ನನಗೆ ಸ್ತ್ರೀಸಂಭೋಗದ ಆಸೆ ಪ್ರಬಲವಾಗಿ ಉಂಟಾಯಿತು. ೪೦ ವರ್ಷಗಳಿಂದ ಆ ಇಚ್ಛೆಯನ್ನು ಅಮುಕಿಡಲು ಪ್ರಯತ್ನಿಸಿದ್ದ ನನಗೆ ಇದರಿಂದ ತುಂಬಾ ನೋವುಂಟಾಯಿತು. ನಾನು ಆ ಇಚ್ಛೆಯನ್ನು ಜಯಿಸಿದರೂ, ಅದು ನನ್ನ ಜೀವನದ ವಿಷಗಳಿಗೆ. ನಾನು ಪರಾಜಯ ಹೊಂದಿದ್ದರೆ ಸಂಪೂರ್ಣವಾಗಿ ನಾಶವಾಗುತ್ತಿದ್ದೆ", ಎಂದು ಬರೆದಿದ್ದಾರೆ. ಅನೇಕರು ಈ ವಿಚಾರಗಳನ್ನು ಹೇಳುವುದು ಅವಶ್ಯವೆಂದು ಭಾವಿಸುವುದಿಲ್ಲ. ಆದರೆ ಜಗತ್ತು ತನ್ನ ವಿಚಾರವನ್ನೆಲ್ಲಾ ಸತ್ಯವಾಗಿ ತಿಳಿಯಬೇಕೆಂದು ಆತನ ಆಸೆ; ಅದರಿಂದ ಬೇರೆಯವರಿಗೆ ಸಹಾಯವಾಗುವುದೆಂದು ಆತನ ಅಭಿಲಾಷೆ. "ಒಬ್ಬನಿಗೆ ಸಾಧ್ಯವಾದುದು ಎಲ್ಲರಿಗೂ ಸಾಧ್ಯವೆಂದು ನಾನು ತಿಳಿದಿರುವುದರಿಂದ ಯಾವ ಮುಸುಕೂ ಇಲ್ಲದೆ ನನ್ನ ಪ್ರಯೋಗಗಳನ್ನು ನಡೆಸಿದ್ದೇನೆ".

ಸಾಮಾಜಿಕ, ವೈಯಕ್ತಿಕ ಸಮಸ್ಯೆಗಳಲ್ಲಿ ಆತನಿಗಿದ್ದ ಆಸಕ್ತಿಯನ್ನು ನೋಡಿ ಎಲ್ಲಾ ವಿಧದ ಮೋಸಗಾರರೂ, ಚಳುವಳಿಕಾರರೂ ಆತನ ಆಶ್ರಮದ ತೆರೆದ ಬಾಗಿಲಿನ ಬಳಿ ಸೇರುತ್ತಿದ್ದರು. ಸ್ನೇಹಿತರೂ, ರಾಜಕೀಯ ವ್ಯಕ್ತಿಗಳೂ ತಮ್ಮ ವಿವಾಹ ಸಮಸ್ಯೆಗಳನ್ನು ಆತನ ಬಳಿಗೆ ತರುತ್ತಿದ್ದರು. ಆತನು ಅಸಂಖ್ಯಾತರಾದ ಇಂಡಿಯನ್ನರಿಗೆ "ಬಾಪು"–ತಂದೆಯಾಗಿದ್ದನು. ಆತನ ಹಿತೋಕ್ತಿ ತಮಗೆ ಒಳ್ಳೆಯದನ್ನುಂಟುಮಾಡುವುದೆಂದು ಅವರೇಕೆ ತಿಳಿದರೋ ಅದು ಬಿಡಿಸಲಾರದ ಸಮಸ್ಯೆ. ಆತನೇ ಆದರ್ಶಪತಿಯಾಗಿ,

ತಂದೆಯಾಗಿ ಇರಲಿಲ್ಲ. "ನಿಮ್ಮ ಸಂಸಾರ ಹೇಗಿದೆ?" ಎಂದು ಒಬ್ಬ ವಿದೇಶೀಯ ಕೇಳಿದನು; ಅಂತಹ ಪ್ರಶ್ನೆ ವಿದೇಶೀಯನಿಂದಲೇ ಬರಬಹುದಾಗಿತ್ತು. "ಇಂಡಿಯಾ ಎಲ್ಲಾ ನನ್ನ ಸಂಸಾರ", ಎಂದು ಗಾಂಧಿ ಉತ್ತರವಿತ್ತನು. ಇದರಿಂದ ಆತನಿಗೆ ಹೆಂಡತಿ ಮಕ್ಕಳಲ್ಲಿ ವೈಯಕ್ತಿಕ ಆಸಕ್ತಿ ಇರಲಿಲ್ಲ. ಮೊದಮೊದಲು ಕಸ್ತೂರಿಬಾಯಿಯೊಡನೆ ಸಂಬಂಧದಲ್ಲಿ ಘರ್ಷಣೆಯಿದ್ದರೂ, ಕ್ರಮೇಣ ಅದು ಕಡಿಮೆಯಾಗಿ ಅವರು ಆದರ್ಶ ದಂಪತಿಗಳಾದರು. ಆಕೆ ಸೇವೆಯ ತದ್ರೂಪವಾಗಿಯೂ, ಆತನು ದಾಕ್ಷಿಣ್ಯದ ಮಾದರಿಯಾಗಿಯೂ ಇದ್ದರು. ಆಕೆ ತಾನು ಗಾಂಧಿಯ ಹೆಂಡತಿಯೆಂದು ಯಾವ ಸೌಕರ್ಯಕ್ಕೂ ಆಶಿಸುತ್ತಿರಲಿಲ್ಲ; ಕಷ್ಟಪಡಲು ಹಿಂಜರಿಯುತ್ತಿರಲಿಲ್ಲ. ತನಗೂ ತನ್ನ ಪ್ರಸಿದ್ಧ ಪತಿಗೂ ನಡುವೆ ಸಿಲ್ಲುತ್ತಿದ್ದ ಯುವತಿಯರ ತಂಡವನ್ನು ಆಕೆ ಗಮನಿಸುತ್ತಲೇ ಇರಲಿಲ್ಲ. ೧೯೪೨ರಲ್ಲಿ ನಾನು ಗಾಂಧಿಯೊಡನೆ ಕಳೆದ ಒಂದುವಾರ ಆಕೆಯಾಗಲಿ, ಆತನಾಗಲಿ. ಪರಸ್ಪರವಾಗಿ ಒಂದುಮಾತು ಕೂಡ ಆಡಲಿಲ್ಲ. ಊಟಮಾಡುವಾಗ, ಪ್ರಾರ್ಥನೆಯ ಕಾಲದಲ್ಲಿ ಆತನ ಎಡಭುಜದ ಹಿಂದೆ ಕುಳಿತು ಆತನನ್ನೇ ನೋಡುತ್ತಾ ಬೀಸಣಿಗೆಯಿಂದ ಬೀಸುತ್ತಿದ್ದಳು. ಆಕೆಯು ಕಡೆ ನೋಡದಿದ್ದರೂ, ಆಕೆಯ ಸಾಮೀಪ್ಯ ಆತನಿಗೆ ಅಗತ್ಯವಾಗಿದ್ದು, ಪರಸ್ಪರ ಸಂಪೂರ್ಣ ಸಾಮರಸ್ಯವಿದ್ದಂತಿದ್ದಿತು. ಆಕೆ ಮಹಾತ್ಮನ ನೆರಳಾಗಿದ್ದರೂ ಆಕೆಗೂ ತನ್ನದೇ ಆದ ತೀಕ್ಷ್ಣ ವ್ಯಕ್ತಿತ್ವವಿತ್ತು. ಗುಳಿಬಿದ್ದ ಕೆನ್ನೆಗಳು, ತೆಳುವಾದ ತುಟಿಗಳು ನೋವನ್ನೂ, ಅರ್ಪಣೆಯನ್ನೂ, ಮನೋನಿಶ್ಚಯವನ್ನೂ ತೋರಿಸುತ್ತಿದ್ದುವು. ಆಕೆ ಎಂದೂ ಆತನಿಗೆ ಸೋಲನ್ನೊಪ್ಪಿಕೊಳ್ಳದುದು ಆತನಿಗೆ ಸಂತೋಷದ ವಿಚಾರವಾಗಿತ್ತು. ಕಸ್ತೂರಿಬಾಯಿಯನ್ನು ಆತನು "ಬಾ", "ತಾಯಿ" ಎಂದು ಕರೆಯುತ್ತಿದ್ದನು. "ಬಾ ನನ್ನೊಡನೆ ಇದ್ದರೂ ಟೀ ಕುಡಿಯುತ್ತಾಳೆ". ಆಕೆ ಆತನ ಇಚ್ಛೆಗೆ ವಿರೋಧವಾಗಿ ಕಾಫಿಯನ್ನೂ ಕುಡಿದಳು. "ನಾನೇ ಬೇಕಾದರೆ ಪ್ರೀತಿಯಿಂದ ಅದನ್ನು ಆಕೆಗೆ ತಯಾರಿಸಿಕೊಡುತ್ತೇನೆ." ಎಂದು ಆತ ಹೇಳಿದನು. ಆಕೆಯಲ್ಲಿ ಆತನ ಪ್ರೇಮ ಬೆಳೆಯುತ್ತಾ ಹೋಯಿತು.

ಆದರೆ ಮಕ್ಕಳಿಗೆ ಸರಿಯಾದ ತಂದೆಯಾಗಲು ಆತನಿಗೆ ಸಾಧ್ಯವಾಗಲಿಲ್ಲ. ವಿದ್ಯಾಭ್ಯಾಸಕ್ಕಿಂತ ಗುಣವೇ ಮುಖ್ಯವೆಂದೂ ಜನಸೇವೆಯೇ ನೌಕ

ರಿಗಿಂತ ಒಳ್ಳೆಯದೆಂದೂ ಭಾವಿಸಿ, ಅವರೆಲ್ಲಾ ಪುಟ್ಟಮಹಾತ್ಮರಾಗುವ ರೆಂದು ನಿರೀಕ್ಷಿಸಿ, ಅವರಿಗೆ ಸರಿಯಾದ ವಿದ್ಯಾಭ್ಯಾಸ ಕೊಡಿಸಲಿಲ್ಲ. ಅವ ರಿಗೆ ಅಸಮಾಧಾನವಾಯಿತು. ಹಿರಿಯಮಗ ಹರಿಲಾಲ ಕುಡುಕನೂ, ವಿಲಾಸಿಯೂ ಆಗಿ, ಹೆಂಡತಿ ಮಕ್ಕಳಿಂದ! ದೂರವಾಗಿ, ಮಹಾತ್ಮರಿಗೆ ನೋವುಂಟುಮಾಡಲು ಅಬ್ದುಲ್ಲಾ ಎಂಬ ಹೆಸರಿನಿಂದ ಮಹಮ್ಮದೀಯ ಮತಕ್ಕೆ ಸೇರಿದನು. ಎರಡನೆಯ ಮಗ ಮಣಿಲಾಲ ತಂದೆಯ ಶಿಕ್ಷೆಗೆ ತಲೆ ಬಾಗಿ, ತಂದೆಯ ಆದರ್ಶವನ್ನೇ ಅನುಸರಿಸಿ, ದಕ್ಷಿಣ ಆಫ್ರಿಕದ ಮುಖ್ಯ ಮಂತ್ರಿ ಮಲಾನರ ಆಧುನಿಕ ಹಿಂಸೆಗೊಳಗಾದ ಕರಿಯಜನರ ನಾಯಕ ನಾದನು. ರಾಮದಾಸ ಒಂದು ಸಣ್ಣ ಪಟ್ಟಣದಲ್ಲಿ ವ್ಯಾಪಾರದ ಉದ್ಯೋಗ ಮಾಡಿಕೊಂಡಿದ್ದನು. ಕಿರಿಯವನಾದ ದೇವದಾಸನೊಬ್ಬನೇ ತಂದೆಯ ಬಳಿಯಿದ್ದು ಆಗಾಗ ಆತನ ಕಾರ್ಯದರ್ಶಿಯ ಕೆಲಸ ಮಾಡುತ್ತಿದ್ದನು. ಮಹಾತ್ಮನಿಗೆ ಮಕ್ಕಳಿಗಿಂತ ಮೊಮ್ಮಕ್ಕಳಲ್ಲಿ ಪ್ರೀತಿ ಹೆಚ್ಚಾಗಿತ್ತೆಂದು ಆತನು ಗಮನಿಸಿದನು. ಗಾಂಧಿಗೆ ಅಮರತ್ವದಲ್ಲಿ ವೈಯಕ್ತಿಕವಲ್ಲದ ಅಭಿ ಪ್ರಾಯವಿದ್ದಿರಬಹುದು. ಯಾರೋ ಒಬ್ಬರು,—ಒಬ್ಬ ಕಲೆಗಾರ, ಕವಿ, ಪ್ರತಿಭಾಶಾಲಿ ಮಕ್ಕಳಲ್ಲಿ ತನ್ನ ಪ್ರತಿಭೆಯನ್ನು ಜಗತ್ತಿಗೆ ನೀಡಲಾರನೆ?" ಎಂದು ಕೇಳಲು, ಮಹಾತ್ಮ "ಖಂಡಿತವಾಗಿ ಇಲ್ಲ. ಮಕ್ಕಳಿಗಿಂತ ಆತನಿಗೆ ಶಿಷ್ಯರೇ ಹೆಚ್ಚು," ಎಂದನು. ಮಕ್ಕಳಲ್ಲಿಯೂ ಅವರ ನಿಷ್ಕಲ್ಮಷ ಮನಸ್ಸಿ ನಲ್ಲೂ ಆತನಿಗೆ ಆನಂದವಿತ್ತು. "ದೊಡ್ಡವರಾದ ಮೇಲೆಯೇ ಕೆಡುಕು ತಲೆ ಯನ್ನು ಹೊಗುವುದು". ಮಕ್ಕಳೊಡನೆ ಆಶ್ರಮದಲ್ಲಿ ತಮಾಷೆ ಮಾಡುತ್ತಿ ದ್ದನು. ಒಂದು ಮಗುವನ್ನು ಮುದ್ದಾಡುತ್ತಾ, "ಇವಳಿಂದ ನನಗೆ ವಿಶ್ರಾಂತಿ," ಎಂದನು. ಒಂದು ಎಳೆಯ ಮಗುವಿನ ಮುಖಕ್ಕೆ ಮುಖ ವಿಟ್ಟುಕೊಂಡಿರುವ ಮತ್ತು ರಾಮದಾಸನ ಮಗುವಿನ ಹಿಂದೆ ಅದು ಹಿಡಿದ ಕಟ್ಟಿಗೆಯನ್ನು ಹಿಡಿದುಕೊಂಡು ಓಡುತ್ತಿರುವ ಪಠಗಳು ತುಂಬಾ ಮುದ್ದಾಗಿವೆ.

ಗಾಂಧಿಯೆಂದರೆ ದೊಡ್ಡವರಿಗಾಗಲಿ, ಚಿಕ್ಕವರಿಗಾಗಲಿ ಹೆದರಿಕೆಯಿರ ಲಿಲ್ಲ. ಆಶ್ರಮದಲ್ಲೂ, ಹೊರಗೂ ಆತನೊಡನೆ ಎಲ್ಲರಿಗೂ ಸರಳವಾದ, ನೇರವಾದ, ವಿಶ್ವಾಸಯುಕ್ತವಾದ ಸಂಬಂಧವಿತ್ತು. ಪ್ರತಿಕಾಗದಕ್ಕೂ ಸರಳ

ವಾದ ಉತ್ತರ ಬರೆಯುತ್ತಿದ್ದರು; ಸ್ವಂತ ತೊಂದರೆಗಳನ್ನು ತಿಳಿಸಲು ಜನ ಬಂದರೆ ತಾಳ್ಮೆಯಿಂದ ಸಮಾಧಾನ ಮಾಡುತ್ತಿದ್ದನು. ೧೯೪೬ ರ ಮುಖ್ಯ ಸಂಧಾನಗಳು ನಡೆಯುತ್ತಿದ್ದಾಗ, ಮಂತ್ರಿಗಳೂ, ರಾಜಕಾರಣಿಗಳೂ, ಆತನ ಸಮಯ ಕಾಯುತ್ತಿದ್ದಾಗ, ಕಾಲು ಗಂಟೆಯಕಾಲ ಕುಂಟುತ್ತಿದ್ದ ಒಬ್ಬ ಯುವತಿಯೊಡನೆಯೂ, ಅನಂತರ ಒಬ್ಬ ಯುವಕನೊಡನೆಯೂ ಮಾತನಾಡುತ್ತಾ ತಿರುಗುತ್ತಿದ್ದರು. ಯಾರೆಂದು ವಿಚಾರಿಸಿದಾಗ ಅವರು ಅಸ್ಪೃಶ್ಯ ದಂಪತಿಗಳೆಂದೂ, ಗಾಂಧಿ ಅವರ ವೈಮನಸ್ಯವನ್ನು ಸರಿಪಡಿಸಲು ಪ್ರಯತ್ನಿಸುತ್ತಿದ್ದನೆಂದೂ ತಿಳಿಯಿತು. ಆತನು ಕೊಟ್ಟ, ಪಡೆದ ಪ್ರೇಮಕ್ಕೆ ಮಿತಿಯಿಲ್ಲ. ಆತನಲ್ಲಿ ಸ್ತ್ರೀತ್ವದ ಲಕ್ಷಣಗಳಿದ್ದುವು. ತಾನು ವಿಧವೆಯಾದ ತಾಯಿಯೆಂದು ಹೇಳಿಕೊಳ್ಳುತ್ತಿದ್ದನು. ಒಂದುಬಾರಿ ಶ್ರೀಮತಿ ನಾಯ ಡೂಗೆ ಬರೆಯುತ್ತಾ, "ನನ್ನಲ್ಲಿರುವ ಸ್ತ್ರೀತ್ವವನ್ನು ನೀವು ಗುರುತಿಸದೆ ಹೋಗಲಿಲ್ಲವೆ?" ಎಂದು ಬರೆದನು. ಪರಿಶುದ್ಧತೆ, ದುಡ್ಡಿನ ವಿಚಾರದಲ್ಲಿ ಹಿಡಿತ, ದಯೆ, ಇವುಗಳಿಗೆ ಆತನು ಹೆಚ್ಚು ಗಮನ ಕೊಡುತ್ತಿದ್ದನು. ನೋವನ್ನನುಭವಿಸುವ ಶಕ್ತಿ, ಸಾಮರಸ್ಯತೆ, ನೂಲುವುದು, ಅಹಿಂಸೆ, ಇವೆಲ್ಲಾ ಸ್ತ್ರೀತ್ವದ ಲಕ್ಷಣಗಳಾಗಿದ್ದುವು. ರೋಗಿಗಳಿಗೂ, ದುರ್ಬಲರಿಗೂ ಸೇವೆಮಾಡಲು ಸಂತೋಷವಿದ್ದರೂ, ಆ ಸೇವೆ ಸ್ವೀಕರಿಸಲು ಆತನು ಸಿದ್ಧನಾಗಿರಲಿಲ್ಲ. ಗಂಡಸಿನ ಮನಶ್ಶಕ್ತಿ, ದೇಹಶಕ್ತಿಗಳಿದ್ದರೂ ಆತನಲ್ಲಿ ಅಪೂರ್ವ ಮಾರ್ದವವಿತ್ತು. ಮೃದುತ್ವವಿದ್ದರೂ, ದೃಢನಿಶ್ಚಯವುಳ್ಳವನಾಗಿ, ತಗ್ಗಿದರೂ ಕಠಿಣನಾಗಿ, ಧೈರ್ಯಶಾಲಿಯಾದರೂ ವಿನೀತನಾಗಿದ್ದನು. ನಿರಂಕುಶ ಪ್ರಭುವಿನ ಶಕ್ತಿಯಿದ್ದರೂ, ಪ್ರಜಾರಾಜ್ಯದ ವಿಶ್ವಾಸಿಯಾಗಿದ್ದುದರಿಂದ, ಶಕ್ತಿಯಿಂದಲ್ಲದೆ ಸ್ನೇಹದಿಂದ ಗೆಲ್ಲುವ ಮನಸ್ಸು ಮಾಡಿದನು. ಕಬ್ಬಿಣದಿಂದ ಗೆದ್ದುದನ್ನು ಹತ್ತಿಯ ಮುಸುಕಿನಿಂದ ಮುಚ್ಚುತ್ತಿದ್ದನು. ಬುದ್ಧಿಶಕ್ತಿಗೆ ಗ್ರಹಣಶಕ್ತಿಯ ಸಹಾಯವಿತ್ತು. ಹೀಗೆ ತೇಪೆಯಿಲ್ಲದೆ ಸಮರಸವಾಗಿ ಸೇರಿದ ಪುರುಷಸ್ತ್ರೀ ಗುಣಗಳು ಗಾಂಧಿಯನ್ನು ಅರಿಯಲು ಕಷ್ಟವಾದರೂ, ಆಕರ್ಷಕವಾಗಿ ಮಾಡಿ ಆತನ ಜೀವನ ಮತ್ತು ಕೆಲಸದ ಅರಿವನ್ನುಂಟುಮಾಡಿಕೊಳ್ಳಲು ಸಹಾಯಕವಾಗಿವೆ.

## ೨೨. ಯೇಸುಕ್ರಿಸ್ತ ಮತ್ತು ಮಹಾತ್ಮಗಾಂಧಿ

ಗಾಂಧಿಯ ಪಾದದ ಬಳಿ ಶಿಷ್ಯರಾಗಿ ಬಂದವರಲ್ಲಿ ಕ್ರೈಸ್ತಪಾದ್ರಿಗಳು ಇದ್ದರು. ಆತನಿಗೆ ಏಸುವಿನಲ್ಲಿ ಪ್ರೀತಿಯಿತ್ತು; ಅಂಥ ಶ್ರದ್ಧೆಯಿದ್ದ ಕೆಲವು ಜನ ಹಿಂದುಗಳು ಆತನು ರಹಸ್ಯವಾಗಿ ಕ್ರೈಸ್ತಧರ್ಮಕ್ಕೆ ಸೇರಿದ್ದನೆನ್ನು ತ್ತಿದ್ದರು. ಇದು ದೂಷಣೆ ಮತ್ತು ಹೊಗಳಿಕೆ ಎಂದು ಆತನು ಭಾವಿಸಿದನು. ತಾನು ರಹಸ್ಯವಾಗಿ ಏನಾದರೂ ಆಗಬಲ್ಲೆನೆಂದುಕೊಳ್ಳುವವರೂ ಇದ್ದಾರೆಂ ಬುದರಿಂದ ದೂಷಣೆಯೂ, ಕ್ರೈಸ್ತಧರ್ಮದ ಸೌಂದರ್ಯವನ್ನು ಅರಿತು ಕೊಳ್ಳುವ ಶಕ್ತಿ ತನಗಿದೆಯೆಂದು ಇಷ್ಟವಿಲ್ಲದಿದ್ದರೂ ಒಪ್ಪಿಕೊಂಡುದರಿಂದ ಹೊಗಳಿಕೆಯೂ ಆಯಿತೆಂದು ಹೇಳಿದನು. ವಿಶಾಲಮನೋಭಾವವಿದ್ದುದ ರಿಂದ ಗಾಂಧಿ ವೇದಗಳೊಂದೇ ಭಗವದ್ವಾಕ್ಯಗಳೆಂದು ನಂಬಲಿಲ್ಲ. "ಬೈಬಲ್ ಖುರಾನ್ ಕೂಡ ಏಕಾಗಬಾರದು?" ಎಂದು ಕೇಳಿದನು. ಮತದ್ವೇಷ ಗಳೆಂದರೆ ಆತನಿಗೆ ಆಗದು. ೧೯೪೨ ರಲ್ಲಿ ನಾನು ಆತನ ಅತಿಥಿಯಾಗಿ ದ್ದಾಗ ಆತನ ಚಿಕ್ಕಗುಡಿಸಿಲಿನ ಮಣ್ಣು ಗೋಡೆಯ ಮೇಲೆ ಇದ್ದುದೊಂದೇ ಅಲಂಕಾರ—ಯೇಸುಕ್ರಿಸ್ತನ ಚಿತ್ರ. ಅದರ ಕೆಳಗೆ, "ಈತನೇ ನಮ್ಮ ಶಾಂತಿ," ಎಂದು ಬರೆದಿತ್ತು. ಆ ವಿಚಾರವಾಗಿ ಕೇಳಿ, "ನೀನು ಕ್ರೈಸ್ತ ನಲ್ಲವಲ್ಲಾ?" ಎಂದೆ.

"ನಾನು ಕ್ರೈಸ್ತ, ಹಿಂದು, ಮುಸ್ಲಿಂ, ಜ್ಯೂ," ಎಂದು ಉತ್ತರ ಕೊಟ್ಟನು. ಇದರಿಂದ ಆತನು ಅನೇಕ ಕ್ರೈಸ್ತರಿಗಿಂತ ಮೇಲ್ಮಟ್ಟದ ಕ್ರೈಸ್ತನಾದನು.

ಕ್ರೈಸ್ತಮತಪ್ರಚಾರಕರಿಗೆ ಗಾಂಧಿ ಒಂದು ಬಿಡಿಸಲಾಗದ ಸಮಸ್ಯೆ ಯಾದನು. ಹಿಂದುವಾದ ಆತನು ಲೋಕದಲ್ಲೇ ಮೇಲೆನಿಸಿದ ಕ್ರೈಸ್ತನಾಗಿ ದ್ದನು. ಇಂಡಿಯಾ ದೇಶದಲ್ಲಿ ಅನೇಕ ವರ್ಷಗಳನ್ನೂ, ಗಾಂಧಿಯ ಬಳಿ ಅನೇಕ ಘಂಟೆಗಳನ್ನೂ ಕಳೆದ ಡಾಕ್ಟರ್ ಇ. ಸ್ಟಾನ್ಲಿ ಜೋನ್ಸ್ ಕ್ರಿಸ್ತನಂ ತಹ ಒಬ್ಬ ಮನುಷ್ಯನನ್ನು ಯಾರೂ ಕ್ರೈಸ್ತನೆಂದೇ ಕರೆಯಲಿಲ್ಲ," ಎಂದರು.

" ದೇವರು ಅನೇಕ ಸಲಕರಣೆಗಳನ್ನುಪಯೋಗಿಸುತ್ತಾನೆ. ಆತನೇ ಮಹಾತ್ಮ ಗಾಂಧಿಯನ್ನು ತತ್ವಗಳನ್ನು ಕಳೆದುಕೊಂಡಿದ್ದ ಕ್ರೈಸ್ತಮತೋ

ದ್ಧಾರಕ್ಕಾಗಿ ಕಳುಹಿಸಿರಬಹುದು," ಎಂದು ಆತನು ಹೇಳಿದನು. ಎಲ್ಲಾ ದೇಶದ ಕ್ರೈಸ್ತರಿಗೂ ಗಾಂಧಿ ಇತ್ತ ಸಂದೇಶ ಇಪ್ಪತ್ತನೆಯ ಶತಮಾನದ ಮನುಷ್ಯನೂ ಕ್ರೈಸ್ತನಾಗಿರಬಹುದೆಂಬುದೇ. ಕಲ್ಕತ್ತ ಬಿಷಪ್ ಕಾಲೇಜಿನ ಉಪಾಧ್ಯಾಯರಾದ, ಸಿರಿಯನ್ ಕ್ರಿಶ್ಚಿಯನ್ನರಾದ ಎಸ್. ಕೆ. ಜಾರ್ಜ್ "ಕ್ರೈಸ್ತಧರ್ಮಕ್ಕೆ ಗಾಂಧಿಯ ಸವಾಲು" ಎಂಬ ಪುಸ್ತಕ ಬರೆದು ಅದನ್ನು "ಯೇಸುವನ್ನೂ ಆತನ ಸಂದೇಶವನ್ನೂ ನನಗೆ ಸತ್ಯವೆಂದು ತೋರಿದ ಮಹಾತ್ಮಗಾಂಧಿಗೆ" ಅರ್ಪಿಸಿದ್ದಾರೆ. ಮಲಬಾರಿನ ಸಿರಿಯನ್ ಕ್ರಿಶ್ಚಿಯನ್ ಚರ್ಚಿನ ರೆವರೆಂಡ್ ಕೆ. ಮ್ಯಾಥ್ಯೂ ಸೈಮನ್, "ಕ್ರೈಸ್ತಧರ್ಮ ಇಪ್ಪತ್ತನೆಯ ಶತಮಾನದಲ್ಲೂ ಅನುಸರಿಸಬಹುದಾದ ಮತವೆಂದು ಎಲ್ಲಕ್ಕಿಂತ ಹೆಚ್ಚಾಗಿ ನನಗೆ ತಿಳಿದುದು ಆತನ ಜೀವನದಿಂದಲೇ," ಎಂದರು.

ಅನೇಕ ವರ್ಷಗಳ ಸ್ನೇಹದಿಂದ, ಬ್ರಿಟಿಷ್ ಮತಪ್ರಚಾರಕ ಚಾರ್ಲ್ಸ್ ಫ್ರೀರ್ ಆಂಡ್ರೂಸ್ ಮತ್ತು ಗಾಂಧಿಗೆ ವಿಶೇಷ ಬಳಕೆಯುಂಟಾಗಿ ಒಬ್ಬರನ್ನೊಬ್ಬರು ಚಾರ್ಲಿ ಎಂದೂ ಮೋಹನ್ ಎಂದೂ ಸಂಬೋಧಿಸುತ್ತಿದ್ದರು. ಗಾಂಧಿ, "ಆಂಡ್ರೂಸರಿಗಿಂತ ನನಗೆ ಹೆಚ್ಚು ವಿಶ್ವಾಸವುಳ್ಳವರು ಯಾರೂ ಇಲ್ಲ," ಎಂದು ಬರೆದನು. ಈ ಹಿಂದೂ ಸಂತನ ಆತ್ಮೀಯಬಂಧು ಕ್ರೈಸ್ತನಾದ ಆಂಡ್ರೂಸ್; ಹಿಂದುವಾದ ಗಾಂಧಿಯಂತಹ ಕ್ರೈಸ್ತ ಆ ಕ್ರೈಸ್ತಪಾದ್ರಿಗೆ ಬೇರೆ ಯಾರೂ ದೊರೆಯಲಿಲ್ಲ.

ದಕ್ಷಿಣ ಆಫ್ರಿಕದಲ್ಲಿ ಕ್ಷಣಕಾಲ ತಾನು ಕ್ರೈಸ್ತಧರ್ಮವನ್ನು ಸೇರಬೇಕೆಂದುಕೊಂಡನು. ಆದರೆ ಕೆಲವು ಪ್ರಶ್ನೆಗಳಿಗೆ ಸರಿಯಾದ ಉತ್ತರ ದೊರೆಯಲಿಲ್ಲ. ಆತನನ್ನು ಮತಾಂತರಗೊಳಿಸಲು ಪ್ರಯತ್ನಿಸುತ್ತಿದ್ದ ಕ್ರೈಸ್ತರನ್ನು "ದೇವರಿಗೆ ಒಬ್ಬನೇ ಮಗ ಏಕಿರಬೇಕು? ಒಬ್ಬನಿದ್ದರೆ ಇನ್ನೊಬ್ಬನೇಕಿರಕೂಡದು ? ಹಿಂದೂಧರ್ಮದ ಪ್ರಕಾರ ದೇವರ ಅವತಾರಗಳು ಅನೇಕವಿವೆ. ಕ್ರೈಸ್ತನಾದರೆ ಮಾತ್ರ ಮೋಕ್ಷ ಸಾಧ್ಯವೆ ?" ಎಂದು ಗಾಂಧಿ ಪ್ರಶ್ನಿಸಿದನು. ಸ್ವರ್ಗ ಕ್ರೈಸ್ತರಿಗೆ ಮಾತ್ರ ಮೀಸಲಾದುದೆ? ದೇವರು ಕ್ರೈಸ್ತನೆ? ಇಂಡಿಯಾದಲ್ಲಿ ಅನೇಕ ವರ್ಷಗಳನಂತರ "ಪರಲೋಕದಲ್ಲಿ ಹಿಂದೂ, ಕ್ರೈಸ್ತ, ಮುಸ್ಲಿಂ ಎಂಬ ಮತಭೇದವಿಲ್ಲವೆಂದು ನಾನು ನಂಬಿದ್ದೇನೆ," ಎಂದು ಹೇಳಿದನು.

ಸಬರ್ಮತಿಯಲ್ಲೂ, ಸೇವಾಗ್ರಾಮದಲ್ಲೂ ಮತಪ್ರಚಾರಕರು ಆತನ ಗುಡಿಸಿಲಿನಲ್ಲಿ ನೆಲದಮೇಲೆ ಕುಳಿತು ಆತನನ್ನು ಕ್ರೈಸ್ತನಾಗಿ ಮಾಡಲು ಪ್ರಯತ್ನಿಸಿದರು. ಆತನೂ ಮೃದುವಾಗಿ ಮಾತನಾಡುತ್ತ ಅದೇ ಪ್ರಯತ್ನದಲ್ಲಿದ್ದನು. ಸಂತನನ್ನು ಒಂದು ಮಠದಲ್ಲಿ ಸೇರಿಸಬೇಕೆ ?

ಈ ಸಮ್ಮೇಳನಗಳಲ್ಲಿ ಗಾಂಧಿ ಹಸಿದ ಇಂಡಿಯನ್ನರಿಗೆ ಅನ್ನ ನೀಡಿ, ರೋಗಿಗಳಿಗೆ ಔಷಧ ಕೊಟ್ಟು ಅವರನ್ನು ಕ್ರೈಸ್ತಧರ್ಮಕ್ಕೆ ಸೇರಿಸುತ್ತಿದ್ದುದಕ್ಕಾಗಿ ಪಾದ್ರಿಗಳನ್ನು ಆಕ್ಷೇಪಿಸುತ್ತಿದ್ದನು. "ನಮ್ಮನ್ನು ಒಳ್ಳೆಯ ಹಿಂದುಗಳಾಗಿ ಮಾಡಿ," ಎಂದು ಬೇಡಿದನು. ಅನೇಕ ಜನ ಕ್ರೈಸ್ತರನ್ನು ಹಿಂದುಗಳಾಗಿ ಮತಾಂತರಮಾಡುವ ಶಕ್ತಿ ಗಾಂಧಿಗಿತ್ತು. ಸೂಚಿಸಿದ್ದರೆ ಸ್ಲೇಡ್ ಮುಂತಾದವರು ಹಿಂದುಗಳಾಗುತ್ತಿದ್ದರು. ಆದರೆ ಒಳ್ಳೆಯ ಕ್ರೈಸ್ತರಾಗಿ ಇರಿ ಎಂದು ಆತನು ಅವರಿಗೆ ಹೇಳಿದನು.

ಕಡೆಯಲ್ಲಿ ಗಾಂಧಿ ಕ್ರಿಸ್ತನನ್ನಂಗೀಕರಿಸಿ ಕ್ರೈಸ್ತ ಮತವನ್ನು ನಿರಾಕರಿಸಿದನು. ೧೯೨೭ರಲ್ಲಿ ಕೊಲಂಬೋವಿನ ವೈ. ಎಂ. ಸಿ. ಎ. ನಲ್ಲಿ " ಕ್ರಿಸ್ತನ ಬೆಟ್ಟದ ಮೇಲಿನ ಉಪದೇಶಕ್ಕೆ ನನ್ನ ವ್ಯಾಖ್ಯಾನ ಸರಿಯಾಗಿದ್ದರೆ, ನಾನು ಕ್ರೈಸ್ತನೆಂದು ಧೈರ್ಯವಾಗಿ ಹೇಳಬಲ್ಲೆ. ಆದರೆ ಕ್ರೈಸ್ತಮತದ ನಡವಳಿಕೆಗಳೆಷ್ಟೋ ಆ ಉಪದೇಶಕ್ಕೆ ವಿರುದ್ಧವಾಗಿವೆ. ನಾನೀಗ ಮಾತನಾಡುತ್ತಿರುವುದು ಕ್ರೈಸ್ತರ ನಡವಳಿಕೆಗಳ ವಿಚಾರವಲ್ಲ; ನಾನು ಹೇಳುತ್ತಿರುವುದು ಕ್ರೈಸ್ತನಂಬಿಕೆ; ಪಾಶ್ಚಾತ್ಯರು ಆ ಮತಕ್ಕೆ ಕೊಟ್ಟಿರುವ ಅರ್ಥ " ಎಂದು ಹೇಳಿದರು.

ನಾನು ೧೯೪೬ರಲ್ಲಿ ಆತನೊಡನೆ ಇದ್ದಾಗ ಇದನ್ನು ಇನ್ನೂ ಸ್ಪಷ್ಟವಾಗಿ ವಿವರಿಸಿದರು. "ಪಾಲ್ ಜೂ ಪಂಗಡದವನಲ್ಲ. ಅವನು ಗ್ರೀಸಿನವನು. ವಾಕ್ಪಟುತ್ವದಲ್ಲಿ, ತರ್ಕದಲ್ಲಿ ನಿಪುಣನಾದ ಅವನು ಯೇಸುವಿನ ಅರ್ಥವನ್ನೇ ವಿರೂಪಗೊಳಿಸಿದನು. ಯೇಸುವಿನಲ್ಲಿ ಅಗಾಧ ಶಕ್ತಿಯಿತ್ತು. ಆದರೆ ಕ್ರೈಸ್ತಮತ ಪಾಶ್ಚಾತ್ಯರಿಂದ ವಿರೂಪಗೊಂಡಿತು. ಅದು ರಾಜರ ಮತವಾಯಿತು". ಇದು ಪಾಶ್ಚಾತ್ಯ ಸಂಸ್ಕೃತಿಯಿಂದ ಆತನ ಮನಸ್ಸಿನಲ್ಲುಂಟಾದ ನಿರಾಶೆಯನ್ನು ಪ್ರತಿಬಿಂಬಿಸುತ್ತಿತ್ತು. ೧೯೩೦ರಲ್ಲಿ ಜಗತ್ತು ಯುದ್ಧದ ಕಡೆ ಸಾಗುತ್ತಿದ್ದುದನ್ನು ನೋಡಿ ಗಾಂಧಿ ಪಾಶ್ಚಾತ್ಯ ದೇಶಗಳನ್ನು ಟೀಕಿಸಿ, ಶಾಂತಿ

ಪ್ರಿಯನಾಗುತ್ತಾ ಬಂದನು. ಯಾವ ಸಂದರ್ಭದಲ್ಲೂ ಯುದ್ಧ ಕೂಡದೆಂಬ ಟಾಲ್‌ಸ್ಟಾಯಂತಹ ಸಂಪೂರ್ಣ ಶಾಂತಿದೂತನಾಗಿರಲಿಲ್ಲ. ಮೊದಲ ಮಹಾಯುದ್ಧಕ್ಕೆ ಬೆಂಬಲಕೊಟ್ಟು, ಜರ್ಮನರ ನಾಸಿಸಂ, ಇಟಲಿಯ ಫ್ಯಾಸಿಸಂ, ಜಪಾನಿನ ಯುದ್ಧಪ್ರಿಯತೆಗಳನ್ನೆದುರಿಸಿದ. ಹೆಚ್ಚು ನ್ಯಾಯ ವೆನಿಸಿದ ಎರಡನೆಯ ಮಹಾಯುದ್ಧವನ್ನು ಆತನೇಕೆ ಒಪ್ಪಲಿಲ್ಲವೆಂದು ಕೇಳಿದರೆ ತಾನೂ, ಜಗತ್ತೂ ಬದಲಾಯಿಸಿತೆಂದು ಹೇಳಿದನು. ಆತನಿಗೆ ಅಹಿಂಸೆಯಲ್ಲಿ ಹೆಚ್ಚು ವಿಶ್ವಾಸವೂ, ಪಾಶ್ಚಾತ್ಯರಲ್ಲಿ ಅವಿಶ್ವಾಸವೂ ಉಂಟಾ ಗಿತ್ತು. ಕ್ರೈಸ್ತ ನೀತಿಯಮೇಲೆ ಪಾಶ್ಚಾತ್ಯ ಹಿಂಸಾ ಮನೋಭಾವದ ವಿಜಯದ ಪ್ರತೀಕವೇ ಫ್ಯಾಸಿಸಂ, ಸ್ಟಾಲಿನ್ ತತ್ವ, ಯುದ್ಧ, ಪಾಪಗಳೆಂದು ಆತನು ಭಾವಿಸಿದನು. ಆದುದರಿಂದ ಹಿಂಸೆಯಿಂದುದ್ಭವಿಸಿದ ಅಕೃತ್ಯಗಳನ್ನು ಹಿಂಸೆ ಸರಿಪಡಿಸಲಾರದು. ದಂಡೆಯಾತ್ರೆಯ ಹಿಂಸೆಗೊಳಗಾಗಿದ್ದ ದೇಶದ ರಾಜಕಾರಣಿಯಾಗಿದ್ದರೆ ಇಂತಹ ದೂರದೃಷ್ಟಿಯ ಧ್ಯೇಯಗಳನ್ನು ಗಾಂಧಿ ಉಚ್ಚರಿಸುತ್ತಿರಲಿಲ್ಲ. ಬಹುಶಃ ಅದರಿಂದಲೇ ಸ್ವತಂತ್ರ ಭಾರತದಲ್ಲೂ ಆತನು ರಾಜಕೀಯ ಉದ್ಯೋಗವಹಿಸಿಕೊಳ್ಳಲು ಒಪ್ಪಲಿಲ್ಲ. ಆದರೆ ಉತ್ತಮ ರಾಜಕಾರಣಿಯಾಗಿ, ದೈವಿಕ ದೃಷ್ಟಿ ಪಡೆದಿದ್ದುದರಿಂದ, ಜಗತ್ತೂ ದೂರದೃಷ್ಟಿಯ ಚಿಕಿತ್ಸಾತ್ಮಕ ಮನೋಭಾವ ಪಡೆಯದಿದ್ದರೆ ನಾಶವಾಗು ವುದೆಂದು ಅರಿತನು. ಯುದ್ಧ ಪ್ರಾರಂಭವಾಗುವಾಗ ಅದಕ್ಕೆ ಸರಿಯೆಂದು ತೋರುವ ಕಾರಣಗಳಿದ್ದೇ ಇರುವುವು. ಆದರೆ ದುರಾಸೆಯ ವಿಷ ಬೀಜ ಗಳನ್ನು ಬಿತ್ತಿ, ದ್ವೇಷ, ಮೂರ್ಖತೆಗಳಿಂದ ಹರಡುವಾಗ ಗಾಂಧಿಯ ತತ್ವ ಪ್ರಯೋಜನಕ್ಕೆ ಬರುತ್ತದೆ.

ಗಾಂಧಿಯ ಅಹಿಂಸೆಯೆಂಬ ಪದದಲ್ಲಿ ಸತ್ಯ, ಪ್ರೇಮ, ಸೇವೆ, ಸನ್ಮಾರ್ಗ, ಕಾಯಾವಾಚಾ ಅಹಿಂಸೆ, ಭೇದಗಳಲ್ಲಿ ಸಹನೆ, ಆಸೆಯನ್ನು ಬಿಡುವುದು, ಅಥವಾ ಕಡಿಮೆಯಾದ ಆಸೆಗಳುಳ್ಳವರಾಗಿರುವುದು, ಈ ಎಲ್ಲಾ ನೀತಿಗಳೂ ಸೇರಿವೆ.

ಜನಾಂಗಗಳಿಗೆ, ಜಾತಿಗಳಿಗೆ, ದೇಶಗಳಿಗೆ ವೈಮನಸ್ಯ ತಡೆಯುವ ಸಾಧನವೇ ಗಾಂಧಿಯ ಅಹಿಂಸಾ ತತ್ವ. "ನಿಮ್ಮ ಅಂತರಾತ್ಮದ ಕಡೆ ಬೆಳಕನ್ನು ತಿರುಗಿಸಿ". ಎಂದು ಆತನು ಪದೇ ಪದೇ ಎಚ್ಚರಿಸುತ್ತಿದ್ದನು.

"ತಪ್ಪು ನಿಮ್ಮದೇ ಆಗಿರಬಹುದು. ಪಂಚಾಯಿತಿಗೊಪ್ಪಿಸಿ, ಸಮಾಧಾನ ಮಾಡಿಕೊಳ್ಳಿ. ಹಾಗಲ್ಲದಿದ್ದರೆ ಜಾತೀಯ ಜಗಳ ಜನಾಂಗ ದ್ವೇಷ ಬೇರೆ ವ್ಯಾಜ್ಯಗಳನ್ನು ಉತ್ಪತ್ತಿಮಾಡುತ್ತದೆ. ಒಂದು ಯುದ್ಧ, ಎರಡನೆಯ ಯುದ್ಧದ ಬೀಜಗಳಾದ ದ್ವೇಷ, ಭಯ, ಯುದ್ಧ ಪ್ರೇರಣೆಗಳನ್ನೊದಗಿಸುತ್ತದೆ. ಹಿಂಸೆಯಿಂದ ಶಾಶ್ವತವಾಗಿ ಹಿಂಸೆ ಉತ್ಪತ್ತಿಯಾಗುತ್ತಿರುತ್ತದೆ.

ಇವೆಲ್ಲಾ ಸುಲಭವಾಗಿ ತಿಳಿಯಬಹುದಾದ ತತ್ವಗಳು. ಗಾಂಧಿಗೂ ತಿಳಿದಿತ್ತು. ೧೯೪೭ರಲ್ಲಿ ಆತನು ಪಶ್ಚಿಮ ದೇಶಗಳಲ್ಲಿ ಶಾಂತಿಯನ್ನು ಬೋಧಿಸಬೇಕೆಂದು ನಾನು ಹೇಳಿದೆ. "ಎರಡರಿಂದ ಎರಡನ್ನು ಗುಣಿಸಿದರೆ ನಾಲ್ಕಾಗುವುದೆಂದು ನಾನು ಪಾಶ್ಚಾತ್ಯರಿಗೆ ಹೇಳಬೇಕೆ?", ಎಂದು ಕೇಳಿದನು. ಪಾಶ್ಚಾತ್ಯ ಬುದ್ಧಿಗೆ ಈ ಸುಲಭಗಣಿತ ಅರ್ಥವಾಗಿದ್ದರೂ, ಹೃದಯ ಅದರ ಪರಿಣಾಮವನ್ನು ತಿಳಿಯಲಾರದೆ ಹೋಯಿತು. ಆದುದರಿಂದಲೇ ಗಾಂಧಿ ಕ್ರೈಸ್ತಲೋಕವನ್ನು ಟೀಕಿಸಿದುದು. ಆದರೆ ಇಂಡಿಯಾದೇಶದ ಹುಳುಕುಗಳಿಗೂ ಆತನು ಕುರುಡಾಗಿರಲಿಲ್ಲ. ಪಾಶ್ಚಾತ್ಯದೇಶಗಳಿಗೆ ಹೋಗಬೇಕೆಂಬ ಮಾತು ಬಂದಾಗ, "ಇಲ್ಲಿಯೇ ನನಗೆ ಕೆಲಸ ಮಿಕ್ಕಿದೆ", ಎಂದನು.

"ನಮ್ಮಲ್ಲಿ ವಿಜ್ಞಾನಿಗಳು ಹೆಚ್ಚಾಗಿದ್ದಾರೆ; ದೈವಭಕ್ತರು ಕಡಿಮೆ. ಅಣುವಿನ ಮಹತ್ತನ್ನು ತಿಳಿದಿದ್ದೇವೆ; ಬೆಟ್ಟದ ಮೇಲಿನ ಉಪದೇಶವನ್ನು ಮರೆತಿದ್ದೇವೆ" ಹೀಗೆಂದು ಹೇಳಿದವನು ಗಾಂಧಿಯಲ್ಲ. ಅಮೆರಿಕಾದ ಸೈನ್ಯಾಧಿಕಾರಿ ಜನರಲ್ ಓಮರ್ ಎನ್. ಬ್ರಾಡ್ಲಿ. ೧೯೪೮ರ ನವೆಂಬರ್ ೧೦ರಲ್ಲಿ ಬೋಸ್ಟನ್ನಿನಲ್ಲಿ ಮಾತನಾಡುತ್ತಾ ಹೀಗೆ ಹೇಳಿದನು. "ನಮ್ಮ ಜಗತ್ತು ಅಣು ರಾಕ್ಷಸರಿಂದಲೂ, ನೈತಿಕ ಕುಳ್ಳರಿಂದಲೂ ತುಂಬಿದೆ. ಶಾಂತಿಗಿಂತ ಯುದ್ಧದ ವಿಚಾರವನ್ನು ಹೆಚ್ಚಾಗಿ ತಿಳಿದಿದ್ದೇವೆ. ಬದುಕುವುದಕ್ಕಿಂತ ಕೊಲ್ಲುವುದನ್ನು ಚೆನ್ನಾಗಿ ಅರಿತಿದ್ದೇವೆ".

ಗಾಂಧಿಗೆ ಕೊಲ್ಲುವುದರ ವಿಚಾರ ತಿಳಿದಿರಲಿಲ್ಲ. ಸಂತೋಷವಾಗಿ, ಉಪಯೋಗಕರವಾಗಿ ಜೀವಿಸುವುದನ್ನರಿತಿದ್ದನು. ಅಣುಶಕ್ತಿಯ ವಿಚಾರದಲ್ಲಿ ಮಗುವಾಗಿಯೂ, ನೈತಿಕ ವಿಚಾರಗಳಲ್ಲಿ ಮಹದ್ವ್ಯಕ್ತಿಯಾಗಿಯೂ ಇದ್ದನು. ಕ್ರಿಸ್ತನ ಬೆಟ್ಟದ ಉಪದೇಶವನ್ನು ಅಂಗೀಕರಿಸಿದ್ದುದರಿಂದ ಆತನು

ಪ್ರಣಃಶಕ್ತಿಯನ್ನು ನಿರಾಕರಿಸಿದನು. ಆತನು ಕ್ರೈಸ್ತ, ಹಿಂದೂ, ಮುಸ್ಲಿಂ, ಜ್ಯೂ, ಮತಗಳಿಗೆ ಸೇರಿದ್ದನು. ಅಂತಹವರು ಬೇರೆ ಯಾರಿದ್ದಾರೆ! ಬಹುಶಃ ಅದರಿಂದಲೂ ಒಬ್ಬ ಹಿಂದೂ ಮಾನವ ಕೋಟಿಯ ಅಂತಃಕರಣದ ವಾಕ್ಯಕ್ತಿಯಾದನು. ತನ್ನ ಅಂತರಾತ್ಮನ ಅಪ್ಪಣೆಯನ್ನು ಆತನು ಸದಾ ಲಾಲಿಸುತ್ತಿದ್ದುದರಿಂದ, ಬೇರೆಯವರ ಅಂತಃಕರಣದೊಡನೆ, ಅದಕ್ಕಾಗಿ ಮಾತನಾಡಲು ಸಮರ್ಥನಾದನು.

## ೨೩. ವಿನ್‌ಸ್ಟನ್ ಚರ್ಚಿಲ್‌ನ ಎದುರಾಳಿ ಮೋಹನದಾಸ ಗಾಂಧಿ

ಎರಡನೆಯ ಮಹಾಯುದ್ಧ ಪ್ರಾರಂಭವಾಗುತ್ತಲೇ, ಅದನ್ನು ಕೇಳದೆಯೇ ಬ್ರಿಟನ್ ಇಂಡಿಯಾ ಯುದ್ಧಕ್ಕೆ ಸೇರಿದೆಯೆಂದು ಘೋಷಿಸಿತು. ತನ್ನ ದೌರ್ಬಲ್ಯದ ಕುರುಹಾದ ಈ ಅವಮಾನಕ್ಕೆ ಇಂಡಿಯಾ ತನ್ನ ಪ್ರತಿಭಟನೆಯನ್ನು ಸೂಚಿಸಿತು. ಮಾರನೆಯ ದಿನವೇ ಗಾಂಧಿ, ಬ್ರಿಟಿಷ್ ವೈಸರಾಯಿ ಲಾರ್ಡ್ ಲಿನ್‌ಲಿತ್‌ಗೋವನ್ನು ನೋಡಲು ಸಿಮ್ಲಾಕ್ಕೆ ವ್ಯಸನದಿಂದ ಹೋದನು. "ಪಾರ್ಲಿಮೆಂಟ್ ಹೌಸ್, ವೆಸ್ಟ್ ಮಿನ್‌ಸ್ಟರ್ ಆಬೆ, ಇವೆಲ್ಲಾ ನಾಶವಾಗಬಹುದೆಂಬ ಕಲ್ಪನೆಯಿಂದ ನಾನು ಬಹು ದುಃಖಪಟ್ಟೆ. ಇಂತಹವುಗಳಿಗೆಲ್ಲಾ ಅವಕಾಶ ಕೊಡುವ ದೇವರೊಡನೆ ನನ್ನ ಹೃದಯ ಸದಾ ಹೋರಾಡುತ್ತದೆ. ಹಿಟ್ಲರಿಸಂ ಎಂದರೆ, ನಿರ್ದಯ ಶಕ್ತಿಗಳು ವಿಜ್ಞಾನ ರೀತಿಯಲ್ಲಿ ಕೆಲಸಮಾಡುವುವು. ಹಿಟ್ಲರನೇ ಈ ಯುದ್ಧಕ್ಕೆ ಕಾರಣನೆಂದು ನಾನು ನಿರ್ಧರಿಸಿದ್ದೇನೆ. ಇಂಗ್ಲೆಂಡಿಗೆ, ಫ್ರಾನ್ಸಿಗೆ ನಾನು ಅನುಭವಿಸುವ ಸಹಾನುಭೂತಿ ಕ್ಷಣಿಕ ಭಾವಾವೇಶದಿಂದಾದುದಲ್ಲ. "ಫ್ರಾನ್ಸ್ ನಾಜಿಗಳಿಗೆ ಶರಣಾಗತಳಾಗಿ, ಇಂಗ್ಲೆಂಡಿನ ಜೀವವಿಮಾನ ದಳವನ್ನವಲಂಬಿಸಿ ನಿಂತಿದ್ದಾಗ ಗಾಂಧಿ, "ಬ್ರಿಟನ್ ಸಾಯುವುದು ಕಷ್ಟ. ಸತ್ತರೂ ಶೌರ್ಯದಿಂದ ಸಾಯುತ್ತದೆ. ಸೋಲುಗಳುಂಟಾಗಬಹುದು. ನೀತಿಗೆಡುವುದಿಲ್ಲ", ಎಂದು ಭವಿಷ್ಯ ನುಡಿದನು. ಯುದ್ಧ ನಡೆಯುತ್ತಿದ್ದಾಗ ಬ್ರಿಟಿಷ್ ಜನಾಂಗದ ಸದ್ಗುಣಗಳಲ್ಲಿ ಆತನಿಗೆ ತುಂಬಾ ಗೌರವವಿತ್ತು. "ಇಂಗ್ಲೆಂಡು ಸೋಲಬಾರದು. ಅವಮಾನಕ್ಕೀಡಾಗಬಾರದು", ಎಂದು ೧೯೪೦ರ ಸೆಪ್ಟೆಂಬರ್ ೧೫ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮ್ಮೇಳನದ ಭಾಷಣದಲ್ಲಿ ನುಡಿದನು. ೧೯೪೨ರ ಜುಲೈ ೧ರಲ್ಲಿ ಪ್ರೆಸಿಡೆಂಟ್ ರೂಸ್‌ವೆಲ್ಟರಿಗೆ ಕಾಗದ ಬರೆದು, "ನಿಮ್ಮ ದೇಶಕ್ಕೂ, ಬ್ರಿಟ

ನ್ನಿಗೂ, ನನ್ನ ಹೃತ್ಪೂರ್ವಕ ಮಂಗಳಾಕಾಂಕ್ಷೆಯಿದೆ”, ಎಂದು ತಿಳಿಸಿದನು.

೧೯೪೨ರ ವೇಳೆಗೆ ಜಪಾನೀಯರು ಆಗ್ನೇಯ ಏಷ್ಯಾವನ್ನಾಕ್ರಮಿಸಿಕೊಂಡು, ಭಾರತದ ಗಡಿಗೆ ಬಂದಿದ್ದರು. ಗಾಂಧಿ ಅವರನ್ನು ದೃಢವಾಗಿ ಎದುರಿಸಿದನು. “ಜಪಾನೀಯರು ಬಂದರೆ ಅವರನ್ನು ಅಹಿಂಸೆಯಿಂದ ಎದುರಿಸುವುದು ಹೇಗೆ?”, ಎಂದು ಆತನನ್ನು ಕೇಳಿದಾಗ ೧೯೪೨ರ ಜೂನ್ ೧೪ರ “ಹರಿಜನ”ದಲ್ಲಿ ಗಾಂಧಿ ಹೀಗೆ ಉತ್ತರಕೊಟ್ಟನು. “ಅವರಿಗೆ ಆಹಾರ, ನೆರಳನ್ನು ಕೊಡಕೂಡದು. ಅವರೊಡನೆ ಯಾವ ಸಂಪರ್ಕವನ್ನೂ ಇಟ್ಟುಕೊಳ್ಳಕೂಡದು. ಅವರಿಗೆ ಇಲ್ಲಿ ಸ್ವಾಗತವಿಲ್ಲವೆಂಬ ಅರಿವುಂಟಾಗಬೇಕು. ಶತ್ರುಗಳ ಸೇವೆಗೆ ಸಿಕ್ಕದೆ, ಜನರು ಅವರು ಆಕ್ರಮಿಸಿದ ಪ್ರದೇಶಗಳನ್ನು ಬಿಟ್ಟು ಹೊರಡಬೇಕು.” “ಏಷ್ಯಾ ಏಷ್ಯಾ ಜನರಿಗೇ ಸೇರಬೇಕು”, ಎಂಬ ಧ್ಯೇಯವನ್ನಿಟ್ಟುಕೊಂಡಿದ್ದ ಪಕ್ಷಕ್ಕೆ ಒಂದು ಸಂದೇಶ ಕೊಡಬೇಕೆಂದು ಶ್ರೀ ಟಕೋಕ ಎಂಬ ಜಪಾನ್ ಪಾರ್ಲಿಮೆಂಟಿನ ಸದಸ್ಯನೊಬ್ಬನು ಕೇಳಲು ಗಾಂಧಿ ನಿರಾಕರಿಸಿ, “ಯೂರೋಪಿನ ವಿರುದ್ಧ ಪಕ್ಷವಾದರೆ, ಏಷ್ಯ ಏಷ್ಯನರಿಗೆ ಎಂಬ ತತ್ವ ನಾನು ಒಪ್ಪುವುದಿಲ್ಲ”, ಎಂದನು.

ಆ ಸಮಯದಲ್ಲಿ ಗಾಂಧಿ ಜಪಾನರಿಗೆ ನಾಜಿಗಳಿಗೆ, ಮುಸೊಲಿನಿಗೆ ವಿರೋಧವಾಗಿದ್ದು ಬ್ರಿಟಿಷ್, ಫ್ರೆಂಚ್, ಅಮೆರಿಕನ್ನರಿಗೆ ಬೆಂಬಲಕೊಟ್ಟನು. ಯುದ್ಧ ಕಾಲದಲ್ಲಿ ನೆಹ್ರೂ ಚಿಯಾಂಗ್ ಕೈಷೆಕ್ ದಂಪತಿಗಳಿಗೂ ಸೋವಿಯಟ್ ಯೂನಿಯನ್ನಿಗೂ ತೋರಿದ ಭಕ್ತಿಯಿಂದ ಪ್ರೇರಿತನಾಗಿ ಚೀಣ ರಷ್ಯಗಳಪರವಾಗಿ ಹೇಳಿಕೆಗಳನ್ನು ಕೊಟ್ಟನು. “ನನಗೆ ಬ್ರಿಟಿಷ್ ಜನಾಂಗದಲ್ಲಿ, ಜರ್ಮನರಲ್ಲಿ ದ್ವೇಷವಿಲ್ಲ. ಜರ್ಮನ್ ಜನಾಂಗ, ಬ್ರಿಟಿಷ್ ಅಥವಾ ಇಟಲಿ ಜನಾಂಗಕ್ಕಿಂತ ಕೀಳಾದುದಲ್ಲ. ನಮಗೆಲ್ಲಾ ಒಂದೇ ಕುಂದುಕೊರತೆಗಳಿವೆ. ನಾವೆಲ್ಲರೂ ಅಗಾಧ ಮಾನವ ಕುಲಕ್ಕೆ ಸೇರಿದವರು. ಭೇದಗಳನ್ನು ನಾನೆಣಿಸಲು ಒಪ್ಪುವುದಿಲ್ಲ. ಇಂಡಿಯಾ ಹೆಚ್ಚೆಂದೂ ನಾನು ಹೇಳುವುದಿಲ್ಲ. “ ದಬ್ಬಾಳಿಕೆಯ ಸರ್ಕಾರಗಳು ಆತನಿಗೆ ಸೇರುತ್ತಿರಲಿಲ್ಲ. ಆದುದರಿಂದ ಯುದ್ಧ ಪ್ರಾರಂಭವಾದ ಮೂರನೆಯದಿನ ಇಂಗ್ಲೆಂಡಿಗೆ ಯಾವ ವಿಧವಾದ ತೊಂದರೆಯನ್ನುಕೊಡುವುದಿಲ್ಲವೆಂದು ಬಹಿರಂಗ ಹೇಳಿಕೊಟ್ಟನು. ಬದಲಾಗಿ ಬ್ರಿಟನ್ ಮತ್ತು ಅದರ ಮಿತ್ರ ರಾಜ್ಯಗಳಿಗೆ ನೈತಿಕ ಬೆಂಬಲ

ಕೊಟ್ಟನು. ಇದಕ್ಕಿಂತ ಹೆಚ್ಚಿಗೇನೂ ಆತನು ಹೇಳಲಿಲ್ಲ. ಯುದ್ಧಕಾರ್ಯ ದಲ್ಲಿ ಸಹಾಯ ಮಾಡಲು ಆತನು ಒಪ್ಪಲಿಲ್ಲ.

ಕಾಂಗ್ರೆಸ್ ಪಕ್ಷಕ್ಕೆ ಈ ಅಭಿಪ್ರಾಯವಿರಲಿಲ್ಲ. ಗಾಂಧಿಯ ಆಶ್ರಮದ ಸಮೀಪ ಶಿಷ್ಯರಲ್ಲಿ ಗಡಿನಾಡಿನ ಗಾಂಧಿಯೆನಿಸಿದ ಖಾನ್ ಅಬ್ದುಲ್ ಗಫಾರ್ ಖಾನರನ್ನು ಬಿಟ್ಟರೆ ಕಾಂಗ್ರೆಸ್ ನಾಯಕರಲ್ಲಿ ಶಾಂತಿಪ್ರಿಯರಾಗಲಿ, ಅಹಿಂಸಾವಾದಿಗಳಾಗಲಿ ಹೆಚ್ಚಾಗಿರಲಿಲ್ಲ. ಗಾಂಧಿ ನಾಯಕನಾಗಿರಬೇಕಾ ದರೆ ಅವರು ಅಹಿಂಸಾ, ಅಸಹಕಾರ ಚಳುವಳಿಯಲ್ಲಿ ಆತನನ್ನು ಹಿಂಬಾಲಿಸ ಬೇಕಾಗಿತ್ತು. ಅದೂ ಅಲ್ಲದೆ, ಆಯುಧವಿಹೀನಳಾದ ಇಂಡಿಯಾಕ್ಕೆ ಬೇರೆ ಮಾರ್ಗ ಯಾವುದೂ ಇರಲಿಲ್ಲ. ಗಾಂಧಿಗೂ ಇದು ತಿಳಿದಿತ್ತು. ಆತನಿಗೆ ಅಹಿಂಸೆ ಮತಧರ್ಮವಾಗಿತ್ತು. ಒಂದು ಪರಿಹಾರಕ್ಕಾಗಿ ಇಂಡಿಯಾ ಯುದ್ಧದಲ್ಲಿ ಭಾಗ ವಹಿಸಲು ಅವರು ಒಪ್ಪುತ್ತಿದ್ದರು. ನೆಹ್ರು ತಯಾರಿ ಸಿದ ಹೇಳಿಕೆಯಲ್ಲಿ, "ಸ್ವತಂತ್ರ ಪ್ರಜಾರಾಜ್ಯವಾದ ಇಂಡಿಯಾ ಸಂತೋಷ ವಾಗಿ ಬೇರೆ ಸ್ವತಂತ್ರ ರಾಷ್ಟ್ರಗಳೊಡನೆ ಪರಸ್ಪರ ರಕ್ಷಣೆ, ಆರ್ಥಿಕ ಬೆಂಬಲ ಗಳಿಗಾಗಿ ಸಹಕರಿಸುವುದು",ಎಂದು ಹೇಳಿವರು. ಬೇರೆ ಒಂದು ಸಮಯದಲ್ಲಿ ನೆಹ್ರು, "ನಾನು ಕತ್ತಿ ಹಿಡಿದು ಜಪಾನಿನೊಡನೆ ಯುದ್ಧಮಾಡಲು ಒಪ್ಪು ವೆನು; ಆದರೆ ಸ್ವತಂತ್ರನೆನಿಸಿದರೆ ಮಾತ್ರ,"ಎಂದನು. ಗಾಂಧಿ ಅಡ್ಡಿಪಡಿಸ ಲಿಲ್ಲ; ಸುಮ್ಮನೆ ದೂರವಿದ್ದನು.

ಆದರೆ ಇಂಡಿಯಾದೇಶಕ್ಕೆ ಸ್ವಾತಂತ್ರ್ಯ, ಸಮಾನಾಧಿಕಾರಗಳನ್ನು, ಇನ್ನೂ ಕಡಿಮೆ ಹಕ್ಕುಗಳನ್ನು ಕೊಡುವ ಅಭಿಪ್ರಾಯವೂ ಬ್ರಿಟಿಷ್ ಸರ್ಕಾರಕ್ಕಿರಲಿಲ್ಲ. ವಿನ್‌ಸ್ಟನ್ ಚರ್ಚಿಲ್ ಈಗ ಮುಖ್ಯ ಮಂತ್ರಿಯಾ ಗಿದ್ದನು. ಆತನು ೧೯೪೨ ರ ನವೆಂಬರ್ ೧೦ ರಲ್ಲಿ ಹೇಳಿದಂತೆ, "ನಾನು ಮುಖ್ಯಮಂತ್ರಿಯಾದುದು ಬ್ರಿಟಿಷ್ ಚಕ್ರಾಧಿಪತ್ಯವನ್ನು ಮುಗಿಸುವ ಸಮಾರಂಭಕ್ಕೆ ಅಧ್ಯಕ್ಷನಾಗಲು ಅಲ್ಲ," ಎಂಬ ಧ್ಯೇಯವನ್ನು ಬಿಡುವಂತಿರ ಲಿಲ್ಲ. ಇಂಗ್ಲೆಂಡನ್ನು ಪ್ರೀತಿಸಿ, ಚಕ್ರಾಧಿಪತ್ಯವನ್ನು ನಾಶಮಾಡಲು ಹೊರಟ "ಅರೆಬೆತ್ತಲೆ ಫಕೀರ"ನನ್ನು ಕಂಡರೆ ಆತನಿಗೆ ದ್ವೇಷ; ಸ್ವಲ್ಪ ಭಯ ಕೂಡ. ೧೯೩೫ ರಲ್ಲಿ "ಗಾಂಧಿ ತತ್ವದೊಡನೆ ಹೋರಾಡಿ ನಾಶಮಾಡಬೇಕು," ಎಂದನು. ಈಗ ಆತನು ಮುಖ್ಯ ಹುದ್ದೆಯಲ್ಲಿದ್ದುದರಿಂದ ಇಂಗ್ಲೆಂಡ

ನ್ನುಳಿಸಲು ಗಾಂಧಿ ತತ್ವವನ್ನು ನಾಶಮಾಡಬೇಕಾಗಿತ್ತು.

ಚರ್ಚಿಲ್ ಒಳ್ಳೆಯ ಶಿಲ್ಪದಂತೆ ಮಹಾವ್ಯಕ್ತಿಪರಿಪೂರ್ಣನು. ಚರ್ಚಿಲ್ ಗಾಂಧಿ ಇಬ್ಬರೂ ಜೀವವನ್ನು ಒಂದು ಧ್ಯೇಯಕ್ಕಾಗಿ ಕೊಟ್ಟರು. ಬ್ರಿಟನ್ನನ್ನು ಮೊದಲನೆಯ ತರಗತಿಯ ಶಕ್ತಿಯಾಗಿ ಉಳಿಸಬೇಕೆಂದು ಚರ್ಚಿಲ್ಲನ ಜೀವನ ಧ್ಯೇಯ. ಆತನು ೧೯ನೆಯ ಶತಮಾನದ ಫಲವೆಂಬುದರಲ್ಲಿ ಆತನಿಗೆ ಹೆಮ್ಮೆಯಿತ್ತು. ಆತನಿಗೆ ರಾಜತ್ವದಲ್ಲಿ, ಜನವರ್ಗವಿಭಾಗದಲ್ಲಿ, ಚಕ್ರಾಧಿಪತ್ಯದಲ್ಲಿ ನಂಬಿಕೆಯಿತ್ತು. ಲಾಯ್ಡ್ ಜಾರ್ಜ್ ಬ್ರಿಟನ್ನಿನ ಮೇಲ್ತರಗತಿಗಳನ್ನೂ, ಸೈನ್ಯಾಧಿಪತಿಗಳನ್ನೂ, ರಾಜವಂಶೀಯರನ್ನೂ ತುಚ್ಛವಾಗಿ ಕಂಡು ಅವುಗಳ ನಾಶಕ್ಕಾಗಿ ಪ್ರಯತ್ನಿಸುತ್ತಿದ್ದನು. ಚರ್ಚಿಲ್ಲನಿಗೆ ಅವು ಶಾಶ್ವತವಾಗಿರಬೇಕೆಂಬ ಅಭಿಲಾಷೆ. ಅವುಗಳ ಮೇಲಿನ ಅಭಿಮಾನಕ್ಕಿಂತ ಅವುಗಳನ್ನು ಸಾಧ್ಯವಾಗಿ ಮಾಡಿದ ೧೯ನೆಯ ಶತಮಾನದ ಮೇಲೆ ಆತನಿಗೆ ಹೆಚ್ಚು ಅಭಿಮಾನ. ೧೯ನೆಯ ಶತಮಾನ ಬ್ರಿಟಿಷರ ಶತಮಾನ. ಫ್ರೆಂಚರ ನೆಪೋಲಿಯನ್ನನನ್ನು ಸೋಲಿಸಿದ, ಜರ್ಮನಿಯ ಕೈಸರ್ ಇನ್ನೂ ಉಚ್ಚ ಸ್ಥಿತಿಗೆ ಬರದಿದ್ದ ಬ್ರಿಟಿಷರ ಉಚ್ಛ್ರಾಯ ಕಾಲ. ವಿಕ್ಟೋರಿಯಾ ರಾಣಿಯ ಕೈಕೆಳಗೆ ಚಕ್ರಾಧಿಪತ್ಯ ಅರಳುತ್ತಿದ್ದ ಕಾಲ. ಬ್ರಿಟನ್ನಿನ ಸಂಪತ್ತೇ ವಿನ್‌ಸ್ಟನ್ನಿನ ದೇವರು. ದೇಶದ ಮೇಲ್ತರಗತಿಯ ಜನ, ದೇಶದ ಸಂಪತ್ತು ಆತನಿಗೆ ಒಂದೇ. ಹಾಗೆಯೇ ಪಾರ್ಲಿಮೆಂಟಿನ ಪ್ರಜಾರಾಜ್ಯ ಮತ್ತು ಇಂಡಿಯಾ.

ಚರ್ಚಿಲ್ ಎರಡನೆಯ ಮಹಾ ಯುದ್ಧದಲ್ಲಿ ಹೋರಾಡಿದ್ದು ಬ್ರಿಟನ್ನಿನ ಆಸ್ತಿಯನ್ನುಳಿಸಲು. ಅರೆ ಬೆತ್ತಲೆಯ ಫಕೀರ ಅದನ್ನು ಕಸಿದುಕೊಳ್ಳಲು ಬಿಡುವನೇ? "ನಮ್ಮ ಆಸ್ತಿಯನ್ನು ನಾವು ಬಿಟ್ಟುಕೊಡುವುದಿಲ್ಲ," ಎಂದು ಚರ್ಚಿಲ್ ಹೇಳಿದನು. ಇಂಡಿಯಾ ಇಂಗ್ಲೆಂಡಿನ ಆಸ್ತಿ. ಅದನ್ನು ಬಿಡಲು ಆತನು ನಿರಾಕರಿಸಿದನು. ೧೯೪೦ರಲ್ಲಿ ಮುಖ್ಯಮಂತ್ರಿಯಾದಾಗಿನಿಂದ ೧೯೪೫ರಲ್ಲಿ ಅಧಿಕಾರ ಕಳೆದುಕೊಳ್ಳುವವರೆಗೂ ಚರ್ಚಿಲ್ ಮಹಾತ್ಮ ಗಾಂಧಿಯೊಡನೆ ಹೋರಾಡಿದನು. ಅದು ಇಂಗ್ಲೆಂಡಿನ ಭೂತಕಾಲಕ್ಕೂ, ಇಂಡಿಯಾ ದೇಶದ ಭವಿಷ್ಯತ್ತಿಗೂ ಆದ ಯುದ್ಧ. ಚರ್ಚಿಲ್‌ಗೆ ಅಧಿಕಾರವೇ ಕವನ. ಇಂಗ್ಲೆಂಡನ್ನು ಅಂಜಿಸುತ್ತಿದ್ದ ಪರರಾಷ್ಟ್ರಗಳ ದಬ್ಬಾಳಿಕೆ

ಯನ್ನು ಮನಃಪೂರ್ವಕವಾಗಿ ದ್ವೇಷಿಸಿ ಶಕ್ತಿಮೀರಿ ಹೋರಾಡಿದನು. ಆದರೆ ಬ್ರಿಟಿಷ್ ದಬ್ಬಾಳಿಕೆಯನ್ನು ಎದುರಿಸಿದ ಗಾಂಧಿಯ ನೈತಿಕ ಹೋರಾಟಕ್ಕೆ ಆತನ ಸಹಾನುಭೂತಿ ಇರಲಿಲ್ಲ. ಇಂಗ್ಲೆಂಡಿನ ಸ್ವಾತಂತ್ರ್ಯವನ್ನುಳಿಸಲು ಆತನು ಪ್ರಾಣಕೊಡಲು ಸಿದ್ಧನಾಗಿದ್ದನು; ಆದರೆ ಇಂಡಿಯಾಕ್ಕೆ ಸ್ವಾತಂತ್ರ್ಯಬೇಕೆನ್ನುವವರನ್ನು ಆತನು ದ್ವೇಷಿಸುತ್ತಿದ್ದನು. ಆತನ ದೃಷ್ಟಿಯಲ್ಲಿ ಇಂಡಿಯನ್ನರು ಸಿಂಹಾಸನದ ಪೀಠ.

೧೯೪೨ರಲ್ಲಿ ಬ್ರಿಟಿಷ್ ಸರ್ಕಾರದ ಪರವಾಗಿ ಬಂದ ಕ್ರಿಪ್ಸ್ ನಿಯೋಗ ನಿರರ್ಥಕವಾಗಲು ಇದೇ ಕಾರಣ. ತೆಳ್ಳಗೆ, ಗಂಭೀರವಾಗಿ, ಸನ್ಯಾಸಿಯಂತಿದ್ದ ಕಾರ್ಮಿಕ ಪಕ್ಷದ ಸಸ್ಯಾಹಾರಿ ಕ್ರಿಪ್ಸ್ ಕಾಂಗ್ರೆಸ್ ಪಕ್ಷದೊಡನೆ ಒಪ್ಪಿಗೆಗೆ ಬರಬಹುದಾಗಿತ್ತು. ಆದರೆ ಗಾಂಧಿ ವೈಸರಾಯಿಯ ಅರಮನೆ ಹೊಕ್ಕು ಚಕ್ರವರ್ತಿಯ ಅಧಿಕಾರದಲ್ಲಿ ಭಾಗ ಕೇಳಬಹುದೆಂಬ ಕಲ್ಪನೆ ಚರ್ಚಿಲ್ಲಿಗೆ ಬೇಡವಾಗಿತ್ತು.

ಚರಿತ್ರೆಯ ದೃಷ್ಟಿಯಿಂದ, ಪಟೇಲ್, ನೆಹ್ರು, ರಾಜಗೋಪಾಲಾಚಾರಿ, ಅಜಾದ್ ಮುಂತಾದವರನ್ನು ಅರಮನೆಯ ಮೆಟ್ಟಲು ಹತ್ತಿಸಿ, ಸೊಗಸಾಗಿ ಸಮವಸ್ತ್ರ ಧರಿಸಿ ನಿಂತಿದ್ದ ಕಾವಲುಗಾರರ ನಡುವೆ ಒಳಕ್ಕೆ ಕರೆದೊಯ್ದು, ಸ್ವತಂತ್ರ ಇಂಡಿಯಾಕ್ಕೆ ತಳಹದಿ ಹಾಕಿ, ಸಮಾನ ರಾಷ್ಟ್ರವಾಗಿ ಸಂತೋಷದಿಂದ ಸಹಕರಿಸುವಂತೆ ಮಾಡಲು ೧೯೪೨ ಒಳ್ಳೆಯ ಸಮಯವಾಗಿತ್ತು. ಆಗ ಸರ್ವಶಕ್ತವಾಗಿದ್ದ ಬ್ರಿಟಿಷ್ ಸೈನ್ಯ ಮತ್ತು ಪೋಲೀಸರ ಸಹಾಯದಿಂದ ಶಾಂತರೀತಿಯಲ್ಲಿ ಸ್ವಾತಂತ್ರ್ಯ ಕೊಡಬಹುದಾಗಿತ್ತು. ಪ್ರಾಣಹಾನಿ, ದ್ವೇಷ, ಆರ್ಥಿಕ ವಿನಾಶ, ರಾಜಕೀಯ ವೈಷಮ್ಯಗಳಿಂದ ಇಂಡಿಯಾ ಇಬ್ಭಾಗವಾಗಿ ಒಡೆಯದಂತೆ ಮಾಡಬಹುದಾಗಿತ್ತು. ಇದನ್ನು ಕೆಲವರು ಅರಿತುಕೊಂಡರು. ೧೯೪೨ರಲ್ಲಿ ಅಮಾನುಷ ಭವಿಷ್ಯತ್ ದೃಷ್ಟಿಯಿಂದ ವೈಸರಾಯ್ ಸಭೆಯ ಒಳಾಡಳಿತ ಮಂತ್ರಿ ಸರ್ ರೆಜಿನಾಲ್ಡ್ ಮ್ಯಾಕ್ಸ್‌ವೆಲ್ ನನ್ನೊಡನೆ, "ಯುದ್ಧ ಮುಗಿದ ಎರಡು ವರ್ಷಗಳ ನಂತರ ನಾವು ಇಲ್ಲಿಂದ ಹೊರಡುತ್ತೇವೆ," ಎಂದು ಹೇಳಿದನು. ವೈಸರಾಯಿ, "ನಾವು ಇಂಡಿಯಾದಲ್ಲಿ ಉಳಿಯುವುದಿಲ್ಲ," ಎಂದು ಹೇಳಿದನು. ಪ್ರಾಯಶಃ ಚರ್ಚಿಲ್ಲಿಗೂ ಇದು ತಿಳಿದಿತ್ತು. ಹಿಟ್ಲರನಿಂದ ಸೋಲು ಸಿದ್ಧವೆಂಬಂತೆ

ದ್ದಾಗ ಕದಲದೆ ಅವನನ್ನೆದುರಿಸಿ ನಿಲ್ಲಲು ಸಾಧ್ಯವಾಡಿದ ಚರ್ಚಿಲ್ಲನ ಹಠವೇ ಇಂಡಿಯಾಕ್ಕೆ ಸಿಕ್ಕಲೇಬೇಕಾಗಿದ್ದ ಸ್ವಾತಂತ್ರ್ಯದ ಹಾದಿಯಲ್ಲಿ ಅಡ್ಡಗಲ್ಲಾಗಿ ನಿಲ್ಲುವಂತೆ ಆತನನ್ನು ಪ್ರೇರಿಸಿತು. ಆತನು ಚಕ್ರಾಧಿಪತ್ಯ ವಿನಾಶದ ಸಲಕರಣೆಯಾಗುವುದಿಲ್ಲ. ಆ ಕೆಲಸ ಜಯದಲ್ಲಿ ಗಾಂಭೀರ್ಯ ತೋರಿದ, ಯುದ್ಧದಲ್ಲಿ ಸುಗ್ಗಾದ, ಬೇರೆ ಇಂಗ್ಲೆಂಡಿನ ಬೇರೆ ಸರ್ಕಾರದಿಂದ ನಡೆಯಬೇಕಾಯಿತು.

## ೨೪. ಗಾಂಧಿಯೊಡನೆ ನಾನು ಕಳೆದ ವಾರ

ಗಾಂಧಿಯ ದಂತ ವೈದ್ಯನೂ, ನಾನೂ ವಾರ್ಧಾ ಪಟ್ಟಣದಿಂದ ಸೇವಾಗ್ರಾಮ ಹಳ್ಳಿಗೆ ಒಂದು ಟಾಂಗಾದಲ್ಲಿ ಹೋದೆವು. ಧೂಳು ತುಂಬಿದ ಆ ಐದು ಮೈಲಿ ದೂರದ ಪ್ರಯಾಣದಲ್ಲಿ ಮಹಾತ್ಮ ಖಾಯಿಲೆಯಾದಾಗ ಹೇಗೆ ವರ್ತಿಸುವನೆಂದು ಆ ವೈದ್ಯನನ್ನು ಕೇಳಿ ತಿಳಿಯಲು ಪ್ರಯತ್ನಿಸಿದೆನು. ಆತನು ಇಂಡಿಯಾದಲ್ಲಿದ್ದ ಬ್ರಿಟಿಷರ ವಿಚಾರವಾಗಿ ಮಾತನಾಡಿದನು.

ರಸ್ತೆ ಹಳ್ಳಿಯನ್ನು ಸೇರುವಕಡೆ ಗಾಂಧಿ ನಮಗಾಗಿ ಕಾದಿದ್ದನು. ನಾನು ಆತನನ್ನು ಆಗಲೇ ಮೊದಲಬಾರಿ ಕಂಡದ್ದು. ಕೈಚಾಚಿ ನನ್ನ ಕಡೆ ಬಂದು, "ಶ್ರೀ ಫಿಷರ್" ಎಂದನು. ನಾನು ಭಾವಿಸಿದ್ದುದಕ್ಕಿಂತ ಆತನು ಎತ್ತರವಾಗಿದ್ದನು. ನಡುವಿನ ಬಟ್ಟೆ ಪಾದರಕ್ಷೆಗಳನ್ನು ಮಾತ್ರ ಧರಿಸಿದ ಆತನು ಹೊಳೆಯುವ ಬಿಳಿಯ ಮತ್ತು ಕಂದುಬಣ್ಣದ ಭಿನ್ನತೆಯಮೂರ್ತಿಯಾಗಿದ್ದನು. ವಿಶಾಲವಾದ ಎದೆ, ಸಣ್ಣನಡು, ಉದ್ದವಾದ ಬಲಯುತವಾದ ಕಾಲುಗಳು. ಆತನಿಗೆ ೭೩ವರ್ಷ ವಯಸ್ಸು ಒಂದು ಬೆಂಚಿನ ಮೇಲೆ ತಾನು ಕುಳಿತು, ನಾನು ಕುಳಿತು ಕೊಳ್ಳಬೇಕಾಗಿದ್ದಸ್ಥಳವನ್ನು ಕೈಗಳಿಂದ ಸವರಿದನು, ಆತನು ಹಾಗೆ ಮಾಡುತ್ತಿದ್ದಾಗ, "ಇದು ನನ್ನ ಮನೆ, ಒಳಕ್ಕೆ ಬನ್ನಿ" ಎಂದಂತಾಗಿ ನನ್ನ ಸಂಕೋಚ ಮಾಯವಾಯಿತು.

ನನ್ನ ಮನಸ್ಸಿನಲ್ಲಿದ್ದುದನ್ನು ಅರ್ಥಮಾಡಿಕೊಂಡು ಆತನು ಊಟ ಮುಗಿದಮೇಲೆ ನನ್ನೊಡನೆ ಒಂದು ಘಂಟೆ ಮಾತನಾಡುವುದಾಗಿಯೂ, ಸಂಜೆ ಆತನೊಡನೆ ನಾನು ನಡೆದಾಡಬಹುದೆಂದೂ ಹೇಳಿದನು. ಪಾರ್ಸಿ ಪ್ರಸಿದ್ಧದೇಶಪ್ರೇಮಿ ದಾದಾಭಾಯಿ ನವರೋಜಿಯ ಮೊಮ್ಮಗಳು ಕುರ್ಷಿದ್

ನವರೋಜಿಯ ರಕ್ಷಣೆಗೆ ಆತನು ನನ್ನನ್ನೊಪ್ಪಿಸಿದನು. ಆಕೆ ಗಾಂಧಿಯನ್ನು ಸೇವಿಸಲು ಯೂರೋಪಿನಲ್ಲಿ ಸಂಗೀತಾಭ್ಯಾಸ ಬಿಟ್ಟು ಬಂದಿದ್ದಳು. ಆಕೆ ಬಂದು ನನ್ನನ್ನು ಮಣ್ಣುಗೋಡೆಯ ಬೊಂಬುಗಳನ್ನು ಮುಚ್ಚಿದ ಅತಿಥಿಗೃಹ ದಲ್ಲಿ ಸ್ಥಾಪಿಸಿದಳು. ಅದರಲ್ಲಿ ಒಂದು ಮಣ್ಣುನೆಲದ ಕೊಠಡಿಯೂ ನೀರಿನ ಬಿಂದಿಗೆ, ಬಾಸಿಮುಂತಾದುವಿದ್ದ ಸಿಮೆಂಟುನೆಲದ ಒಂದು ಕೊಠಡಿಯೂ ಇದ್ದುವು. ಬಹಳ ಸೆಕೆಯಾಗಿದ್ದುದರಿಂದ ಸುಖವಾಗಿರಬೇಕಾದರೆ ದಿನಕ್ಕೆ ೫–೬ ಬಾರಿ ಸ್ನಾನ ಮಾಡಬೇಕಾಗಿತ್ತು. ಹಳ್ಳಿಯಲ್ಲಾಗಲಿ, ಆಶ್ರಮದ ಲ್ಲಾಗಲಿ, ನಲ್ಲಿಗಳು, ವಿದ್ಯುಚ್ಛಕ್ತಿ, ಫ್ಯಾನ್, ರೇಡಿಯೋ, ಟೆಲಿಫೋನ್ ಗಳಿರಲಿಲ್ಲ. ಅದು ಇಂಡಿಯಾ.

ಹನ್ನೊಂದು ಘಂಟೆಗೆ ಕುರ್ಷಿದ್ ನನ್ನನ್ನು ಗಾಂಧಿಯ ಗುಡಿಸಲಿಗೆ ಕರೆದುಕೊಂಡು ಹೋದಳು. ಪಾದರಕ್ಷೆಗಳನ್ನು ಹೊರಗೆ ಬಿಟ್ಟು, ಗಾಂಧಿ ನೆಲದ ಮೇಲೆ ಚಾಪೆಯ ಮೇಲೆ ಮಲಗಿದ್ದ ಕತ್ತಲು ಕೋಣೆಯೊಳಕ್ಕೆ ಹೋದೆ. ಆತನ ಬಳಿ ಕೆಲವು ಕೈ ಬರಹದ ಹಾಳೆಗಳೂ ಹತ್ತಂಗುಲ ಎತ್ತರದ, ಪೆನ್ ಪೆನ್ಸಿಲ್‌ಗಳಿಗೆ ತೂತುಗಳಿದ್ದ, ಒಂದು ಕಾಲು ಮಣೆ ಇದ್ದುವು. ಮಹದೇವದೇಸಾಯಿ, ಪ್ಯಾರಿಲಾಲ್, ಕಿಶೋರ್‌ಲಾಲ್, ಮಷ್ರುವಾಲ ಮುಂತಾದ ಕಾರ್ಯದರ್ಶಿಗಳಿಗೆ ನನ್ನ ಪರಿಚಯ ಮಾಡಿಕೊಟ್ಟರು. ಸ್ವಲ್ಪ ಹೊತ್ತಾದ ಮೇಲೆ ಗಾಂಧಿ ಲಘುವಾಗಿ ಎದ್ದು ಹಾಸ್ಯಕ್ಕೆ ಅಧಿಕಾರ ಧ್ವನಿಯಿಂದ, "ಬಾ", ಎಂದರು. ಊಟದ ಹೊತ್ತಾಗಿತ್ತು. "ಬೂಟ್ಸು, ಟೋಪಿ ಹಾಕಿಕೊಳ್ಳಿ. ಅವು ಇಲ್ಲಿ ಅಗತ್ಯ. ಸೂರ್ಯನ ತಾಪ ಒಳ್ಳೆಯದಲ್ಲಾ" ಎಂದರು.

ಊಟದ ಮನೆಗೆ ಚಾಪೆಯಗೋಡೆ, ಛಾವಣಿಗಳಿದ್ದುವು. ಪಕ್ಕಳೂ ಸೇರಿ ಅಲ್ಲಿದ್ದ ಮೂವತ್ತು ಜನರು ಒಂದೊಂದು ಸಣ್ಣ ಚಾಪೆ ಹಾಕಿಕೊಂಡು ಮುಂದೆ ಒಂದು ಹಿತ್ತಾಳೆ ತಟ್ಟೆಯಿಟ್ಟುಕೊಂಡು ಕುಳಿತಿದ್ದರು. ಗಾಂಧಿ ಒಂದು ದಿಂಬಿನ ಮೇಲೆ ಕುಳಿತಿದ್ದನು. ಆಶ್ರಮದ ಹೆಂಗಸರು, ಗಂಡಸರು ಬರಿಗಾಲಿನಲ್ಲಿ ಸದ್ದಿಲ್ಲದೆ ಓಡಾಡುತ್ತಾ ಬಡಿಸುತ್ತಿದ್ದರು. ಗಾಂಧಿ ನನಗೊಂದು ಕಂಚಿನ ಪಾತ್ರೆ ಕೊಟ್ಟನು. ಅದರಲ್ಲಿ ಬಸಲೆ ಸೊಪ್ಪು, ಕುಂಬಳಕಾಯಿ ಚೂರುಗಳು ಕಂಡವು. ಒಬ್ಬ ಹೆಂಗಸು ಸ್ವಲ್ಪ ಉಪ್ಪು ಹಾಕಿದಳು; ಇನ್ನೊಬ್ಬಾಕೆ ಒಂದು ಬಟ್ಟಲು ಬಿಸಿನೀರನ್ನೂ, ಒಂದು ಬಟ್ಟಲು ಬಿಸಿ

ಹಾಲನ್ನೂ ಕೊಟ್ಟಳು. ಸಿಪ್ಪೆ ಸುಲಿಯದ ಎರಡು ಬೆಂದ ಆಲೂಗೆಡ್ಡೆ ಚಪಾತಿಗಳು ಕೊಡಲ್ಪಟ್ಟುವು. ಹತ್ತಿರವೇ ಕುಳಿತಿದ್ದ ಗಾಂಧಿ ತನ್ನೆದುರಿಗಿದ್ದ ಪಾತ್ರೆಯಿಂದ ಒಂದು ತೆಳುವಾದ ರೊಟ್ಟಿಯನ್ನು ತೆಗೆದು ನನಗೆ ಕೊಟ್ಟನು.

ಒಂದು ಜಾಗಟೆಯು ಸದ್ದಾಗುತ್ತಲೇ ಬಲಿಷ್ಠನಾದ ಒಬ್ಬ ಯುವಕ ಎದ್ದು ನಿಂತು, ಕಣ್ಣು ಮುಚ್ಚಿ ಗಟ್ಟಿಯಾಗಿ ಹಾಡಲಾರಂಭಿಸಲು ಎಲ್ಲರೂ ಆತನೊಡನೆ ಹಾಡಲು ಪ್ರಾರಂಭಿಸಿದರು. ಪ್ರಾರ್ಥನೆ, "ಶಾಂತಿ ಶ್ಯಾಂತಿ ಶ್ಯಾಂತಿಃ," ಎಂದು ಮುಗಿಯಿತು. ಎರಡು ಚಪಾತಿಗಳನ್ನು ಮುಡಿಸಿ ಅದರಿಂದ ತರಕಾರಿಯನ್ನೆತ್ತಿಕೊಂಡು ಕೈಗಳಿಂದಲೇ ತಿನ್ನಲಾರಂಭಿಸಿದರು. ನನಗೆ ಒಂದು ಚಮಚವನ್ನು ಕೊಟ್ಟರು. ಗಾಂಧಿಯೂ ಬೇಗ ಬೇಗ ಅಗಿಯುತ್ತಾ ಆಗಾಗ ಹೆಂಡತಿಗೂ ಸಮೀಪ ಬಂಧುಗಳಿಗೂ ಬಡಿಸುತ್ತಿದ್ದನು.

"ನೀವು ರಷ್ಯಾದಲ್ಲಿ ಹದಿನಾಲ್ಕು ವರ್ಷಗಳಿದ್ದಿರಿ. ಸ್ಟಾಲಿನ್ ವಿಚಾರದಲ್ಲಿ ನಿಮ್ಮ ಅಭಿಪ್ರಾಯವೇನು?" ಇದೇ ಗಾಂಧಿ ನನಗೆ ಹಾಕಿದ ಮೊದಲನೆಯ ರಾಜಕೀಯ ಪ್ರಶ್ನೆ.

ನನಗೆ ಬಹುಸೆಕೆಯಾಗಿ ಕೈಗಳೆಲ್ಲಾ ಜಿವತಿತ್ತು. ನೆಲದ ಮೇಲೆ ಕುಳಿತಿದ್ದುದರಿಂದ ಕಾಲುಗಳೂ ನೋಯುತ್ತಿದ್ದುವು. ಆದುದರಿಂದ ಮೊಟಕಾಗಿ, "ಬಹಳ ಶಕ್ತ, ನಿರ್ದಯಿ," ಎಂದೆ.

"ಹಿಟ್ಲರನಷ್ಟು ಕಠಿಣನೇ?" ಎಂದು ಆತ ಕೇಳಿದನು.

"ಅಷ್ಟಾದರೂ."

ಸ್ವಲ್ಪ ಹೊತ್ತಾದ ಮೇಲೆ ಆತನು ನನ್ನ ಕಡೆ ತಿರುಗಿ, "ನೀವು ವೈಸರಾಯನ್ನು ನೋಡಿದ್ದೀರಾ?" ಎಂದನು. ನಾನು ಹೌದೆಂದೆ. (ವೈಸರಾಯಿ ನನ್ನೊಡನೆ-ತಪ್ಪು ಮಾಡಬೇಡಿ. ಆ ಮುದುಕ ಇಂಡಿಯಾದಲ್ಲೆಲ್ಲಾ ಅತಿ ಮುಖ್ಯನಾದವನು— ಎಂದು ಹೇಳಿದ್ದನು).

ಪುನಃ ಅಡಿಗೆಯವರು ಅದೇ ಆಹಾರವನ್ನು ಬಡಿಸಲು ಬಂದರು. ಗಾಂಧಿ "ಬೇಕಾದಷ್ಟು ನೀರು ಕುಡಿಯಬಹುದು. ಚನ್ನಾಗಿ ಕುದಿಸಿದ್ದೇವೆ. ಈಗ ಮಾವಿನ ಹಣ್ಣು ತಿನ್ನಿ," ಎಂದರು. ನಾನು ಸಿಪ್ಪೆ ತೆಗೆಯಲಾರಂಭಿಸಿದುದನ್ನು ನೋಡಿ ಆತನೂ, ಇತರರೂ ನಗಲಾರಂಭಿಸಿದರು. ಅವರೆಲ್ಲಾ

ಸಾಧಾರಣವಾಗಿ ಅದನ್ನು ಸ್ವಲ್ಪ ಅಮುಕಿ ಒಂದು ಕೊನೆಯಿಂದ ರಸವನ್ನು ಹೀರುತ್ತಿದ್ದರು. ಆದರೆ ಚೆನ್ನಾಗಿದೆಯೋ, ಇಲ್ಲವೋ ನೋಡಲು ಕತ್ತರಿಸುವುದೇ ಸರಿಯೆಂದು ಗಾಂಧಿ ಹೇಳಿದರು.

ಸಂಜೆಯೂ ಹೆಚ್ಚು ಕಡಿಮೆ ಇದೇ ಆಹಾರ. ನಾನೊಬ್ಬನೇ ಅತಿಥಿ ಗುಡಿಸಿಲಿನಲ್ಲಿ ಪ್ರಾತಃಕಾಲ ಫಲಾಹಾರ ಮಾಡಿದೆ. ಚಹಾ, ಬಿಸ್ಕೆಟ್ಟು, ಬ್ರೆಡ್ಡು, ಬೆಣ್ಣೆ, ಜೇನುತುಪ್ಪ, ಮಾವಿನ ಹಣ್ಣು. ಊಟದ ಸಮಯದಲ್ಲಿ ಗಾಂಧಿ ನನ್ನ ಸಣ್ಣ ಚಮಚಕ್ಕೆ ಬದಲಾಗಿ ಒಂದು ದೊಡ್ಡ ಚಮಚವನ್ನು ಕೊಟ್ಟು, "ಇದು ನಿಮ್ಮ ಗಾತ್ರಕ್ಕೆ ಸರಿಯಾಗಿದೆ," ಎಂದು ಪರಿಹಾಸ್ಯ ಮಾಡಿದರು. ಬೆಂದ ಈರುಳ್ಳಿಯನ್ನು ಆತನು ಕೊಡಲು ನಾನು ಹಸಿಯಾದುದೇ ಬೇಕೆಂದು ಕೇಳಿದೆ. ಮಾರನೆಯ ದಿನ ಊಟದ ಹೊತ್ತಿನಲ್ಲಿ ಗಾಂಧಿ, "ಫಿಷರ್ ನಿಮ್ಮ ಪಾತ್ರೆ ಕೊಡಿ. ತರಕಾರಿ ಹಾಕುತ್ತೇನೆ," ಎಂದರು. ನನಗೆ ಅವುಗಳನ್ನು ಎರಡು ದಿವಸದಲ್ಲಿ ನಾಲ್ಕಾರು ಬಾರಿ ತಿಂದು ಬೇಸರವಾಗಿದೆಯೆಂದು ಹೇಳಿದೆ. "ನಿಮಗೆ ತರಕಾರಿ ಇಷ್ಟವಿಲ್ಲ," ಎಂದು ಆತನೆಂದನು.

"ಮೂರು ದಿನಗಳು ಒಂದೇ ತರಕಾರಿಯ ರುಚಿ ನನಗಿಷ್ಟವಿಲ್ಲ", ಎಂದೆ.

"ನೀವು ಹೆಚ್ಚಾಗಿ ಉಪ್ಪು, ನಿಂಬೆರಸ ಹಾಕಿಕೊಳ್ಳಬೇಕು," ಎಂದು ಆತ ಸೂಚಿಸಿದರು.

"ಏನು, ಆ ತರಕಾರಿಯ ರುಚಿ ಕೊಲ್ಲುವುದಕ್ಕೆ ?"

"ಇಲ್ಲ. ಹೆಚ್ಚು ಮಾಡುವುದಕ್ಕೆ," ಎಂದು ಆತನು ನಕ್ಕನು.

"ನೀವು ಅಹಿಂಸಾವಾದಿಗಳು. ರುಚಿಯನ್ನೂ ಕೊಲ್ಲುವುದಿಲ್ಲವೇ ?"

"ಅದೊಂದನ್ನೇ ಜನರು ಕೊಂದರೆ ನನ್ನದೇನೂ ಆಕ್ಷೇಪಣೆಯಿಲ್ಲ"

ನಾನು ಮುಖ, ಕತ್ತುಗಳ ಬೆವರನ್ನೊರಸಿಕೊಂಡೆ. "ನಾನು ಮುಂದಿನ ಸಲ ಇಂಡಿಯಾಕ್ಕೆ ಬಂದರೆ...." ಎಂದು ಪ್ರಾರಂಭಿಸಿದೆ. ಆತ ಕೇಳಿದಂತಿರಲಿಲ್ಲವಾದುದರಿಂದ ಅಷ್ಟಕ್ಕೆ ನಿಲ್ಲಿಸಿದೆ.

"ಹೂ. ನೀವು ಮುಂದಿನ ಸಲ ಇಂಡಿಯಾಕ್ಕೆ ಬಂದಾಗ...."

"ನೀವು ಸೇವಾಗ್ರಾಮದಲ್ಲಿ ಶಾಖ ಸಮನಾಗಿ ಮಾಡುವ ಸಲಕರಣೆ

ಯಿಟ್ಟುಕೊಳ್ಳಬೇಕು. ಇಲ್ಲದಿದ್ದರೆ ವೈಸರಾಯಿ ಅರಮನೆಯಲ್ಲಿ ವಾಸಿಸಬೇಕು," ಎಂದೆ.

ಆತನು "ಆಗಲಿ," ಎಂದು ಒಪ್ಪಿದನು. ತನ್ನ ಇಷ್ಟವೇನೆಂದು ಹೇಳಲಿಲ್ಲ. ಆತನಿಗೆ ತಮಾಷೆ, ಹಾಸ್ಯ ಇಷ್ಟವಾಗಿತ್ತು. ಲಂಡನ್ನಿನಲ್ಲಿ ತಾನು ಲಾರ್ಡ್ ಸ್ಯಾಂಕಿಗೆ ಹೇಳಿದ್ದ ಮಾತನ್ನು ಒಂದು ಮಧ್ಯಾಹ್ನ ಹೇಳಿದರು. "ನಾನು ಎಚ್ಚರಿಕೆಯಿಂದಿರದಿದ್ದರೆ ಇಷ್ಟು ವಯಸ್ಸಿನವರೆಗೂ ಬದುಕಿರುತ್ತಿದ್ದೆನೆ ? ಅದು ನನ್ನ ಒಂದು ತಪ್ಪು".

"ನೀವು ಒಂದು ತಪ್ಪು ಮಾಡುವವರಲ್ಲವೆಂದುಕೊಂಡಿದ್ದೆ," ನಾನು ಹಾಸ್ಯ ಮಾಡಿದೆ.

ಆತನು ನಕ್ಕನು. ಅಲ್ಲಿ ಕುಳಿತಿದ್ದ ೮–೧೦ ಜನ ಆಶ್ರಮವಾಸಿಗಳೂ ನಕ್ಕರು. (ಅವರು ಅಲ್ಲಿದ್ದರೆ ನನ್ನದೇನೂ ಆಕ್ಷೇಪಣೆ ಇಲ್ಲವೇ ಎಂದು ಆತನು ಮೊದಲೇ ಕೇಳಿದ್ದನು.)

" ಇಲ್ಲ. ನನ್ನಲ್ಲಿ ಅನೇಕ ತಪ್ಪುಗಳಿವೆ. ನೀವೂ ಹೊರಡುವುದರೊಳಗಾಗಿ ನನ್ನಲ್ಲಿ ನೂರಾರು ತಪ್ಪುಗಳನ್ನು ಕಂಡುಹಿಡಿಯುತ್ತೀರಿ. ನಿಮಗೆ ಸಾಧ್ಯವಾಗದಿದ್ದರೆ ನಾನೂ ಸಹಾಯಮಾಡುತ್ತೇನೆ."

ಸಾಧಾರಣವಾಗಿ ಮಾತನಾಡಲು ಪ್ರಾರಂಭಿಸುವ ಮೊದಲು ಆತನು ನೆಲದಮೇಲೆ ತಣ್ಣಗಿದ್ದ ಕಡೆ ನನ್ನನ್ನು ಕೂಡಿಸುತ್ತಿದ್ದನು. ಆಮೇಲೆ ನಗುತ್ತಾ, "ನಿಮ್ಮ ಏಟುಗಳಿಗೆ ಕಾದಿದ್ದೇನೆ," ಎನ್ನುತ್ತಿದ್ದನು.

ಒಂದು ಸಲ ಹೊಟ್ಟೆಗೆ ಪಟ್ಟು ಹಾಕಲು ಒಬ್ಬ ಮುಸ್ಲಿಂ ಹೆಂಗಸು ಮಣ್ಣು ತರಲು, ಮಲಗಿ, "ಮಲಗಿ ನಿಮ್ಮ ಏಟುಗಳನ್ನು ತಿನ್ನುತ್ತೇನೆ," ಎಂದನು. ಒಂದು ಘಂಟೆಯಾಗುತ್ತಲೇ ತನ್ನ ಗಡಿಯಾರ ನೋಡಿ, "ನಿಮ್ಮ ಘಂಟೆ ಮುಗಿಯಿತು," ಎನ್ನುತ್ತಿದ್ದನು. ಆತನು ಕಾಲ ತಪ್ಪುತ್ತಿರಲಿಲ್ಲ.

ಒಂದು ಸಲ ನಾನು ಹೊರಡುತ್ತಿರಲು ಆತನು, " ಹೋಗಿ ನೀರಿನ ಬಾನಿಯಲ್ಲಿ ಕುಳಿತುಕೊಳ್ಳಿ," ಎಂದನು. ಅರ್ಥ ನನಗೆ ಸರಿಯಾಗಿ ತಿಳಿಯಲಿಲ್ಲ. ಆದರೆ ಬಿಸಿಲಿನಲ್ಲಿ ಆ ನೂರು ಗಜ ಆತನ ಗುಡಿಸಿಲಿನಿಂದ ಅತಿಥಿಗೃಹಕ್ಕೆ ಹೋಗುವಾಗ ತಲೆಯೆಲ್ಲಾ ಬಿಸಿಯಾಗಲು ಬಾನಿನಲ್ಲಿ

ಕುಳಿತುಕೊಳ್ಳುವುದು ಒಳ್ಳೆಯದೆಂದು ತೋರಿತು. ಪ್ರತಿ ದಿನದ ಮಾತು ಕತೆ ಮುಗಿಯುತ್ತಲೇ ಅದನ್ನೆಲ್ಲಾ ಟೈಪ್ ಮಾಡುತ್ತಿದ್ದೆ. ಐದು ನಿಮಿಷ ದಲ್ಲಿ ಆಯಾಸವಾಗಿ ಬೆವರಿಳಿಯುತ್ತಿತ್ತು. ಈ ದಿನ ಬಾನಿಯಲ್ಲಿ ಒಂದು ಸಣ್ಣ ಮರದ ಪೆಟ್ಟಿಗೆಯನ್ನಿಟ್ಟು ಅದರ ಮೇಲೆ ಒಂದು ಚೌಕ ಹಾಸಿದೆ. ಬಾನಿಯ ಪಕ್ಕದಲ್ಲಿ ಒಂದು ದೊಡ್ಡ ಪೆಟ್ಟಿಗೆಯನ್ನಿಟ್ಟು ಅದರ ಮೇಲೆ ಟೈಪ್ ರೈಟರ್ ಇಟ್ಟೆ. ಆ ಸಿದ್ಧತೆಗಳಾದ ಮೇಲೆ ಬಾನಿಯಲ್ಲಿದ್ದ ಪೆಟ್ಟಿಗೆಯ ಮೇಲೆ ಬಟ್ಟೆ ತೆಗೆದು ಕುಳಿತು ಟೈಪ್ ಮಾಡಿದೆ. ಸ್ವಲ್ಪ ಹೊತ್ತಿಗೆ ಬೆವರುತ್ತಲೇ ಚೊಂಬಿನಲ್ಲಿ ನೀರೆತ್ತಿ ಮೈಮೇಲೆ ಸುರಿದುಕೊಂಡೆ. ಹೀಗೆ ಮಾಡಿದುದರಿಂದ ಒಂದು ಗಂಟೆ ಹೊತ್ತು ಆಯಾಸವಾಗದೆ ಟೈಪುಮಾಡಲು ಸಾಧ್ಯವಾಯಿತು. ಇದನ್ನು ಕೇಳಿ ಆಶ್ರಮದವರೆಲ್ಲಾ ಬಹಳವಾಗಿ ನಕ್ಕರು. ಅಲ್ಲಿದ್ದವರು ಯಾವಾಗಲೂ ವಿಷಣ್ಣರಾಗಿರದಂತೆ ಗಾಂಧಿ ನೋಡಿಕೊಳ್ಳುತ್ತಿದ್ದನು.

ರಾತ್ರಿ ತಣ್ಣಗೆ ಸುಖವಾಗಿರುತ್ತಿತ್ತು. ಎಲ್ಲರೂ ಗುಡಿಸಿಲಾಚೆ ಮರದ ಮಂಚಗಳ ಮೇಲೆ ಮಲಗುತ್ತಿದ್ದರು ನನಗೂ ಸುಖವಾಗಿ ನಿದ್ರೆ ಬರುತ್ತಿತ್ತು. ರಾತ್ರಿ ಶಾಂತವಾಗಿ, ಆಕಾಶ ನಕ್ಷತ್ರಗಳಿಂದ ತುಂಬಿರುತ್ತಿತ್ತು. ರಾತ್ರಿ ಪಾದರಕ್ಷೆಗಳಿಲ್ಲದೆ ನೆಲದ ಮೇಲೆ ಕಾಲಿಡಕೂಡದೆಂದು ಕುರ್ಷಿದ್ ಎಚ್ಚರಿಕೆ ಕೊಟ್ಟಿದ್ದಳು. ಚೇಳುಗಳು ಓಡಾಡುತ್ತಿದ್ದುವು.

ಬೆಳಿಗ್ಗೆ ಐದು ಘಂಟೆಗೆ ನಾನು ಗಾಂಧಿಯ ಗುಡಿಸಿಲಿಗೆ ಹೋದಾಗ ಆತನು ಹಾಸಿಗೆಯ ಮೇಲೆ ಹೊರಗಡೆ ಕುಳಿತು ಮಾವಿನ ರಸವನ್ನು ಚಮಚ ದಿಂದ ತಿನ್ನುತ್ತಿದ್ದನು. ಸ್ವಲ್ಪ ತಿಂದು ಕಸ್ತೂರಿಬಾಯಿಯಿಂದ ಒಂದು ಚೌಕವನ್ನೂ, ಒಂದು ಉದ್ದದ ಸೀಸೆಯಲ್ಲಿ ನೀರನ್ನೂ ತೆಗೆದುಕೊಂಡು ಕೈ ತೊಳೆದುಕೊಂಡು, ಹೊಲಗಳಲ್ಲಿ ಓಡಾಡಲು ಹೊರಡುತ್ತಿದ್ದನು. ಒಂದು ಸಲ ಹಳದಿಯ ಮಾವಿನ ರಸ ಒಂದು ತೊಟ್ಟು ಪಂಚೆಯ ಮೇಲೆ ಬೀಳಲು ಅನೇಕ ನಿಮಿಷಗಳ ಕಾಲ ಅದನ್ನು ಉಜ್ಜಿದನು. ಬೆಳಗ್ಗೆ, ಸಾಯಂಕಾಲ ನಡೆದಾಡಲು ಹೋದಾಗ ಎಳೆಯ ಹುಡುಗರ ಭುಜಗಳ ಮೇಲೆ ಕೈಯ್ಯಿ ರುತ್ತಿದ್ದನು. ಆ ಸಂತೋಷಕ್ಕಾಗಿ ಹುಡುಗ ಹುಡುಗಿಯರು ಸ್ಪರ್ಧಿಸುತ್ತಿ ದ್ದರು. ಆದರೆ ಬೇಗ ಬೇಗ ಹೆಜ್ಜೆ ಹಾಕಿ, ಅರ್ಧಗಂಟೆಯೂ ಮಾತನಾ

ಡಿದರೂ ಆಯಾಸವಾಗಲಿ, ಉಬ್ಬಸವಾಗಲಿ ಅವನಿಗಾಗುತ್ತಿರಲಿಲ್ಲ.

ಆತನ ದೇಹ ವಯಸ್ಸಾದಂತೆ ಕಾಣುತ್ತಿರಲಿಲ್ಲ. ಚರ್ಮ ಮೃದುವಾಗಿ ಆರೋಗ್ಯದಿಂದ ಮಿರುಗುತ್ತಿತ್ತು. ತಿನ್ನುವಾಗ, ಬರೆಯುವಾಗ ಆತನ ಮುದ್ದಾದ ಕೈಗಳು ನಡುಗುತ್ತಿರಲಿಲ್ಲ. ಹಿಂದಿನ ವಿಚಾರಗಳನ್ನು ಜ್ಞಾಪಕಮಾಡಿಕೊಂಡು ಹೇಳುತ್ತಿರಲಿಲ್ಲ. ಲಾಯ್ಡ್ ಜಾರ್ಜ್ ೭೦ನೆಯ ವಯಸ್ಸಿನಲ್ಲಿ ಈಗಿನ ವಿಚಾರ ಮಾತನಾಡಲು ಆರಂಭಿಸಿ ಸ್ವಲ್ಪ ಹೊತ್ತಿಗೆಲ್ಲಾ ತಾನು ಮೊದಲನೆಯ ಮಹಾ ಯುದ್ಧದಲ್ಲಿ ಮಾಡಿದ ಕೆಲಸವನ್ನೋ, ಶತಮಾನದ ಪ್ರಾರಂಭದಲ್ಲಿ ತಾನು ಮಾಡಲು ಪ್ರಯತ್ನಿಸಿದ ಸಾಮಾಜಿಕ ಸುಧಾರಣೆಯ ವಿಚಾರವನ್ನೋ ಹೇಳುತ್ತಿದ್ದನು. ಗಾಂಧಿ ಭವಿಷ್ಯತ್ತಿನ ಕಡೆಗೇ ದೃಷ್ಟಿಯಿಟ್ಟು, ಅಂದಿನ ಹೋರಾಟದ ವಿಚಾರ ಹೇಳುತ್ತಿದ್ದನು. ಸಾಮಾಜಿಕ ವಿಚಾರಗಳಲ್ಲಿ ಆತನಿಗಿದ್ದ ತೀವ್ರಾಸಕ್ತಿ ಆತನ ಬೌದ್ಧಿಕ ಯೌವನವನ್ನು ಸೂಚಿಸುತ್ತಿತ್ತು. ವಯಸ್ಸಾಗುತ್ತಾ ಆತನ ದೃಷ್ಟಿ ವಿಶಾಲವಾಗುತ್ತಾ ಹೋಯಿತು. ೧೯೩೦-೩೦ ರಲ್ಲಿ ಜಮೀನುದಾರರು ಸ್ವಂತ ಇಚ್ಛೆಯಿಂದ ಬಡ ರೈತರಿಗೆ ಭೂಮಿಯನ್ನು ದಾನವಾಗಿ ಕೊಡಬೇಕೆಂದು ಹೇಳಿದನು. ೧೦ ವರ್ಷಗಳ ಅನಂತರ ಇನ್ನೂ ಹೆಚ್ಚು ಚಟುವಟಿಕೆಯನ್ನು ಕೋರಿದನು. ಸ್ವತಂತ್ರ ಭಾರತದಲ್ಲಿ ಭೂಸ್ವಾಮ್ಯದ ವಿಚಾರವಾಗಿ ನಾನು ಕೇಳಿದಾಗ ಆತನು, "ರೈತರು ಭೂಮಿಯನ್ನು ತೆಗೆದುಕೊಳ್ಳುತ್ತಾರೆ," ಎಂದನು. "ಜಮೀನುದಾರರಿಗೆ ಪರಿಹಾರ ಸಿಕ್ಕುವುದೇ?", ಎಂದು ನಾನು ಕೇಳಿದೆ. ಆತನು, "ಇಲ್ಲ, ಅದು ಸಾಧ್ಯವಿಲ್ಲ," ಎಂದನು. ವಯಸ್ಸು, ಬದಲಾಯಿಸುವ, ಕಲಿಸುವ, ಮಾಡುವ ಶಕ್ತಿಯನ್ನು ಕಸಿದು ಕೊಂಡಿರಲಿಲ್ಲ.

ಮುಖದಲ್ಲೇನೋ ವಯಸ್ಸು ಕಾಣುತ್ತಿತ್ತು. ಅಗಲವಾದ ಹಣೆ, ಎದ್ದು ಕಾಣುವ ದೊಡ್ಡ ಕಿವಿಗಳು, ತುಟಿಯ ಮೇಲೆ ಕಪ್ಪು ಬಿಳುಪು ಮಿಶ್ರವಾದ ಸಣ್ಣ ಮೀಸೆ, ಬಾಗಿದ ಮೂಗು ತುಟಿಯನ್ನು ತಾಗುತ್ತಿತ್ತು. ಮೃದುವಾದ ಕಣ್ಣುಗಳು, ಆತ್ಮ ಸಂಯಮ, ಶಕ್ತಿ, ಸಹನೆಗಳನ್ನು ಸೂಚಿಸುತ್ತಿದ್ದ ಕೆಳದುಟಿ, ಬೊಚ್ಚು ಬಾಯಿಯ ನಗು ಇವುಗಳಿಂದ ಮುಖಭಾವ ಸುಂದರವಾಗಿತ್ತು. (ತಿನ್ನುವಾಗ ಮಾತ್ರ ಕೃತಕ ದಂತಗಳನ್ನು ಧರಿಸಿ,

ಊಟವಾಗುತ್ತಲೇ ಎಲ್ಲರೆದುರಿಗೆ ಅವುಗಳನ್ನು ತೊಳೆಯುತ್ತಿದ್ದನು). ಕಣ್ಣು ಗಳನ್ನು ಬಿಟ್ಟರೆ ಮುಖ ವಿಕಾರವಾಗಿತ್ತು. ಸುಮ್ಮನಿದ್ದರೆ ಮುಖ ವಿಕಾರ ವಾಗಿರುತ್ತಿತ್ತು. ಆದರೆ ಸಾಮಾನ್ಯವಾಗಿ ಆತ ಎಂದೂ ಸುಮ್ಮನಿರುತ್ತಿರ ಲಿಲ್ಲ. ಮಾತನಾಡುತ್ತಿರಲಿ, ಕೇಳುತ್ತಿರಲಿ, ಆಲೋಚಿಸುತ್ತಿರಲಿ ಮುಖ ಆ ಆಲೋಚನೆಗಳನ್ನೆಲ್ಲಾ ಪ್ರತಿಬಿಂಬಿಸುತ್ತಿತ್ತು. ನಿರ್ಧಾರಗಳನ್ನು ಆತನೆಂದೂ ಹೇಳುತ್ತಿರಲಿಲ್ಲ. ಆತನ ಆಲೋಚನೆಗಳು ಎಲ್ಲರಿಗೆ ಕೇಳಿಸಿ, ಮೆದುಳು ಕೆಲಸ ಮಾಡುತ್ತಿರುವುದು ಅರ್ಥವಾಗುತ್ತಿತ್ತು. ಮಾತುಗಳೇ ಅಲ್ಲ; ಆಲೋಚನೆಗಳು ಹುಟ್ಟುವುದೂ ಕೇಳುತ್ತಿತ್ತು. ರಾಜಕೀಯ ವ್ಯಕ್ತಿಗಳು ಕೊಡುವಂತೆ ಸಿದ್ಧಪಡಿಸಿದ ಸಂದೇಶವನ್ನು ಆತ ಕೊಡು ತ್ತಿರಲಿಲ್ಲ. ನಿಮ್ಮಿಂದ ಆತನಿಂದ ಸೃಷ್ಟಿಯಾಗುವ ಆಲೋಚನೆಯ ಪ್ರಯೋಗ ಕಾಣಬರುತ್ತಿತ್ತು.

ಲಾಯ್ಡ್ ಜಾರ್ಜ್ ದೊಡ್ಡ ಮನುಷ್ಯನಂತೆ ಕಾಣುತ್ತಿದ್ದನು. ಚರ್ಚಿಲ್ ಮತ್ತು ಫ್ರಾಂಕ್ಲಿನ್ ಡಿ. ರೂಸ್‌ವೆಲ್ಟರಿಗೆ ಭವ್ಯ ವ್ಯಕ್ತಿತ್ವವಿತ್ತು. ಗಾಂಧಿಗಿರಲಿಲ್ಲ. ಮಾತಿನಲ್ಲಿ, ನಡೆದಾಟದಲ್ಲಿ, ಊಟದಲ್ಲಿ ಸಾಮಿಪ್ಯ ದಿಂದ ಅರೆ ಬೆತ್ತಲೆ ಮನುಷ್ಯ ಹೆದರಿಕೆಯನ್ನಾಗಲಿ, ಗೌರವವನ್ನಾಗಲಿ ಉಂಟುಮಾಡುತ್ತಿರಲಿಲ್ಲ. ಆದುದರಿಂದಲೇ ಆತನ ವ್ಯಕ್ತಿತ್ವದ ಮಾಯೆಯ ಅನುಭವ ಅಷ್ಟು ತೀಕ್ಷ್ಣವಾಗಿ ಉಂಟಾಗುತ್ತಿತ್ತು. ದೊಡ್ಡಸ್ತಿಕೆಯ ಗುರುತುಗಳಾದ ಅರಮನೆ, ಕಾವಲುಗಾರರು, ಮುಚ್ಚಿದ ಬಾಗಿಲು, ಅಧಿ ಕಾರ ಶಕ್ತಿ ಯಾವುದೂ ಇರಲಿಲ್ಲ. ಅಧಿಕಾರದ ತೋರಿಕೆಯಾಗಲಿ, ಸತ್ಯತೆ ಯಾಗಲಿ ಇಲ್ಲದ ಗಾಂಧಿಯ ಸರಳತೆ ಆತನ ಅಧಿಕಾರ ಶಕ್ತಿಯನ್ನು ಎತ್ತಿ ತೋರಿಸುತ್ತಿದ್ದಿತು. ಸರ್ವಶಕ್ತನಾದ ನಿರಂಕುಶ ಪ್ರಭುವಿಗೆ ಅಧಿಕಾರವಿರು ವುದು ಅಪರೂಪ. ಗಾಂಧಿಗೆ, ಒತ್ತಾಯಪಡಿಸುವ, ಶಿಕ್ಷಿಸುವ ಸುಮ್ಮಾನ ಮಾಡುವ ಶಕ್ತಿಯಿರಲಿಲ್ಲ. ಆತನಿಗೆ ಅಧಿಕಾರವಿರಲಿಲ್ಲ; ಶಕ್ತಿ ಅಮಿತ ವಾಗಿತ್ತು. ಅದು ಪ್ರೇಮದಿಂದ ಉಂಟಾದುದು. ಆತನೊಡನೆ ಇದ್ದು ಆತನಲ್ಲಿ ಇತರರಿಗಿದ್ದ ಪ್ರೇಮದ ಕಾರಣವನ್ನು ತಿಳಿಯಬಹುದಾಗಿತ್ತು. ಆತನು ಪ್ರೀತಿಸುತ್ತಿದ್ದನು. ಆಗೊಂದು ಬಾರಿ, ಈಗೊಂದು ಬಾರಿ ಅಲ್ಲ; ಪ್ರತಿದಿನ ಹಗಲು, ರಾತ್ರಿ, ಅನೇಕ ವರ್ಷಗಳು ತನ್ನ ಎಲ್ಲಾ ಕೆಲಸಗಳಲ್ಲಿ,

ಮಾತುಗಳಲ್ಲಿ, ವ್ಯಕ್ತಿಗಳಲ್ಲಿ, ಮಾನವ ವರ್ಗದಲ್ಲಿ ತನಗಿದ್ದ ಪ್ರೇಮವನ್ನು ತೋರುತ್ತಿದ್ದನು. ಆತನ ಪ್ರತಿ ವಾಕ್ಯದಲ್ಲಿ, ಭಾವದಲ್ಲಿ, ಕೆಲವು ಸರಳ ವಾದ ಧ್ಯೇಯಗಳಲ್ಲಿ ಆತನಿಗಿದ್ದ ಜೀವಿತ ಪರ್ಯಂತದ ಗೌರವ ಕಾಣುತ್ತಿದ್ದಿತು. ಗುರಿಗಿಂತ ಮಾರ್ಗಕ್ಕೆ ಪ್ರಾಶಸ್ತ್ಯ; ಅಹಿಂಸೆ; ಸತ್ಯದ ಪ್ರಾಮುಖ್ಯತೆ; ನಂಬಿಕೆಯಿಂದಾಗುವ ಸಮೃದ್ಧಿ; ಬೇರೆಯವರ ಸಂಶಯ, ನಿಧಾನ, ವಾತಾವರಣ, ಮನಸ್ಸಿನ ಹೋರಾಟಗಳಲ್ಲಿ ಸಹಾನುಭೂತಿ. ಪ್ರತಿದಿನದ ಸಮಸ್ಯೆಗಳನ್ನೂ ಶಾಶ್ವತ ಸತ್ಯದ ದೃಷ್ಟಿಯಿಂದ ಪರಿಹರಿಸುತ್ತಿದ್ದನು. ಒಂದು ಸಮಸ್ಯೆಯ, ನೈತಿಕ ತಿರುಳನ್ನು ಪರೀಕ್ಷಿಸಿ, ಅಪ್ರಕೃತವಾದ ವಿಚಾರಗಳನ್ನು ಬದಿಗೊತ್ತಿ, ನಶ್ವರತೆಯಿಲ್ಲದಿರುವ ಶಾಶ್ವತವಾದ ತಿರುಳನ್ನು ಗ್ರಹಿಸುತ್ತಿದ್ದನು. ಸಾಮಾಜಿಕ ಅಣುವನ್ನೊಡೆದು ಜನತೆಯಲ್ಲಿ ಚೈತನ್ಯದ ಹೊಸ ಮೂಲವನ್ನು ಕಂಡು ಹಿಡಿಯಲು ಆತನು ಶಕ್ತನಾದನು. ಆತನಷ್ಟು ಮಟ್ಟಿಗೆ, ಅಥವಾ ಇನ್ನೂ ಮೇಲಾಗಿ ಬರೆದವರು, ಮಾತನಾಡಿದವರು ಇದ್ದರು. ಬೇರೆಯವರಿಂದ ಸಾಧ್ಯವಾದ, ಅವರು ಮಾಡದ ಕೆಲಸವನ್ನು ಮಾಡಿದುದೇ ಗಾಂಧಿಯ ಹೆಚ್ಚಳ. ಈ ಪವಾಡವನ್ನು ನೋಡಿ ಮೂಕರಾಗಬೇಕಾಗಿತ್ತು. ಏಕೆಂದರೆ ಅದು ನಿಶ್ಚಿತ ಕಾರ್ಯ ಕ್ರಮವಾಗಿರದೆ, ಅನಾಯಾಸವಾದ ಜೀವನ ಕ್ರಮವಾಗಿತ್ತು.

ಠಾಕೂರರು ಗಾಂಧಿಯ ವಿಚಾರವಾಗಿ, “ಆತನು ಜಯಶೀಲನಾಗದಿರಬಹುದು. ಬುದ್ಧ ಸೋತಂತೆ, ಕ್ರಿಸ್ತ ಸೋತಂತೆ ಮಾನವರನ್ನು ಪಾಪದಿಂದ ಉದ್ಧಾರಮಾಡಲು ಅಶಕ್ತನಾಗಬಹುದು. ಆದರೆ ತನ್ನ ಜೀವನ ಯುಗಾಂತರಗಳವರೆಗೂ ಬೋಧಪ್ರದವಾಗಿ ಮಾಡಿದವನೆಂದು ಆತನು ಸ್ಮರಿಸಲ್ಪಡುತ್ತಾನೆ,” ಎಂದು ಬರೆದನು. ಗಾಂಧಿ ತನ್ನ ಕಾರ್ಯಗಳನ್ನು ಮೆಟ್ಟಿ ನಿಂತನು. ಅವುಗಳ ಜಯಾಪಜಯಗಳನ್ನು ಮೀರಿದ ಸ್ವಾತಂತ್ರ್ಯವನ್ನು ಆತನು ಗಳಿಸಿದ್ದನು. ಆತನೇ ಮುಖ್ಯನಾದವನು; ಆತನ ಕಾರ್ಯ, ಮಾತುಗಳಲ್ಲ. ಇದರಿಂದಲೇ ಆತನನ್ನು ನಿರಾಕರಿಸದೆ, ಆತನ ಅಭಿಪ್ರಾಯಗಳನ್ನು ಒಪ್ಪದಿರಲು ಸಾಧ್ಯವಿತ್ತು. ಅವಮಾನದ ಭಾವನೆಯಿಲ್ಲದೆ ಒಪ್ಪದ ವ್ಯವಹಾರಕ್ಕೆ ಸಮ್ಮತಿಸಬಹುದಾಗಿತ್ತು.

ಒಂದು ಸಂಜೆ ನಾನು ಮಹದೇವ ದೇಸಾಯಿಯ ಗುಡಿಸಿಲಿಗೆ ಹೋಗಿ

ಆತನು ನೂಲುವುದನ್ನು ನೋಡುತ್ತಿದ್ದೆ. ನಾನು ಗಾಂಧಿಯ ಮಾತುಗಳನ್ನು ಕೇಳಿ, ನನ್ನ ಪತ್ರಗಳನ್ನೋದಿ, ಗಾಂಧಿಗೆ ಜನರ ಮೇಲಿನ ಹಿಡಿತಕ್ಕೆ ಕಾರಣವೇನೆಂದು ತಿಳಿಯಲಾರದವನಾಗಿದ್ದೆನೆಂದು ಹೇಳಿದೆ. ಅದು ಆತನ ಭಾವಾವೇಶವಿರಬಹುದೆಂದೆ.

"ಅದು ಸರಿ," ಆತನೆಂದನು.

"ಆತನ ಭಾವನೆಯ ಮೂಲವೇನು?"

"ಈ ಆವೇಶ, ದೇಹಕ್ಕೆ ಸಂಬಂಧಿಸಿದ ಎಲ್ಲ ಆವೇಶಗಳ ಸಾರಾಂಶ."

"ಕಾಮವೋ?"

"ಕಾಮ, ಕ್ರೋಧ, ಬಯಕೆ. ಗಾಂಧಿ ಸಂಪೂರ್ಣವಾಗಿ ತನ್ನ ಹಿಡಿತದಲ್ಲಿದ್ದಾನೆ. ಆದರಿಂದ ಅಗಾಧ ಶಕ್ತಿ, ಆವೇಶ ಉತ್ಪತ್ತಿಯಾಗಲು ಅವಕಾಶವಿದೆ."

ನಾನು ಆಶ್ರಮದಲ್ಲಿದ್ದ ವಾರದಲ್ಲಿ ಈ ಶಕ್ತಿ ಆವೇಶಗಳು ಗಾಂಧಿಯನ್ನು ಬೇರೊಂದು ಅಸಹಕಾರ ಚಳುವಳಿಯ ಕಡೆ ದೂಡುತ್ತಿದ್ದುವು. ಸರ್ ಸ್ಟಾಫರ್ಡ್ ಕ್ರಿಪ್ಸ್ ಬಂದು, ಸೋತು ಹೊರಟುಹೋಗಿದ್ದನು. ಚರ್ಚಿಲ್‌ಗೆ ಇಂಡಿಯಾ ದೇಶಕ್ಕೆ ಸ್ವಾತಂತ್ರ್ಯ ಕೊಡುವ ಉದ್ದೇಶವಿರಲಿಲ್ಲ. ಕೃಷ್ಣನಂತೆ, ಸದಾ ಕಾರ್ಯತತ್ಪರತೆಯಲ್ಲಿ ಉತ್ಸಾಹವಿದ್ದ ಮಹಾತ್ಮ ೧೯೪೨ರ ಜೂನ್‌ನಲ್ಲಿ, "ಇಂಡಿಯಾವನ್ನು ಬಿಟ್ಟು ಹೊರಡಿ," ಎಂಬ ಸೂತ್ರ ಹಿಡಿದು ಸರ್ಕಾರ ವಿರುದ್ಧ ಚಳುವಳಿ ಹೂಡಬೇಕೆಂದು ಆಲೋಚಿಸಿದನು. ಆಶಾ ಭಗ್ನತೆಗೆ ಕಾರ್ಯೋನ್ಮುಖತೆಯೇ ಮದ್ದು.

ಇಂಡಿಯಾ ದೇಶಕ್ಕೆ ಸ್ವಾತಂತ್ರ್ಯ ದೊರಕದಿದ್ದರೆ ಯುದ್ಧದಲ್ಲಿ ಪ್ರಜಾಪ್ರಭುತ್ವಗಳ ಸ್ಥಾನಕ್ಕೆ ನೈತಿಕ ಬುಡವೇ ಇಲ್ಲವೆಂದು ಗಾಂಧಿ ವಾದಿಸಿದನು. ಒಂದು ಮಧ್ಯಾಹ್ನ ನನ್ನನ್ನು, "ನಿಮ್ಮ ಅಧ್ಯಕ್ಷ ನಾಲ್ಕು ಸ್ವಾತಂತ್ರ್ಯಗಳ ವಿಚಾರ ಮಾತನಾಡುತ್ತಾರೆ. ಅವುಗಳಲ್ಲಿ ಸ್ವತಂತ್ರವಾಗಿರುವ ಸ್ವಾತಂತ್ರ್ಯ ಸೇರಿದೆಯೇ?", ಎಂದು ಕೇಳಿದನು. ಚರ್ಚಿಲ್ ತಗ್ಗಿ, ಕ್ರಿಪ್ಸ್ ಇಂಡಿಯನ್ನರ ಸಹಾಯವನ್ನು ಯುದ್ಧಕ್ಕೊದಗಿಸಿಕೊಡಬೇಕೆಂದು ರೂಸ್‌ವೆಲ್ಟ್ ಬಲವಂತ ಮಾಡಿದರೂ, ಆ ಪ್ರಧಾನ ಮಂತ್ರಿ ಜಗ್ಗಲಿಲ್ಲ.

ಜವಹರ್‌ಲಾಲ್ ನೆಹ್ರು, ಕಾಂಗ್ರೆಸ್ ಅಧ್ಯಕ್ಷ ಮೌಲಾನ ಆಜಾದ್

ಗಾಂಧಿ ಸೂಚಿಸಿದ ಅಸಹಕಾರ ಚಳುವಳಿಯನ್ನೊಪ್ಪಲಿಲ್ಲ. ನಾನು ಅಲ್ಲಿದ್ದಾಗ ನೆಹ್ರೂ ಮೂರು ದಿನಗಳನ್ನು ಗಾಂಧಿಯೊಡನೆ ಚರ್ಚಿಸುತ್ತಾ ಆಶ್ರಮದಲ್ಲಿ ಕಳೆದನು. ಗಾಂಧಿ 'ಹರಿಜನ' ಪತ್ರಿಕೆಯಲ್ಲಿ, "ಆತನು ನನ್ನ ನಿಲುವನ್ನು ಎದುರಿಸಿದ ಆವೇಶವನ್ನು ವರ್ಣಿಸಲು ನನ್ನಲ್ಲಿ ಮಾತುಗಳಿಲ್ಲ", ಎಂದು ಬರೆದನು. "ವೈಯಕ್ತಿಕ ಸಂಪರ್ಕದಿಂದ, ಚೀಣಾ, ರಷ್ಯಾಗಳ ವಿನಾಶ ಆತನಿಗೆ ಉದ್ವೇಗವನ್ನುಂಟುಮಾಡುತ್ತದೆ. ಆ ದುಃಖದಲ್ಲಿ ಆತನು ಸಾಮ್ರಾಜ್ಯವಾದದೊಡನಿದ್ದ ತನ್ನ ಹಳೆಯ ಕಲಹವನ್ನು ಮರೆಯಲು ಪ್ರಯತ್ನಿಸಿದನು. ಆದರೆ ಆಶ್ರಮ ಬಿಟ್ಟು ಹೋಗುವ ವೇಳೆಗೆ ತರ್ಕದ ನಿಜಾಂಶ ಆತನಿಗೆ ಹೊಳೆದಿತ್ತು." ನಿಜಾಂಶದ ಶಕ್ತಿಗಿಂತ ಗಾಂಧಿಯ ಕೈವಾಡದ ಬಲವೇ ಹೆಚ್ಚಾಗಿತ್ತು. ನನ್ನೆದುರಿಗೆ ಗಾಂಧಿ ನೆಹ್ರೂವಿನೊಡನೆ, ಆತನು ಸೇರಲಿ, ಸೇರದಿರಲಿ ಅಸಹಕಾರ ಚಳುವಳಿ ಪ್ರಾರಂಭವಾಗುವುದೆಂದು ಹೇಳಿದನು.

ನೆಹ್ರೂ ಸ್ವಭಾವ ಸುಲಭವಾಗಿ ಬಗ್ಗತಕ್ಕುದಲ್ಲ. ಗಾಂಧಿಗೆ ಇಂಡಿಯನ್ನರು ಯಾಂತ್ರಿಕವಾದ ವಿಧೇಯತೆ ತೋರುವುದು ಜವಹರ್‌ಲಾಲ್‌ಗೆ ಬೇಸರವನ್ನುಂಟುಮಾಡುತ್ತಿತ್ತು. ಆ ಎದುರಿಲ್ಲದ ವ್ಯಕ್ತಿಗೆ, "ಇಲ್ಲ" ಎಂದು ಹೇಳುವುದರಿಂದ ಆತನಿಗೆ ಸ್ವಾತಂತ್ರ್ಯದ ಅನುಭವವುಂಟಾಗುತ್ತಿತ್ತು. ಎದುರಿಸುವುದರಿಂದ ಶಕ್ತಿಯ ಕಲ್ಪನೆಯುಂಟಾಗುತ್ತಿತ್ತು. ಆತನ ರೋಷ, ಮನಸ್ಸಿಗೆ ಶಕ್ತಿಯನ್ನು ಕೊಡುತ್ತಿತ್ತು. ಈ ವಿಚಾರದಲ್ಲಿ ಆತನು ಇಂಡಿಯಾದಂತೆ, ಗಾಂಧಿಗೆ ವ್ಯತಿರಿಕ್ತವಾಗಿದ್ದನು. ನೆಹ್ರು ಶಕ್ತಿಯ ತೋರಿಕೆಯಲ್ಲಿ ಸಂತೋಷಪಡುತ್ತಿದ್ದನು. ಅಶಕ್ತನಾದ ಮನುಷ್ಯ, ಅಶಕ್ತವಾದ ಜನಾಂಗ ಶಕ್ತರ ಚಲನವಲನಗಳನ್ನು ಅನುಕರಿಸುತ್ತಿದ್ದವು. ಶಕ್ತನಾದ ಗಾಂಧಿ ಅಶಕ್ತರಿಗೆ ಬಲವನ್ನಿತ್ತನು.

ಮಹಾತ್ಮನ ಒತ್ತಾಯಕ್ಕೆ ತಲೆಬಾಗಿ ನೆಹ್ರು ಗಾಂಧಿಗಿಂತ ಹೆಚ್ಚಾಗಿ ಅಸಹಕಾರ ಚಳುವಳಿಗೆ ಬೆಂಬಲಕೊಟ್ಟನು. ಗಾಂಧಿ ಸಮಯಕ್ಕನುಸಾರವಾಗಿ ನಡೆದುಕೊಳ್ಳುತ್ತಿದ್ದನು. ಒಂದು ಮಧ್ಯಾಹ್ನ ನಾನು, "ಬ್ರಿಟಿಷರು ಇಂಡಿಯಾವನ್ನು ಸಂಪೂರ್ಣವಾಗಿ ಬಿಟ್ಟುಹೋಗಲು ಸಾಧ್ಯವಿಲ್ಲ. ಹಾಗೆ ಮಾಡಿದರೆ ಇಂಡಿಯಾವನ್ನು ಜಪಾನರಿಗೆ ಕೊಟ್ಟಂತಾಗುತ್ತದೆ. ಇದಕ್ಕೆ ಇಂಗ್ಲೆಂಡಾಗಲಿ, ಅಮೆರಿಕವಾಗಲಿ ಒಪ್ಪಲಾರದು. ಬ್ರಿಟಿಷರನ್ನು ಹೋಗೆ

ನ್ನುವುದು ಅಸಾಧ್ಯ. ಸೈನ್ಯವನ್ನೂ ತೆಗೆದುಕೊಂಡು ಹೋಗಬೇಕೆನ್ನುವ ಅಭಿಪ್ರಾಯ ನಿಮಗಿಲ್ಲವಲ್ಲವೆ ? " ಎಂದು ಕೇಳಿದೆ.

ಎರಡು ನಿಮಿಷ ಗುಡಿಸಿಲು ಮೌನದಿಂದ ಭಾರವಾಗಿತ್ತು. ಗಾಂಧಿ ನನ್ನ ಮಾತನ್ನು ಕೇಳಿ, ತನ್ನ ಮಾತನ್ನು ಕೇಳುತ್ತಿದ್ದನು. ಕಡೆಗೆ, "ನಿಮ್ಮ ಮಾತು ನಿಜ. ಬ್ರಿಟನ್, ಅಮೆರಿಕ, ಬೇರೆ ದೇಶಗಳು ಇಲ್ಲಿ ಸೈನ್ಯಗಳನ್ನಿಟ್ಟುಕೊಂಡು ಯುದ್ಧವನ್ನು ಮುಂದುವರಿಸಬಹುದು," ಎಂದನು ಕೊಂಚ ಹೊತ್ತಾದಮೇಲೆ ಮಶ್ರುವಾಲ ಈ ಮಾತಿಗೆ ಒಪ್ಪಲಿಲ್ಲವೆಂದು ತಿಳಿಯಿತು. ಆದರೆ ಗಾಂಧಿ ಸಮಾಧಾನ ಮಾಡಿಕೊಳ್ಳಲು ಸಿದ್ಧನಾಗಿ ಪ್ರೆಸಿಡೆಂಟ್ ರೂಸ್‌ವೆಲ್ಟ್‌ಗೆ "ನಿಮ್ಮ ಸೈನ್ಯಗಳನ್ನು ನಿಮ್ಮ ಖರ್ಚಿನಲ್ಲಿ ಬೇಕಾದರೆ ಇಟ್ಟುಕೊಳ್ಳಬಹುದು." ಎಂದು ಬರೆದನು. ನನ್ನೊಡನೆ, "ನನ್ನ ಮನಸ್ಸು ಬದಲಾಯಿಸಬೇಕೆಂದು ನಿಮ್ಮ ಪ್ರೆಸಿಡೆಂಟರಿಗೆ ಹೇಳಿ" ಎಂದನು. ಅಸಹಕಾರ ಚಳುವಳಿಯನ್ನು ನಿಲ್ಲಿಸಿ ವೈಸರಾಯಿಯೊಡನೆ ಮಾತುಕತೆ ನಡೆಸಲು ಆತನು ಸಿದ್ಧನಾಗಿದ್ದನು. ನಾನು ಆಶ್ರಮ ಬಿಡುವ ಮೊದಲು ದೇಸಾಯಿ ನನ್ನೊಡನೆ, "ಗಾಂಧಿಯೊಡನೆ ಮಾತನಾಡಬೇಕೆಂದು ವೈಸರಾಯಿಗೆ ಸೂಚಿಸಿ," ಎಂದು ಹೇಳಿದನು. ಇದನ್ನು ನೆಹ್ರೂಗೆ ಹೇಳುವ. ಹಕ್ಕು ನನಗಿರಲಿಲ್ಲ. ಆದರೆ ದೆಹಲಿಗೆ ಹೋಗುತ್ತಾ ದಾರಿಯಲ್ಲಿ ಬೊಂಬಾಯಿಯಲ್ಲಿ ಆತನ ತಂಗಿ ಶ್ರೀಮತಿ. ಕೃಷ್ಣಾಹತೀಸಿಂಗ್ ಮನೆಯಲ್ಲಿ ಆತನು ಸಿಕ್ಕಲು, "ಗಾಂಧಿ ವೈಸರಾಯನ್ನು ನೋಡಬೇಕೆ ?" ಎಂದು ನಾನು ಕೇಳಿದೆ.

ನೆಹ್ರು, "ಬೇಡ. ಏತಕ್ಕಾಗಿ ?" ಎಂದನು.

ಆತನಿಗೆ ತಗ್ಗುವುದು ಇಷ್ಟವಿರಲಿಲ್ಲ. ಆದರೆ ಗಾಂಧಿಗೆ ತಾನೂ ಲಿನ್‌ಲಿತ್‌ಗೊ ಸೇರಿ ಒಪ್ಪಂದದ ಮಾರ್ಗವನ್ನು ಕಂಡುಹಿಡಿಯಬಹುದೆಂಬ ಆಸೆಯಿತ್ತು. ಧ್ಯೇಯಗಳ ವಿಚಾರವಾಗಿ ಖಂಡಿತವಾದಿಯಾದ ಗಾಂಧಿ, ಕಾಲಸಮಯಕ್ಕನುಸಾರವಾಗಿ ನಡೆಯಲು ಹಿಂಜರಿಯುತ್ತಿರಲಿಲ್ಲ.

ಲಾರ್ಡ್ ಲಿನ್‌ಲಿತ್‌ಗೋ ಗಾಂಧಿಯನ್ನು ನೋಡಲು ನಿರಾಕರಿಸಿದನು.

## ೨೫. ಆಶಾಭಂಗ ಮತ್ತು ರೋಷ

೧೯೪೨ರ ಮೇ, ಜೂನ್, ಜುಲೈಗಳು ಇಂಡಿಯಾದ ವಾತಾವರಣ ಉಸಿರು ಕಟ್ಟಿಸುವಂತಿತ್ತು. ಜಪಾನೀ ಸೈನ್ಯಗಳು ಬರ್ಮಾವನ್ನಾಕ್ರಮಿಸಿದ್ದುವು. ಇಂಗ್ಲೆಂಡು ಇಂಡಿಯಾವನ್ನು ರಕ್ಷಿಸಲು ಶಕ್ತವಾಗಿರಲಿಲ್ಲ. ಇಂಡಿಯಾದ ರಾಜಕೀಯ ವ್ಯಕ್ತಿಗಳಿಗೆ ತಮ್ಮ ದೌರ್ಬಲ್ಯ ಬೇಸರವನ್ನುಂಟು ಮಾಡಿತ್ತು. ದೇಶವನ್ನು ರಕ್ಷಿಸುವ ಯೋಗ್ಯತೆಯೂ ಇರಲಿಲ್ಲ; ಬ್ರಿಟನ್ ತೊಂದರೆಯಲ್ಲಿದ್ದಾಗ ಸ್ವಾತಂತ್ರ್ಯ ಗಳಿಸುವಂತೆಯೂ ಇರಲಿಲ್ಲ.

ಇಂತಹ ಬಿಕ್ಕಟ್ಟಿನ ಸ್ಥಿತಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿ, ಆಗಸ್ಟ್ ೭ರಂದು ಬೊಂಬಾಯಿಯಲ್ಲಿ ಗಾಂಧಿಯ ಅಸಹಕಾರ ಚಳುವಳಿಯನ್ನು ಚರ್ಚಿಸಲು ಸೇರಿತು. ತಿರಸ್ಕಾರದಿಂದ ಬೇಸರಪಡದೆ ಮಹಾತ್ಮ ನ್ಯೂಯಾರ್ಕ್ ಹೆರಾಲ್ಡ್ ಟ್ರೈಬ್ಯೂನ್ ಪತ್ರಿಕೆಯ ಎ. ಟಿ. ಸ್ಟೀಲರೊಡನೆ, "ಯುದ್ಧ ನಡೆಯುತ್ತಿರುವಾಗ ತೊಂದರೆಯಾಗದೆ ಇಂಡಿಯಾ ದೇಶಕ್ಕೆ ಸ್ವಾತಂತ್ರ್ಯ ಕೊಡಲು ಸಾಧ್ಯವಿಲ್ಲವೆಂದು ಯಾರಾದರೂ ಸಾಧಿಸುವುದಾದರೆ ಅವರ ವಾದವನ್ನು ಕೇಳಲು ನಾನು ಆತುರನಾಗಿದ್ದೇನೆ," ಎಂದು ಹೇಳಿದನು.

"ನಿಮಗೆ ನಂಬಿಕೆಯುಂಟಾದರೆ ಅಸಹಕಾರವನ್ನು ನಿಲ್ಲಿಸುತ್ತೀರೋ?" ಎಂದು ಸ್ಟೀಲ್ ಕೇಳಿದರು.

"ಖಂಡಿತವಾಗಿ. ನನ್ನ ಆಕ್ಷೇಪಣೆಯೇನೆಂದರೆ ಎಲ್ಲರೂ ನನ್ನನ್ನು ನಿಂದಿಸುತ್ತಾರೆ; ನನ್ನ ವಿಚಾರವಾಗಿ ಮಾತನಾಡುತ್ತಾರೆ. ಒಬ್ಬರೂ ನನ್ನೊಡನೆ ಮಾತನಾಡುವುದಿಲ್ಲ," ಎಂದು ಗಾಂಧಿ ಉತ್ತರವಿತ್ತನು.

ಆಗಸ್ಟ್ ೮ರ ಮಧ್ಯರಾತ್ರಿ ಗಾಂಧಿ ಪ್ರತಿನಿಧಿಗಳಿಗೆ ಭಾಷಣ ಮಾಡಿದನು. ಅಸಹಕಾರ ಚಳುವಳಿ ನಡೆಯಬೇಕೆಂದು ತೀರ್ಮಾನವಾಗಿತ್ತು. "ಆದರೆ ಹೋರಾಟ ಈ ನಿಮಿಷ ಪ್ರಾರಂಭವಾಗುವುದಿಲ್ಲ. ಹಿಂದೆ ಅನೇಕ ಬಾರಿ ಮಾಡಿದಂತೆ ನೀವು ನನಗೆ ಕೆಲವು ವಿಚಾರಗಳಲ್ಲಿ ಅಧಿಕಾರ ಕೊಟ್ಟಿದ್ದೀರಿ. ತೊಂದರೆ ತಪ್ಪಿಸಲು ಪ್ರಯತ್ನಿಸುತ್ತೇನೆ. ಮೊದಲು ವೈಸರಾಯಿಯನ್ನು ಕಾಣಲು ಹೋಗುತ್ತೇನೆ. ಎರಡು ಮೂರು ವಾರಗಳು ಕಳೆಯಬಹುದು. ನಡುವೆ ನಾವು ಮಾಡಬೇಕಾದ ಕೆಲಸವೇನು? ಚರಕಾ ಇದೆ.

ಆದರೆ ಇನ್ನೊಂದು ಕೆಲಸ ಮಾಡಬೇಕು. ಈ ಕ್ಷಣದಿಂದ ನೀವೆಲ್ಲಾ ಸ್ತ್ರೀ ಪುರುಷರು ಸ್ವಾತಂತ್ರ್ಯ ಪಡೆದವರಂತೆ, ಚಕ್ರಾಧಿಪತ್ಯದ ಅಡಿಯಿಂದ ಬಿಡುಗಡೆಯಾದವರಂತೆ ವರ್ತಿಸಬೇಕು." ಸ್ಥಿತಿಗತಿಗಳು ಮನೋಭಾವನೆಗಳನ್ನು ಮಾರ್ಪಡಿಸುವುವೆಂಬ ವಾಸ್ತವಿಕ ತತ್ವಕ್ಕೆ ಇದು ವಿರೋಧವಾಗಿತ್ತು. ಗಾಂಧಿ, "ಮನುಷ್ಯ ಮನಸ್ಸಿನ ಭಾವಗಳನ್ನು ಮಾರ್ಪಡಿಸಿಕೊಂಡು ಸ್ಥಿತಿಗತಿಗಳನ್ನು ಮಾರ್ಪಡಿಸಿಕೊಳ್ಳಬಹುದು. ಆಲೋಚಿಸಿಕೊಂಡಂತೆ ಆಗುತ್ತೇವೆ", ಎಂದು ಹೇಳಿದನು.

ದೇಶದ ಪರಿಸ್ಥಿತಿಯನ್ನರಿತ ಗಾಂಧಿಗೆ ಕಾರ್ಯರಂಗಕ್ಕಿಳಿಯಬೇಕೆಂದು ತಿಳಿದಿತ್ತು. ಹಿಂಸಾಕೃತ್ಯಗಳು ನಡೆಯಬಹುದೆಂದು ಹೆದರಿ, ಹಾಗಾಗದಿರಲು ವೈಸರಾಯಿಯೊಡನೆ ಪುನಃ ಸಂಧಾನ ನಡೆಸಲು ಪ್ರಯತ್ನಿಸಿದನು. ಅರೆಬೆತ್ತಲೆ ಕ್ರಾಂತಿಕಾರನೊಡನೆ ಸಂಧಾನ ಬೇಡವೆಂದು ವೈಸರಾಯಿಗೆ ಆಜ್ಞೆಯಾಗಿತ್ತೆಂಬುದೂ ಸ್ಪಷ್ಟವಾಗಿತ್ತು. ೯ನೆಯ ತಾರೀಖು ಬೆಳಗಾಗುವ ಮೊದಲೇ ಗಾಂಧಿ, ನೆಹ್ರೂ, ಇನ್ನೂ ಅನೇಕ ಜನ ಕಾಂಗ್ರೆಸ್ ಹಿರಿಯ ನಾಯಕರು ಸೆರೆಮನೆಗೊಯ್ಯಲ್ಪಟ್ಟರು. ಪೂನಾ ಬಳಿ ಯರವಾಡದಲ್ಲಿ, ಆಗಾಖಾನ್ ಅರಮನೆಯಲ್ಲಿ ಗಾಂಧಿ, ಶ್ರೀಮತಿ ನಾಯ್ಡು, ಮಹದೇವ ದೇಸಾಯಿ, ಮಿಸ್ ಸ್ಲೇಡ್ ಮತ್ತು ಪ್ಯಾರಿಲಾಲ್ ಬಂಧಿಸಲ್ಪಟ್ಟರು. ಮಾರನೆಯ ದಿನ ಕಸ್ತೂರಿಬಾಯಿ ಮತ್ತು ಸುಶೀಲಾ ನಯ್ಯರ್ ಅಲ್ಲಿಗೆ ಬಂದರು.

ಸೆರೆಮನೆಯ ಬಾಗಿಲುಗಳು ಮುಚ್ಚುತ್ತಲೇ ಕ್ರೋಧದ ಪ್ರವಾಹ ಹರಿಯಲಾರಂಭಿಸಿತು. ಪೋಲೀಸು ಠಾಣೆಗಳು, ಸರ್ಕಾರಿ ಕಟ್ಟಡಗಳು ಬೆಂಕಿಗಾಹುತಿಯಾದುವು; ರೈಲು ರಸ್ತೆಗಳು, ಟೆಲಿಗ್ರಾಫ್ ತಂತಿಗಳು ನಾಶಮಾಡಲ್ಪಟ್ಟವು. ಕಾಂಗ್ರೆಸ್ಸಿನ ಭಾಗವಾಗಿದ್ದ ಸಮತಾವಾದಿಗಳ ನಾಯಕರು ಅಂತರಂಗ ಚಳುವಳಿಯನ್ನಾರಂಭಿಸಿದರು. ಕೆಲವು ಕಡೆ ಚಕ್ರವರ್ತಿಯ ಅಧಿಕಾರವೇ ಅಳಿದು, ಸ್ವತಂತ್ರ ಭಾರತ ಸರ್ಕಾರಗಳು ಸ್ಥಾಪಿಸಲ್ಪಟ್ಟುವು.

ಈ ಎಲ್ಲಾ ಹಿಂಸಾ ಕೃತ್ಯಗಳಿಗೂ ಗಾಂಧಿಯೇ ಕಾರಣನೆಂದು ಬ್ರಿಟಿಷರು ಸಾರಿದರು. ಸೆರೆಮನೆಯಿಂದ ವೈಸರಾಯಿಗೆ ಗಾಂಧಿ, ತಪ್ಪು ತನ್ನ

ದಲ್ಲವೆಂದೂ, ಸರ್ಕಾರ ಪರಿಸ್ಥಿತಿಯ ನಿಜಾಂಶ ತಿಳಿಸುತ್ತಿಲ್ಲವೆಂದೂ ಕಾಗದ ಬರೆದನು.

ವೈಸರಾಯಿ ಒಪ್ಪಲಿಲ್ಲ.

ತನ್ನಂತಹ ಅಹಿಂಸಾವಾದಿಯನ್ನು, ರಕ್ತಪೂರಿತ ಹಿಂಸಾಕೃತ್ಯಗಳಿಗೆ ಕಾರಣನೆಂದು ಹೇಳಿದುದರಿಂದ ಗಾಂಧಿಯ ಮನಸ್ಸಿಗೆ ತುಂಬಾ ನೋವುಂಟಾಯಿತು. ೧೯೪೩ರ ವರ್ಷಾರಂಭದ ದಿನ ಪುನಃ ವೈಸರಾಯಿಗೆ ಬರೆದನು.

" ಇದು ಅಂತರಂಗ ಪತ್ರ. ನಿಮ್ಮ ಮೇಲೆ ನನ್ನ ಹೃದಯದಲ್ಲಿರುವ ಅಸಮಾಧಾನವನ್ನು ಬಿಚ್ಚಿತೋರಿಸದೆ ವರ್ಷವನ್ನು ಮುಗಿಯಗೊಡಲು ನನಗೆ ಮನಸ್ಸಿಲ್ಲ. ನಾವು ಸ್ನೇಹಿತರೆಂಬ ಅಭಿಪ್ರಾಯ ನನಗಿತ್ತು. ಇಂತಹ ಕಾರ್ಯಕ್ರಮ ಕೈಗೊಳ್ಳುವ ಮೊದಲು ನೀವು ನನಗೇಕೆ ಹೇಳಿಕಳುಹಿಸಲಿಲ್ಲ? ಬೇರೆಯವರು ನನ್ನನ್ನು ಕಾಣುವ ದೃಷ್ಟಿಯನ್ನರಿಯುವ ಶಕ್ತಿ ನನಗಿದೆ. ಸರ್ಕಾರ ನಿರಪರಾಧಿಗಳಿಗೆ ತೊಂದರೆ ಕೊಟ್ಟಿತು. ಬೆಂಕಿ, ಸಾವುಗಳನ್ನು ಎಬ್ಬಿಸಿದ ಹೊಣೆ ಸರ್ಕಾರದ್ದು. ಆದರೆ ಅನ್ಯಾಯವಾಗಿ ನನ್ನ ಮೇಲೆ ಆಪಾದನೆ ಹೊರಿಸಿರುವುದರಿಂದ ನಾನು ಉಪವಾಸ ಮಾಡಿ ದೇಹವನ್ನು ದಂಡಿಸುತ್ತೇನೆ."

ಉಪವಾಸ ಮಾಡುವುದು ಸರ್ಕಾರವನ್ನು ಹೆದರಿಸುವ ಪ್ರಯತ್ನವೆಂದು ವೈಸರಾಯಿಯಿಂದ ಪ್ರತ್ಯುತ್ತರ ಬಂತು. ಆದರೂ ಉಪವಾಸಕ್ಕೆರಡು ದಿನ ಮುಂಚೆ ಗಾಂಧಿಯನ್ನೂ, ಆತನ ಸ್ನೇಹಿತರನ್ನೂ ಬಿಡುಗಡೆ ಮಾಡುವುದಾಗಿ ಸರ್ಕಾರ ಹೇಳಿಕೆ ಕೊಟ್ಟಿತು. ಗಾಂಧಿ ನಿರಾಕರಿಸಿದನು. ಬಿಡುಗಡೆಗಾಗಿ ಆತನು ಉಪವಾಸ ಮಾಡುತ್ತಿರಲಿಲ್ಲ. " ನಿಮ್ಮಿಂದ ದೊರಕದ ನ್ಯಾಯಬೇಕೆಂದು ನ್ಯಾಯಮೂರ್ತಿಯಾದ ಭಗವಂತನನ್ನು ಬೇಡುವುದೇ ಈ ಉಪವಾಸದ ಉದ್ದೇಶ." ನಿರಾಪರಾಧಿಯಾದ ಆತನು ಆಪಾದನೆಯಿಂದ ಶುದ್ಧನಾಗಬೇಕಾಗಿತ್ತು.

ಆ ಮೂರು ವಾರದ ಉಪವಾಸದಲ್ಲಿ ಆತನು ಸಾವಿನ ಬಾಗಿಲಿನಲ್ಲಿದ್ದನು. ಹದಿಮೂರನೆಯ ದಿನ ಕಸ್ತೂರಿಬಾಯಿ ತುಳಸಿಯ ಮುಂದೆ ಪ್ರಣಾಮ ಮಾಡಿ ಪ್ರಾರ್ಥಿಸಿದಳು. ಆತನು ಬದುಕುವ ಆಸೆಯನ್ನು ಆಕೆ

ಬಿಟ್ಟಿದ್ದಳು. ನಾಡಿ ಬಲಹೀನವಾಗಿ ಪ್ರೈತಣ್ಣಗಾಗಿತ್ತು. ಆದರೆ ಆತನು ಉಳಿದನು.

ಗಾಂಧಿಗೆ ನೆಮ್ಮದಿಯಿರಲಿಲ್ಲ. "ನೋವಿಗೆ ಅಂಜನ ಹುಡುಕುತ್ತಿದ್ದೇನೆ". ಇಂಡಿಯಾದಲ್ಲಿ, ಇಂಗ್ಲೆಂಡಿನಲ್ಲಿ ಅಧಿಕಾರಿಗಳು ಅಲ್ಲದವರು ಎಲ್ಲರಿಗೂ ತನ್ನಿಂದ ಹಿಂಸಾ ಕೃತ್ಯಗಳು ನಡೆಯುಲಿಲ್ಲವೆಂದು ತೋರಿಸುವ ಆಧಾರಗಳನ್ನು ತಿಳಿಸಿದನು. ತಾನು ಸ್ವತಂತ್ರನಾಗಿದ್ದರೆ ಅವುಗಳನ್ನು ನಿಲ್ಲಿಸಬಹುದಾಗಿತ್ತು; ಅಂತಹ ಕೃತ್ಯಗಳಲ್ಲಿ ಭಾಗಿಯಾದವರಿಗೆ ವಿವೇಕವನ್ನುಂಟುಮಾಡಲು ಉಪವಾಸ ಮಾಡಬಹುದಾಗಿತ್ತು. ಆತನ ಪತ್ರಿಕೆಗಳನ್ನು ಆಗ ಯಾರೂ ಪ್ರಕಟಿಸಲಿಲ್ಲ. ಆತನು ಪ್ರಕಟಿಸುವಂತಿರಲಿಲ್ಲ. ಸರ್ಕಾರದ ಆಪಾದನೆಗಳನ್ನು ಬಹಿರಂಗವಾಗಿ ಪ್ರತಿಭಟಿಸುವ, ಸ್ನೇಹಿತರ ಹಿಂಸಾಕೃತ್ಯಗಳನ್ನು ತಡೆಗಟ್ಟುವ ಶಕ್ತಿ ಆತನಿಗಿರಲಿಲ್ಲ. ಆತನ ಹೃದಯ ಅನ್ಯಾಯದ ಬಿರುಗಾಳಿಯಿಂದ ಕಲಕಿಹೋಗಿತ್ತು. ಬಹಳ ಹಿಂಸೆಯನ್ನನುಭವಿಸಿದನು. ಯೋಗಿಯಾದವನು ಸಮಾಧಾನವಾಗಿರಬಹುದಾಗಿತ್ತು. ಮಹಾತ್ಮನಿಗೆ ಅಷ್ಟು ನಿರ್ಲಿಪ್ತತೆಯಿರಲಿಲ್ಲ.

ವ್ಯಥೆ ಹೆಚ್ಚಿಸಲು, ಗಾಂಧಿಯ ಹಿತೈಷಿ, ಸ್ನೇಹಿತ, ಮಗನಿಗಿಂತ ಹೆಚ್ಚಾಗಿದ್ದ ಮಹದೇವ ದೇಸಾಯಿ ಸೆರೆಮನೆಯಲ್ಲಿ ಹೃದಯ ಬೇನೆಯಿಂದ ಮೃತನಾದನು. ೧೯೪೪ರ ಫೆಬ್ರವರಿ ೨೨ರಲ್ಲಿ ಕಸ್ತೂರಿಬಾಯಿ ಪತಿಯ ತೊಡೆಯ ಮೇಲೆ ತಲೆಯಿಟ್ಟು ಮೃತಳಾದಳು. ಮಹಾತ್ಮ ತುಂಬಾ ದುಃಖಪಟ್ಟನು. ಈ ವಿಚಾರದಲ್ಲೂ ಆತನು ನಿರ್ಲಿಪ್ತನಾಗಿರಲಿಲ್ಲ. ಸತ್ತವರಿಗಾಗಿ ಮರುಗಿದನು. ಅಲ್ಲಿಂದ ಸಾಯುವವರೆಗೂ ಪ್ರತಿ ತಿಂಗಳು ೨೨ ನೆಯ ತಾರೀಖು ಕಸ್ತೂರಿಬಾಯಿಗಾಗಿ ಪ್ರಾರ್ಥನೆ ಸಲ್ಲಿಸಿ ಗೀತೆಯನ್ನು ಹೇಳಿಸುತ್ತಿದ್ದನು.

ಹೆಂಡತಿ ಹೋದ ಆರು ವಾರಗಳ ಅನಂತರ ಗಾಂಧಿಗೆ ಮಲೇರಿಯಾ ಬಂದು ಜ್ಞಾನ ತಪ್ಪಿತು. ಆತನ ಬಿಡುಗಡೆಗಾಗಿ ಇಂಡಿಯಾ ದೇಶದಲ್ಲೆಲ್ಲಾ ಕೋಲಾಹಲವಾಯಿತು. ಆತನು ಸಾಯುವನೆಂದು ಪ್ರತಿಕ್ಷಣ ನಿರೀಕ್ಷಿಸುತ್ತಿದ್ದರು. ಸರ್ಕಾರ ಸೆರೆಮನೆಯ ಸುತ್ತಲೂ ಬಲವಾದ ಕಾವಲನ್ನಿಟ್ಟಿತು. ೧೯೪೪ರ ಮೇ ೬ನೇ ತಾರೀಕು ಬೆಳಿಗ್ಗೆ ೮ ಘಂಟೆಗೆ ಗಾಂಧಿಯನ್ನೂ,

ಆತನ ಅನುಯಾಯಿಗಳನ್ನು ಬಿಡುಗಡೆ ಮಾಡಿದರು. ಇದೇ ಕಡೆಯಬಾರಿ ಆತನು ಸೆರೆಮನೆಗೆ ಹೋದದ್ದು. ಆತನು ೨೦೮೯ ದಿನ, ಹೆಚ್ಚು ಕಡಿಮೆ ೬ ವರ್ಷಗಳನ್ನು ಇಂಡಿಯಾದ ಸೆರೆಮನೆಗಳಲ್ಲೂ, ೨೪೯ ದಿನಗಳನ್ನು ಆಫ್ರಿಕಾ ಸೆರೆಮನೆಗಳಲ್ಲೂ ಕಳೆದಿದ್ದನು.

ಬೊಂಬಾಯಿಯ ಸಮುದ್ರ ತೀರದಲ್ಲಿ ಒಬ್ಬ ಸ್ನೇಹಿತನ ಮನೆಯಲ್ಲಿ ಆತನು ವಿಶ್ರಮಿಸಿಕೊಂಡನು. ಮನೆಯಾಕೆ ಸಿನಿಮಾಗೆ ಹೋಗಬೇಕೆಂದು ಸೂಚಿಸಿದಳು. ಆತನು ಎಂದು ಹೋಗಿರಲಿಲ್ಲ. ಇಚ್ಛೆಯಿಲ್ಲದೆ ಒಪ್ಪಿಕೊಳ್ಳಲು "ಮಾಸ್ಕೋವಿಗೆ ನಿಯೋಗ", ಎಂಬ ಚಿತ್ರವನ್ನು ಮನೆಯಲ್ಲೇ ತೋರಿಸಿದರು.

"ನನಗೆ ಅದು ಇಷ್ಟವಾಗಲಿಲ್ಲ". ಅರ್ಧಾರ್ಧ ಬಟ್ಟೆ ಧರಿಸಿದ ಹೆಂಗಸರ ಕುಣಿತ ಆತನಿಗೆ ರುಚಿಸಲಿಲ್ಲ.

ಅನೇಕ ವಾರಗಳು ವಿಶ್ರಾಂತಿ ತೆಗೆದುಕೊಂಡನು.

**೨೬. ಜಿನ್ನಾ ಮತ್ತು ಗಾಂಧಿ.**

೧೯೪೪ರ ಜೂನ್‌ನಲ್ಲಿ ಪುನಃ ರಾಜಕೀಯ ರಂಗವನ್ನು ಪ್ರವೇಶಿಸಿ, ಗಾಂಧಿ ಹೊಸ ವೈಸರಾಯಿ, ಸೈನ್ಯಾಧಿಕಾರಿ, ಮತ್ತು ಕವಿಯಾದ ಲಾರ್ಡ್ ವೇವೆಲ್ಲರನ್ನು ಭೇಟಿಮಾಡಲು ಪ್ರಯತ್ನಿಸಿದನು. ವೇವೆಲ್ ನೋಡಲು ಒಪ್ಪಲಿಲ್ಲ. ತನಗಿಂತ ಒಂದೊಂದು ವೇಳೆ ಹೆಚ್ಚು ಸಂಧಾನ ಚತುರನಾದ ರಾಜಗೋಪಾಲಚಾರ್ಯರಿಂದ ಉತ್ತೇಜಿತನಾಗಿ, ಮಹಾತ್ಮ ಮುಸ್ಲಿಂ ಲೀಗ್ ಅಧ್ಯಕ್ಷನಾದ ಮಹಮ್ಮದಾಲಿ ಜಿನ್ನಾಗೆ ಮಾತುಕತೆ ನಡೆಸಲು ಕೋರಿ ಕಾಗದ ಬರೆದನು. ಕಾಂಗ್ರೆಸ್–ಲೀಗ್ ಒಪ್ಪಂದದಿಂದ, ಇಂಡಿಯಾಗೆ ಬ್ರಿಟಿಷರು ಅಧಿಕಾರ ಬಿಟ್ಟುಕೊಡಬಹುದೆಂದು ಗಾಂಧಿಗೆನ್ನಿಸಿತು. "ಸೋದರ ಜಿನ್ನಾ", ಎಂದು ಪ್ರಾರಂಭಿಸಿ ಕಡೆಯಲ್ಲಿ, "ನಿನ್ನ ಸೋದರ ಗಾಂಧಿ", ಎಂದು ಬರೆದನು. ಜಿನ್ನಾ ಉತ್ತರ: "ಶ್ರೀ ಗಾಂಧಿಯವರಿಗೆ," ಎಂದು ಪ್ರಾರಂಭವಾಗಿ ಕಡೆಯಲ್ಲಿ 'ಎಂ. ಎ. ಜಿನ್ನಾ' ಎಂದು ಸಹಿಯಿತ್ತು. ಅನಂತರ ಬರೆದ ಪತ್ರಗಳಲ್ಲಿ "ಪ್ರಿಯ ಕಾಯ್ದೆ ಅಜಾಂ" (ಮಹಾ ನಾಯಕ) ಎಂಬ ಹೊಸ ಬಿರುದನ್ನು ಉಪಯೋಗಿಸುತ್ತಿದ್ದನು. ಜಿನ್ನಾ ಮಾತ್ರ "ಶ್ರೀ ಗಾಂಧಿ", ಎಂದೇ ಬರೆಯುತ್ತಿದ್ದನು. ೧೭ ದಿನ ನಡೆದ ಅವರ

ಮಾತುಕತೆ ನಿಷ್ಪ್ರಯೋಜಕವಾಯಿತು.

೧೯೪೫ರ ಮೇನಲ್ಲಿ ಜರ್ಮನಿ ಶರಣಾಗತವಾಯಿತು. ಜುಲೈ ೨೬ ರಲ್ಲಿ ಇಂಗ್ಲೆಂಡಿನ ಕಾರ್ಮಿಕ ಸಂಗಡ ಸಂಪ್ರದಾಯ ಸಂಗಡದವರನ್ನು ಸೋಲಿಸಿ ಚರ್ಚಿಲ್ಲಿಗೆ ಬದಲಾಗಿ ಕ್ಲೆಮೆಂಟ್. ಆರ್. ಆಟ್ಲಿ ಪ್ರಧಾನ ಮಂತ್ರಿಯಾದನು. ಆಗಸ್ಟ್ ೧೪ ರಲ್ಲಿ ಜಪಾನ್ ಶರಣಾಗತವಾಯಿತು. ತಕ್ಷಣ ಹೊಸ ಕಾರ್ಮಿಕ ಸರ್ಕಾರ ಇಂಡಿಯಾಕ್ಕೆ ಸ್ವಾತಂತ್ರ್ಯ ಕೊಡಬೇಕೆಂದು ಹವಣಿಸಿ, ವೇವೆಲ್ಲರನ್ನು ವೈಟ್‌ಹಾಲಿಗೆ ಕರೆಯಿತು. ಆತನು ದೆಹಲಿಗೆ ಹಿಂದಿರುಗಿ, ಪ್ರಾಂತ್ಯ ಸರ್ಕಾರವನ್ನು ಇಂಡಿಯನ್ನರಿಗೆ ವಹಿಸುವುದಾಗಿಯೂ,ಆಡಳಿತ ಸೂತ್ರ ರಚಿಸಲು ಸಭೆಯನ್ನೇರ್ಪಡಿಸುವುದಾಗಿಯೂ ಹೇಳಿದನು. ಬ್ರಿಟಿಷ್ ಮೇಲ್ವಿಚಾರಣೆಗೊಳಪಟ್ಟ ಕಾಂಗ್ರೆಸ್–ಮುಸ್ಲಿಂ ಪಕ್ಷಗಳ ಮಂತ್ರಿ ಸಭೆಯನ್ನು ರಾಜಧಾನಿಯಲ್ಲಿ ರಚಿಸುವುದಾಗಿ ತಿಳಿಸಿದನು. ಆದರೆ ಜಿನ್ನಾಗೆ ಇಂಡಿಯಾದೇಶವನ್ನು ಭಾಗಮಾಡುವುದೇ ಬೇಕಾಗಿತ್ತು. ೧೯೪೫ ರ ಡಿಸೆಂಬರಿನಲ್ಲಿ ಬೊಂಬಾಯಿಯಲ್ಲಿ ಆತನು, "ಗಾಂಧಿ ಪಾಕಿಸ್ತಾನಕ್ಕೆ ಒಪ್ಪಿದರೆ ಹತ್ತು ನಿಮಿಷದಲ್ಲಿ ಇಂಡಿಯಾ ಸಮಸ್ಯೆಯನ್ನು ಬಗೆಹರಿಸಬಹುದು. ಸಿಂಧ್, ಬೆಲೂಚಿಸ್ಥಾನ್, ಪಂಜಾಬ್, ವಾಯುವ್ಯ ಪ್ರಾಂತ್ಯ, ಬಂಗಾಳ, ಅಸ್ಸಾಂಗಳನ್ನೊಳಗೊಂಡ ಇಂಡಿಯಾದ ನಾಲ್ಕನೆ ಒಂದು ಭಾಗ ಪಾಕಿಸ್ತಾನವಾಗಬೇಕು", ಎಂದನು.

ಗಾಂಧಿಗೆ ಒಪ್ಪಲಾಗಲಿಲ್ಲ. ಇಂಡಿಯಾವನ್ನು ಕತ್ತರಿಸುವುದು ಆತನಿಗೆ ಪಾಪಕರವಾಗಿ ತೋರಿತು. ಹೇಗಾದರೂ ಜಿನ್ನಾ ಹೇಳಿದ ಭಾಗಿಸುವಿಕೆ ಅಸಾಧ್ಯವಾಗಿಯೂ, ಅನ್ಯಾಯವಾಗಿಯೂ ಇತ್ತು. ಹಿಂದುಗಳು ಮುಸ್ಲಿಮರನ್ನಾಳಕೂಡದೆಂದು ಆತನಿಗೆ ಪಾಕಿಸ್ತಾನ ಬೇಕಾಗಿತ್ತು. ಆದರೆ ಅಸ್ಸಾಮಿನಲ್ಲಿ ೩,೪೪೨,೪೭೯ ಮುಸ್ಲಿಮರೂ, ೬,೭೬೨,೨೫೪ ಮುಸ್ಲಿಮೇತರರೂ ಇದ್ದರು. ವಿಸ್ತಾರವಾದ ಪಂಜಾಬು ಪ್ರಾಂತ್ಯದಲ್ಲಿ ೧೬,೨೧೭,೨೪೨ ಮುಸ್ಲಿಮರೂ, ೧೨,೨೦೧,೫೭೭ ಮುಸ್ಲಿಮೇತರರೂ ಇದ್ದರು. ಬಂಗಾಳದಲ್ಲಿದ್ದ ೬ ಲಕ್ಷ ಜನರಲ್ಲಿ ಶೇಕಡಾ ೫೨ ಜನ ಮಾತ್ರ, ಅರ್ಧಕ್ಕಿಂತ ಸ್ವಲ್ಪ ಹೆಚ್ಚು ಮುಸ್ಲಿಮರಿದ್ದರು. ಈ ಮೂರು ಪ್ರಾಂತ್ಯಗಳಲ್ಲೇ ೫೦ ಲಕ್ಷ ಮುಸ್ಲಿಮರು, ೪೨ ಲಕ್ಷ ಹಿಂದು, ಸಿಕ್ಕರ ಮೇಲೆ ಆಳುವಂತಾಗು

ತ್ತಿತ್ತು. ಹುಟ್ಟುತ್ತಲೇ ಪಾಕೀಸ್ತಾನದ ಕುತ್ತಿಗೆಗೆ ಭಾರವಾದ ಅಲ್ಪ ಸಂಖ್ಯಾತ ಸಮಸ್ಯೆ ಜೋಲುತ್ತಿತ್ತು. ಅದೂ ಅಲ್ಲದೆ ಜಿನ್ನರ ಪಾಕಿಸ್ತಾನದ ೨೦ ಲಕ್ಷ ಮುಸ್ಲಿಮರು, ಇಂಡಿಯಾದ ಮುಸ್ಲಿಮರ ⅓ ಭಾಗ ಹಿಂದೂ ರಾಜ್ಯ ದಲ್ಲಿರುವಂತಾಗುತ್ತಿತ್ತು. ಆದರೆ ಜಿನ್ನಾಗೆ ಇದೊಂದೂ ಬೇಕಾಗಿರಲಿಲ್ಲ. ತನ್ನ ಹಿತಕ್ಕಲ್ಲದಿದ್ದರೂ, ಕುರುಡು ಹಠ ಅನೇಕ ಬಾರಿ ಚರಿತ್ರೆಯ ಮೂಲ ವಾಗುತ್ತದೆ.

ಮಹಮದ್ ಆಲಿ ಜಿನ್ನಾ ಅಸಾಧಾರಣ ವ್ಯಕ್ತಿ. ಆರು ಅಡಿ ಎತ್ತರ ವಾಗಿ, ೧೨೦ ಪೌಂಡ್ ತೂಗುತ್ತಾ, ತೆಳ್ಳಗಿದ್ದನು. ಒತ್ತಾದ, ನರೆಯು ತ್ತಿದ್ದ ಕೂದಲನ್ನು ಹಿಂದಕ್ಕೆ ಬಾಚುತ್ತಿದ್ದನು. ಮುಖ ತುಂಬಿಕೊಂಡಿರದೆ, ಮೂಗು ಉದ್ದವಾಗಿ ಮೊನಚಾಗಿತ್ತು. ಕೆನ್ನೆಯ ಎಲುಬುಗಳು ಎದ್ದು ಕಾಣುತ್ತಿದ್ದುದರಿಂದ ಕೆನ್ನೆಗಳು ಗುಳಿ ಬಿದ್ದಿದ್ದುವು. ಮಾತನಾಡದಿದ್ದಾಗ, ಗದ್ದವನ್ನು ಹಿಂದೆಕ್ಕೆಳೆದುಕೊಂಡು, ತುಟಿಯನ್ನು ಬಿಗಿದುಕೊಂಡು, ಹುಬ್ಬು ಗಂಟುಹಾಕಿಕೊಂಡು ಕಠಿಣವಾಗಿ ತೋರುತ್ತಿದ್ದನು. ಆತನು ನಗುತ್ತಲೇ ಇರಲಿಲ್ಲ. ಸಾಧಾರಣವಾಗಿ ಪಾಶ್ಚಾತ್ಯರ ಉಡುಪು ಧರಿಸುತ್ತಿದ್ದರೂ, ಕೆಲವು ಬಾರಿ ಮುಸ್ಲಿಂ ಉಡುಪನ್ನೂ ಧರಿಸುತ್ತಿದ್ದನು; ಮೊಣಕಾಲಿನ ವರೆಗೆ ಬನಿಯನ್ನು, ಬಿಗಿಯಾದ ಷರಾಯಿ, ಕರಿಯ ಬೂಟ್ಸು, ಕರೀ ದಾರಕ್ಕೆ ಕಟ್ಟಿದ ಒಂದು ಗಾಜಿನ ಕನ್ನಡಕ. ೧೯೪೬ರ ಮೇ ೫ರ ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಯಲ್ಲಿ ಜಾರ್ಜ್ ಇ. ಜೋನ್ಸ್, "ಆತನು ಬ್ರಿಟಿಷ್ ಸಾಮ್ರಾಜ್ಯದಲ್ಲೇ ಸೊಗಸಿನ ವಸ್ತ್ರಗಳನ್ನು ಧರಿಸುವ ವ್ಯಕ್ತಿ", ಎಂದು ಬರೆದನು. ಅನೇಕ ಬಾರಿ ಜಿನ್ನಾರೊಡನೆ ಮಾತುಕತೆ ನಡೆಸಿದ ಜೋನ್ಸ್ "ಇಂಡಿಯಾದಲ್ಲಿ ಕೋಲಾಹಲ", ಎಂಬ ತನ್ನ ಪುಸ್ತಕದಲ್ಲಿ, "ಜಿನ್ನಾ ಮೆಕೀಯುವಿಲ್ಲಿಯಂತಹ ರಾಜಕೀಯ ವ್ಯಕ್ತಿ. ಆತನಲ್ಲಿರುವ ನ್ಯೂನತೆ ಗಳೆಂದರೆ ಅಹಂಭಾವ, ಸಂಕುಚಿತ ಮನೋಭಾವ....ಆತನಿಗೆ ಯಾರಲ್ಲೂ ನಂಬಿಕೆಯಿಲ್ಲ. ತನಗೆ ಅನೇಕ ಬಾರಿ ಅನ್ಯಾಯವಾಗಿದೆಯೆಂದು ಆತನ ಅಭಿಪ್ರಾಯ. ಯಾರೊಡನೆಯೂ ಸೇರದೆ ಜಿನ್ನಾ ಕೆಲವು ಬಾರಿ ಒರಟ ನಾಗಿಯೂ ತೋರುತ್ತಾನೆ", ಎಂದು ಬರೆದಿದ್ದಾನೆ.

ಜಿನ್ನಾ ನಿಷ್ಠನಾದ ಮುಸ್ಲಿಮನಾಗಿರಲಿಲ್ಲ. ಮದ್ಯಪಾನ, ಹಂದಿಯ

ಮಾಂಸ ತಿನ್ನುವುದು, ಮಸೀದಿಗೆ ಹೋಗದಿರುವುದು—ಹೀಗೆ ಮುಸ್ಲಿಂ ಮತದ ಎಷ್ಟೋ ಕಟ್ಟಲೆಗಳನ್ನು ಮೀರುತ್ತಿದ್ದನು. ಆತನಿಗೆ ಸ್ವಲ್ಪ ಉರ್ದು ಬರುತ್ತಿತ್ತು. ಅರಾಬಿಕ್ ಬರುತ್ತಲೇ ಇರಲಿಲ್ಲ. ೪೦ನೆಯ ವರ್ಷದಲ್ಲಿ ತನ್ನ ಮತದವರನ್ನು ಬಿಟ್ಟು ಹದಿನೆಂಟು ವರ್ಷದ ಒಬ್ಬ ಪಾರ್ಸಿ ಹುಡುಗಿಯನ್ನು ಮದುವೆಯಾದನು. ಆದರೂ ಮತದಲ್ಲಿ ವಿಶ್ವಾಸವಿಲ್ಲದ ಈ ಜಿನ್ನಾಗೆ ಮತದ ಆಧಾರದ ಮೇಲೆ ಎರಡು ರಾಷ್ಟ್ರಗಳು ಬೇಕಾಗಿತ್ತು. ಮತದಲ್ಲಿ ವಿಶ್ವಾಸವಿದ್ದ ಗಾಂಧಿಗೆ ಮತ ಸಂಬಂಧವಿಲ್ಲದ ಏಕರಾಷ್ಟ್ರ ಬೇಕಾಗಿತ್ತು.

ಧನಿಕ ಚರ್ಮ ವ್ಯಾಪಾರಿಯ ಮಗನಾದ ಜಿನ್ನಾ, ಖೋಜಾ ಮುಸ್ಲಿಂ ಪಂಗಡಕ್ಕೆ ಸೇರಿದವನು. ಖೋಜಾಗಳು ಹೊಸದಾಗಿ ಮುಸ್ಲಿಂ ಮತಕ್ಕೆ ಸೇರಿದರು. ಅನೇಕ ಖೋಜಾಗಳಿಗೆ ಹಿಂದೂ ಹೆಸರುಗಳಿರುತ್ತವೆ; ಹಿಂದುಗಳಂತೆ ಅವಿಭಕ್ತ ಕುಟುಂಬಗಳಲ್ಲಿರುತ್ತಾರೆ; ಜಿನ್ನಾ ಎನ್ನುವುದು ಹಿಂದೂ ಹೆಸರು. ೧೮, ೧೯ನೆಯ ಶತಮಾನಗಳಲ್ಲಿ ಖೋಜಾಗಳು ಹಿಂದೂ ಮತಕ್ಕೆ ತಿರುಗಿ ಸೇರಲು ಪ್ರಯತ್ನಿಸಿ ವಿಫಲರಾದರು. ಇದೇ ಜಿನ್ನಾರ ಹಿಂದೂ ದ್ವೇಷಕ್ಕೆ ಕಾರಣವಾಗಿರಬಹುದು.

ಅದು ವೈಯಕ್ತಿಕವಾದುದಾಗಿಯೂ ಇತ್ತು. ೧೯೪೭ರಲ್ಲಿ ಆತನ ಸಂಪದ್ಯುಕ್ತವಾದ ಬಂಗಲೆಗೆ ನಾನು ಹೋದಾಗ ಮೊದಲನೆಯ ಭೇಟಿಯಲ್ಲಿ ಆತನು, "ನಾನು ೩೫ ವರ್ಷಗಳು ಈ ಚಳುವಳಿಯಲ್ಲಿ ಭಾಗವಹಿಸಿದ್ದೇನೆ. ನೆಹ್ರೂ ಹೋಂ ರೂಲು ಸೊಸೈಟಿಯಲ್ಲಿ ನನ್ನ ಕೈಕೆಳಗೆ ಕೆಲಸಮಾಡಿದ್ದಾನೆ. ಗಾಂಧಿ ಕೆಲಸ ಮಾಡಿದ್ದಾನೆ. ನಾನು ಕಾಂಗ್ರೆಸ್ ಸಂಸ್ಥೆಯಲ್ಲಿ ಕೆಲಸ ಮಾಡಿದ್ದೇನೆ. ನನ್ನ ಗುರಿ ಹಿಂದೂ ಮುಸ್ಲಿಂ ಐಕ್ಯತೆಯಾಗಿತ್ತು. ಗಾಂಧಿ ಬೆಳಕಿಗೆ ಬರುವವರೆಗೂ ೧೯೨೦ರ ವರೆಗೂ ಹಾಗೆಯೇ ಇತ್ತು. ಆಗ ಒಡಕುಂಟಾಯಿತು. ಐಕ್ಯತೆಯಿಂದ ಪ್ರಯೋಜನವಿಲ್ಲವೆಂದೂ, ಗಾಂಧಿಗೆ ಅದು ಬೇಕಾಗಿಲ್ಲವೆಂದೂ ನಾನು ಅರಿತುಕೊಂಡೆ. ನನಗೆ ತುಂಬಾ ನಿರಾಶೆಯುಂಟಾಯಿತು. ಇಂಗ್ಲೆಂಡಿನಲ್ಲೇ ಇರಬೇಕೆಂದು ನಿರ್ಧರಿಸಿದೆ. ನನ್ನ ಆಸ್ತಿ ಮಾರಲು ಕೂಡ ಇಂಡಿಯಾಕ್ಕೆ ಹೋಗದೆ. ಬೇರೊಬ್ಬರ ಕೈಯಿಂದ ಆ ಕೆಲಸ ಮಾಡಿಸಿದೆ. ೧೯೩೫ ರ ವರೆಗೆ ಇಂಗ್ಲೆಂಡಿನಲ್ಲೇ ಇದ್ದೆ. ನ್ಯಾಯಾಭ್ಯಾಸಮಾಡಿ ನಾನು ಎಣಿಸಿದ್ದುದಕ್ಕಿಂತ ಹೆಚ್ಚು ವಿಜಯಗಳಿಸಿದೆ", ಎಂದು ಹೇಳಿದನು.

೧೯೪೯ ರ ಸೆಪ್ಟೆಂಬರ್ ೧೭ ರ ಲಂಡನ್ನಿನ ಎಕಾನಮಿಸ್ಟ್ ಪತ್ರಿಕೆಯಲ್ಲಿ ತಿಳಿದ ಮನುಷ್ಯನೊಬ್ಬ ಜಿನ್ನಾ ಲಂಡನ್ನಿನಲ್ಲಿ ವಕೀಲನಾಗಿದ್ದಾಗ ನೆಹ್ರೂ, "ಜಿನ್ನಾ ಕೆಲಸ ಮುಗಿಯಿತು," ಎಂದು ಒಂದು ಭೋಜನಕೂಟದಲ್ಲಿ ಅಜಾಗರೂಕತೆಯಿಂದ ಹೇಳಿದುದಾಗಿ ವರದಿಮಾಡಿದನು. ರೋಷದಿಂದ ಜಿನ್ನಾ ತಕ್ಷಣ ಸಿದ್ಧತೆ ಮಾಡಿಕೊಂಡು, "ನೆಹ್ರೂಗೆ ಬುದ್ಧಿಕಲಿಸಲು" ಪುನಃ ಇಂಡಿಯಾಕ್ಕೆ ಬಂದನು............ಚರಿತ್ರೆಯನ್ನು ಬದಲಾಯಿಸಿದ ಕ್ಲಿಯೊಪಾತ್ರಳ ಮೂಗಿನ ಜತೆಗೆ ಜಿನ್ನಾರ ಅಹಂಕಾರವನ್ನೂ ಸೇರಿಸಬಹುದು.

ನೊಂದ ಅಹಂಭಾವ ಭಯಂಕರ ಮೃಗ. ಎದುರಾಳಿಯ ಅಭ್ಯುದಯ ಶಕ್ತಿಯನ್ನು ಗಳಿಸಿ ಆತನನ್ನು ನೋಯಿಸಬೇಕೆಂಬ ಸಂಕಲ್ಪವನ್ನುಂಟು ಮಾಡುತ್ತದೆ. ಅಂತಹ ಘಟನೆಗಳಿಂದ ಚರಿತ್ರೆಯ ಪಥ ಬದಲಾಗಿದೆ. ಆದರೆ ನೊಂದವನಿಗೆ ಅವಕಾಶ ಕೊಟ್ಟು ಮೇಲಕ್ಕೆತ್ತಲು ಚರಿತ್ರೆ ಸಹಾಯ ನೀಡಬೇಕು. ಜಿನ್ನಾ ಕುದುರೆಯನ್ನೇರಲು ಚರಿತ್ರೆ ಸಹಾಯ ಮಾಡಿತು. ಇಂಡಿಯಾದ ಮೇಲಿನ ಮಧ್ಯಮವರ್ಗದ ಮುಸ್ಲಿಮರಿಗೆ ಹಿಂದೂ ಆಡಳಿತ ಬೇಡವಾಗಿತ್ತು. ೧೯೨೦-೩೦ ರಲ್ಲಿ ಗಾಂಧಿಯ ಪ್ರಯತ್ನದಿಂದ ಸ್ವಾತಂತ್ರ್ಯ ದಕ್ಕುವುದು ನಿಶ್ಚಯವಾದಾಗ ಹಿಂದೂ ರಾಜ್ಯ ನೆಲೆಗೊಳ್ಳದಂತೆ ಮಾಡಲು ಅವರು ಸಿದ್ಧರಾದರು. ಸ್ವತಂತ್ರ ಇಂಡಿಯಾದಲ್ಲಿ ಹಿಂದೂಕ್ಕೈವಾಡ ಮೇಲಾಗುವುದೆಂದು ಅವರು ನಂಬಿದರು. ಅದನ್ನು ಅವರು, "ಹಿಂದೂ ರಾಜ್ಯ," ವೆಂದು ಕರೆದರು. ೩೦೦ ಲಕ್ಷ ಮುಸ್ಲಿಮೇತರರು, ಮತಕ್ಕನುಸಾರವಾಗಿ ರಾಜ್ಯವಾಳಿದರೆ ನೂರುಲಕ್ಷ ಮುಸ್ಲಿಮರು ಎಂದೂ ಅಲ್ಪಸಂಖ್ಯಾತರಾಗಿರಬೇಕು. ಹಿಂದುಗಳು ಹೆಚ್ಚಾಗಿದ್ದ ಸ್ವತಂತ್ರ ಇಂಡಿಯಾದಲ್ಲಿ ಸರ್ಕಾರಿ ನೌಕರಿಗಳೆಲ್ಲಾ ಹಿಂದುಗಳಿಗೇ ಸಿಕ್ಕಿ, ಆರ್ಥಿಕವಾಗಿ ಪ್ರಬಲರಾಗುವರೆಂದು ಧನಿಕರಾದ ಮುಸ್ಲಿಮರೂ, ಮುಸ್ಲಿಂ ವಿದ್ಯಾವಂತರೂ, ವರ್ತಕರೂ ನಂಬಿದರು. ಆದುದರಿಂದ ರಾಜಕೀಯದಲ್ಲಿ ತಮಗೆ ಅವಕಾಶ ಕೊಟ್ಟಿದ್ದ ಬ್ರಿಟಿಷರು ಹೊರಡುವುದು ಅವರಿಗೆ ಇಷ್ಟವಾಗಲಿಲ್ಲ.

ಪಾಕಿಸ್ತಾನವಾದರೆ ಮುಸ್ಲಿಮರಿಗೆ ರಾಜ್ಯಾಧಿಕಾರ, ನೌಕರಿ, ವ್ಯಾಪಾರ ಕೈಗಾರಿಕೆಗಳ ಮೇಲೆ ಹಿಡಿತ ಎಲ್ಲವೂ ಸಿಕ್ಕುವುದು. ಇವರಿ

ಗಿಂತ ಮುಖ್ಯರಾದವರು ರೈತರು. ಜಿನ್ನಾರೊಬ್ಬರನ್ನು ಬಿಟ್ಟರೆ ಮುಸ್ಲಿಂ ಲೀಗಿನ ಮಿಕ್ಕ ನಾಯಕರು ಜಮೀನುದಾರರಾಗಿದ್ದರು. ನೆಹ್ರೂ ನಾಯಕತ್ವದಲ್ಲಿ ತಮ್ಮ ಜಮೀನುಗಳೆಲ್ಲಾ ರೈತರಿಗೆ ಹಂಚಲ್ಪಡುವುದೆಂದು ಅವರು ನಂಬಿದರು. ಬರಿಯ ಮುಸ್ಲಿಮರಿದ್ದ ವಾಯವ್ಯಪ್ರಾಂತ್ಯ ರೈತರ ಚಳುವಳಿಯಿಂದ ರಾಜಕೀಯ ಶಕ್ತಿಯನ್ನು ಗಳಿಸಿಕೊಂಡಿತ್ತು. ಆದರೆ ಮತದ ಆಧಾರದ ಮೇಲೆ ರಚಿಸಲ್ಪಟ್ಟ ಪಾಕಿಸ್ತಾನದಲ್ಲಿ ಇಂತಹ ಸುಧಾರಣೆಗಳಾಗುವುದಿಲ್ಲವೆಂದು ಮೇಲ್ತರಗತಿಯ ಜನ ನಿರೀಕ್ಷಿಸಿದರು. ರೈತ ಭೂಮಿಯ ಆಸೆಗಿಂತ, ರಾಷ್ಟ್ರಾಭ್ಯುದಯಕ್ಕೆ ಹೆಚ್ಚು ಗಮನ ಕೊಡಬಹುದೆಂದು ನಂಬಿದರು.

ಧನಿಕರು, ಮಧ್ಯಮವರ್ಗದ ಮುಸ್ಲಿಮರಿಗೆ ಪಾಕಿಸ್ತಾನ ಬೇಕಾಗಿತ್ತು. ಮತದ ಆಧಾರದಮೇಲೆ ರಚಿಸಲ್ಪಟ್ಟ ರಾಜ್ಯ ಸಾಮಾಜಿಕ ಭದ್ರತೆ, ರಾಜಕೀಯ, ಆರ್ಥಿಕ ಅಧಿಕಾರ ಕೊಡುವುದೆಂದು ಅವರು ನಿರೀಕ್ಷಿಸಿದರು.

ಭೂಮಿಯ ಆಸೆ, ನೌಕರಿಯ ಲಾಲಸೆ ಮುಲ್ಲಾಗಳ ವೇದಾಂತದ ಪ್ರಭಾವಕ್ಕೆ ಸಿಕ್ಕಿದ ಯಾರೂ ಈ ಎಲ್ಲಾ ಆಸೆಗಳನ್ನೂ ಸೇರಿಸಿ, ರಾಷ್ಟ್ರ ಕಟ್ಟಲು ಶಕ್ತರಾಗುತ್ತಿರಲಿಲ್ಲ. ಅವರೆಲ್ಲರಿಗಿಂತ ಮೇಲ್ಮಟ್ಟದಲ್ಲಿದ್ದ ವ್ಯಕ್ತಿ, ಜರ್ಮನ್ ವ್ಯಾಪಾರಗಾರರ ಆರ್ಥಿಕ ಅಭಿಲಾಷೆಗಳನ್ನು ಮೆಟ್ಟಿನಿಂತ ಹಿಟ್ಲರನಂತಹ ವ್ಯಕ್ತಿ ಈ ಕೆಲಸಕ್ಕೆ ಅವಶ್ಯಕವಾಗಿತ್ತು. ಜಿನ್ನಾ ಅಂತಹ ಮನುಷ್ಯ. ಹಣದಾಸೆಯಿಲ್ಲದ, ಧನಿಕನಾದ, ಆರ್ಥಿಕ ವಿಚಾರಗಳಲ್ಲಿ ಆಸೆಯಿಲ್ಲದ, ತನ್ನ ಕೈಕೆಳಗೆ ಕೆಲಸ ಮಾಡಿ ತನ್ನನ್ನೇ ರಾಜಕೀಯದಿಂದ ಓಡಿಸಿದ ಗಾಂಧಿ ನೆಹ್ರೂಗಳಲ್ಲಿ ರೋಷಪೂರಿತ ದ್ವೇಷವಿದ್ದ, ಅಹಂಕಾರ ಪೂರಿತನಾದ ಜಿನ್ನಾ ಅರವತ್ತನೆಯ ವರ್ಷದಲ್ಲಿ ವಿಜಯವೊಂದೇ ಧ್ಯೇಯವಾಗಿಟ್ಟುಕೊಂಡು ರಾಜಕೀಯ ರಂಗವನ್ನು ಪ್ರವೇಶಿಸಿದನು. ಜಿನ್ನಾರೊಡನೆ ಮಾತನ್ನಾಡುತ್ತಿದ್ದರೆ ಸೀಳಿದ ಗ್ರಾಮಫೋನ್ ರಿಕಾರ್ಡನ್ನು ಕೇಳಿದಂತಿತ್ತು ; ವಾದವೆಲ್ಲ, ಒಂದೇ ಸೂತ್ರದ ಪುನರುಚ್ಚಾರಣೆ. ಹಿಂದೂ ಮುಸ್ಲಿಮರು ಬೇರೆ ಬೇರೆ ಜನಾಂಗ ; ಗಾಂಧಿಗೆ ಹಿಂದೂ ರಾಜ್ಯ ಬೇಕು, ಪಾಕಿಸ್ತಾನ ಅನಗತ್ಯ. ನಿಸ್ವಾರ್ಥನಾದ ಮನುಷ್ಯನಲ್ಲಿ ಈ ತೀವ್ರವಾದ, ತರ್ಕವಿಲ್ಲದ ಉದ್ವೇಗ, ಮಿತಿಯಿಲ್ಲದ ದ್ವೇಷ, ಕಷ್ಟಜೀವಿಗಳೂ, ಉದ್ವೇಗಪೂರಿತರೂ ಆದ ಜನರಲ್ಲಿ ತುಂಬಾ ಪರಿಣಾಮವನ್ನುಂಟು

ಮಾಡಿತು. ಮುಸ್ಲಿಮರಿಗೇ ಬೇರೆ ರಾಜ್ಯ. ಮುಸ್ಲಿಮರೇ ಹಿಂದೂ, ಸಿಕ್ಕರ ಮೇಲೆ ಅಧಿಕಾರ ಮಾಡುತ್ತಾರೆ. ಹಿಂದೂ ವರ್ತಕರು ಕೈಗಾರಿಕೋದ್ಯಮಿಗಳು; ಜಮೀನ್ದಾರರು, ಅಧಿಕಾರಿಗಳು ಇರುವುದಿಲ್ಲ. ಜಿನ್ನಾ ಮಾತಿಗೆ ಮರುಳಾದ ಜನರಿಗೂ, ಅಲ್ಪ ಸಂಖ್ಯಾತರ ಸಮಸ್ಯೆಗಳು ಅರ್ಥವಾಗಲಿಲ್ಲ. ಮತ್ತನ್ನುಂಟುಮಾಡುವ ಬಾವುಟವನ್ನು ಜಿನ್ನಾ ಅವರಿಗೆ ಕೊಟ್ಟನು: ಪಾಕಿಸ್ತಾನ, ಪಾಕಿಸ್ತಾನದ ಸಂಪಾದನೆಯೇ ಆತನ ಗುರಿಯಾಯಿತು ; ಪಾಕಿಸ್ತಾನದ ಸಮಸ್ಯೆಗಳಲ್ಲ. ಆ ವಿಚಾರ ತಲೆದೋರಿದ ಮೊದಲ ವರ್ಷಗಳಲ್ಲಿ ಪಾಕಿಸ್ತಾನದ ಗಡಿಗಳ ಸೂಚನೆಯನ್ನೂ ಆತನು ಕೊಡಲಿಲ್ಲ. ಯೋಚನೆ ಅನಿರ್ದಿಷ್ಟವಾದಷ್ಟೂ ಸುಂದರ; ಟೀಕೆಗೆ ಅತೀತ. ಅದು ಮತಾಂಧನ ಸ್ವರ್ಗದಂತಿತ್ತು.

ಜಿನ್ನಾ ಗಾಂಧಿಯ ದೊಡ್ಡ ಸಮಸ್ಯೆಯಾದನು.

# ವಿಜಯ ಮತ್ತು ದುರಂತ

**(ಮಾರ್ಚ್ ೨೪, ೧೯೪೬—ಜನವರಿ ೩೦, ೧೯೪೮)**

**೨೭. ಮಾನವರಲ್ಲಿ ದೇವತ್ವದ ಅನ್ವೇಷಣೆ.**

ಗಾಂಧಿ ತಾನು ೧೫೦ ವರ್ಷಗಳು ಬದುಕಬೇಕೆಂದು ನಿರ್ಧರಿಸಿದ್ದನು. ಜೀವಚ್ಛವದಂತೆ ಬಂಧುಗಳಿಗೆ, ಸಮಾಜಕ್ಕೆ ಭಾರವಾಗಿ ಅಲ್ಲ; ಗಟ್ಟಿ ಮುಟ್ಟಾಗಿ. ಪ್ರಕೃತಿ ಚಿಕಿತ್ಸೆಯಿಂದ ಎಲ್ಲರೂ ಅಷ್ಟು ವರ್ಷ ಬದುಕಬಹು ದೆಂಬುದು ಆತನ ವಾದ, ಔಷಧಗಳು ಅಗತ್ಯವಿಲ್ಲ. ಸರಿಯಾದ ಊಟ, ಮಣ್ಣಿನ ಚಿಕಿತ್ಸೆ, ಸ್ನಾನ, ನಿದ್ರೆ, ಮದ್ಯನಿಷೇಧ ಮುಂತಾದವುಗಳಿಂದ ಮನಸ್ಸನ್ನು ನಿರ್ಲಿಪ್ತವಾಗಿಟ್ಟುಕೊಳ್ಳಲು ಶಕ್ತನಾದರೆ ಬಹುಕಾಲ ಬದುಕ ಬಹುದು. ಜೀವಕ್ಕಾಧಾರವಾದ ಅಮೃತ, ಸೇವೆ, ಫಲಾಪೇಕ್ಷೆಯಿಲ್ಲದ ಸೇವೆ. ಅದು ಚಿಂತೆ, ಅಸಮಾಧಾನಗಳಿಗೆ ಅವಕಾಶ ಕೊಡುವುದಿಲ್ಲ. ನಿಸ್ವಾರ್ಥತೆ ಜೀವವನ್ನು ಪೋಷಿಸುತ್ತದೆ; ಸ್ವಾರ್ಥ ಕೊಲ್ಲುತ್ತದೆ. ಇನ್ನು ಅರ್ಧ ಶತಮಾನ ಬದುಕಬೇಕೆಂಬ ಗಾಂಧಿಯ ಆಸೆ ಆತನ ನಂಬಿಕೆಯ ಪ್ರತೀಕವಾಗಿತ್ತೆನ್ನಬಹುದು. ಕೆಲಸಮಾಡಲು ಸಾಧ್ಯ. ಆದರೆ ಒಂದು ಜೀವಮಾನದಲ್ಲಿ ಸಾಧ್ಯವಿಲ್ಲ.

೧೯೪೬ ರ ಜೂನ್ ಕಡೆಯಲ್ಲಿ ನಾನು ಮಹಾತ್ಮಗಾಂಧಿಯನ್ನು ನೋಡಲು ಹೋದಾಗ ಆತನು ಆರೋಗ್ಯವಾಗಿದ್ದನು. ಹೊಸ ದೆಹಲಿ ಯಲ್ಲಿಳಿಯುತ್ತಲೇ ಟ್ಯಾಕ್ಸಿ ಮಾಡಿಕೊಂಡು ಆತನಿದ್ದ ಅಸ್ಪೃಶ್ಯ ವಸತಿಗೆ ಹೋದೆನು. ಸಾಯಂಕಾಲದ ಪ್ರಾರ್ಥನೆ ನಡೆಯುತ್ತಿತ್ತು. ಗಾಂಧಿ ಕುಳಿತಿದ್ದ ಮರದ ಅಟ್ಟಣಿಗೆಯ ಮೂರನೆಯ ಮೆಟ್ಟಿಲ ಬಳಿ ಕುಳಿತು ಕೊಂಡೆ. " ಬಂದಿರಾ? ನಾಲ್ಕು ವರ್ಷಗಳಲ್ಲಿ ನಾನು ಹೆಚ್ಚು ಸುಂದರ ನಾಗಿಲ್ಲ", ಎಂದರು.

"ಆಗಿದ್ದೀರೆಂದು ಹೇಳಲಾರೆ" ಎಂದು ನಾನು ಉತ್ತರ ಕೊಡಲು, ತಲೆಯೆತ್ತಿ ಗಟ್ಟಿಯಾಗಿ ನಕ್ಕರು. ನನ್ನ ಮೊಣಕೈ ಹಿಡಿದುಕೊಂಡು ತನ್ನ ಕಲ್ಲಿನ ಗುಡಿಸಿಲ ಕಡೆ ನಡೆಯುತ್ತಾ, ನನ್ನ ಆರೋಗ್ಯ, ಪ್ರಯಾಣ, ಸಂಸಾರ

ಗಳ ವಿಚಾರ ಕೇಳಿ, ಬೆಳಿಗ್ಗೆ ೫-೩೦ ಘಂಟೆಗೆ ನಡೆದಾಡಲು ಬರಬೇಕೆಂದು ಹೇಳಿದರು. ಮುಂದಿನ ಮೂರುವಾರಗಳಲ್ಲಿ ಎಂಟು ದಿನ ಆತನೊಡನೆ ನಾನು ಇಂಡಿಯಾ ದೇಶದ ಅನೇಕ ಕಡೆ ಕಳೆದೆ. ಆತನ ಆರೋಗ್ಯ ಉತ್ತಮ ವಾಗಿತ್ತು. ಊಟಮಾಡುವಾಗ ಕೈ ಸ್ವಲ್ಪ ನಡುಗುತ್ತಿತ್ತು. ನಾಲ್ಕು ವರ್ಷ ಗಳ ಕೆಳಗೆ ನಡೆದಷ್ಟು ಸುಲಭವಾಗಿ ನಡೆಯುತ್ತಿರಲಿಲ್ಲ. ಧ್ವನಿ ಅಷ್ಟು ಶಕ್ತವಾಗಿರಲಿಲ್ಲ. ಆದರೆ ಚಟುವಟಿಕೆಯಾಗಿ ಪ್ರತಿದಿನ ವ್ಯಾಯಾಮ ತೆಗೆದು ಕೊಳ್ಳುತ್ತಿದ್ದರು. ಪೂನಾದಲ್ಲಿ ಡಾಕ್ಟರ್ ದಿನ್‌ಷಾ ಮೆಹ್ತಾರ ಪ್ರಕೃತಿ ವೈದ್ಯಶಾಲೆಯಲ್ಲಿ ಊಟವಾದ ಮೇಲೆ ಒಂದು ದಿನ ನನ್ನನ್ನು ನಡೆದಾಡಲು ಕರೆದರು. "ಈ ಮಳೆಯಲ್ಲಿ ನಡೆಯಲು ಹೋಗುತ್ತೀರಾ ?" ಎಂದು ನಾನು ಸ್ವಲ್ಪ ಅಡ್ಡಿಪಡಿಸಿದೆ. ಕೈಚಾಚಿ, "ಬಾರೈಯ್ಯಾ," ಎಂದರು ತಮಾ ಷೆಯಲ್ಲಿ. ನಗುವಿನಲ್ಲಿ ಆತನ ಪ್ರೀತಿ ಕಡಮೆಯಾಗಿರಲಿಲ್ಲ.

ಆದರೂ ಆತನ ಜೀವನದಲ್ಲಿ ಕಪ್ಪು ಛಾಯೆಗಳು ಕಾಣಬರುತಿದ್ದುವು. "ಇಂಡಿಯಾಕ್ಕೆ ನಾನು ನಂಬಿಕೆ ಹುಟ್ಟಿಸಲಿಲ್ಲ. ಸುತ್ತಲೂ ಹಿಂಸಾ ಕೃತ್ಯ ಗಳು ನಡೆಯುತ್ತಿವೆ. ನಾನು ಅಪ್ರಯೋಜಕನಾದೆ", ಎಂದು ಹೇಳಿದನು. ತನ್ನವರ ಸಹಾಯದಿಂದಲೇ ವಿಜಯಗಳಿಸಬಹುದೆಂದು ಆಗಲೂ ನಂಬಿ ದ್ದನು. ಹಾಗೆ ಮಾಡಲು ಆರೋಗ್ಯ, ಆಯುಸ್ಸುಗಳನ್ನು ಆತನು ಕೋರಿ ದನು. ಆದರೆ ಮಾಂಸಖಂಡಗಳಂತೆ, ಮೂಳೆಗಳಂತೆ ದೇಹಗತವಾದ ಆತನ ಆಶಾವಾದದಲ್ಲಿ ಸ್ವಲ್ಪ ಸಂದೇಹ ತಲೆದೋರಿತ್ತು.

ಒಂದು ಮುಖ್ಯ ವಿಚಾರದಲ್ಲಿ ಮಾತ್ರ ಆತನು ಬದಲಾಯಿಸಿರಲಿಲ್ಲ. ಆತನು ಕರ್ಮಯೋಗಿ. ಯಾವಾಗಲೂ ಚಟುವಟಿಕೆಯಿಂದ ಧ್ಯೇಯದ ಕಡೆಗೆ ಸಾಗುತ್ತಿದ್ದನು. ಕೈಲಾದುದನ್ನು ಮಾಡಿ ಮುಗಿಸುವುದೇ ಆತನ ಧ್ಯೇಯ. ಹರಿಜನರ ನೆಮ್ಮದಿಗಾಗಿ, ವಿದ್ಯೆಗಾಗಿ, ನೂಲುವುದಕ್ಕಾಗಿ, ಗ್ರಾಮೋದ್ಧಾರಕ್ಕಾಗಿ, ಪ್ರಕೃತಿ ಚಿಕಿತ್ಸೆಗಾಗಿ ನಿಲ್ಲದೆ ದುಡಿಯುತ್ತಿದ್ದನು. ಇಂಗ್ಲಿಷ್ ಮತ್ತು ಗುಜರಾತಿ ಪತ್ರಿಕೆಗಳಿಗೆ ಪ್ರತಿವಾರ ಅನೇಕ ಪತ್ರಗಳನ್ನು ಬರೆಯುತ್ತಿದ್ದನು. ಸಭೆಗಳಲ್ಲಿ ಮತ್ತು ವ್ಯಕ್ತಿಗಳಿಂದ, ಧನಿಕ ಸ್ನೇಹಿತರಿಂದ ಹಣ ಕೂಡಿಸುತ್ತಿದ್ದನು. ಹೀಗೆ ಧನಿಕರಿಂದ ಹಣ ಸೆಳೆಯುತ್ತಿದ್ದುದನ್ನು ನೋಡಿಯೇ ಶ್ರೀಮತಿ ನಾಯ್ಡು, "ಗಾಂಧಿಯನ್ನು ಬಡವನಾಗಿಟ್ಟಿರಲು

ಬಹಳ ಹಣ ಬೇಕು", ಎಂದು ಪರಿಹಾಸ್ಯಮಾಡಿದುದು. ಜಿ. ಡಿ. ಬಿರ್ಲಾ ಎಂಬ ಬಟ್ಟೆ ಗಿರಣಿ ಮಾಲೀಕರು ಆಶ್ರಮದ ವೆಚ್ಚವನ್ನೂ, ಅದರ ಆಸ್ಪತ್ರೆ, ಹಾಲಿನ ಕೇಂದ್ರಗಳನ್ನೂ ನೋಡಿಕೊಳ್ಳುತ್ತಿದ್ದರು. ಇದಕ್ಕಾಗಿ ೧೭,೦೦೦ ಡಾಲರುಗಳು ವರ್ಷಕ್ಕೆ ಖರ್ಚಾಗುತ್ತಿದ್ದುವು.

ಈ ಉದ್ಧಾರ ಕಾರ್ಯಗಳಿಗೆ ಅಲ್ಲದೆ ಗಾಂಧಿ ಕಾಂಗ್ರೆಸ್ ಪಕ್ಷಕ್ಕೂ ದುಡಿಯುತ್ತಿದ್ದರು. ಅಲ್ಲಿ ಸರ್ದಾರ್ ವಲ್ಲಭಾಯ್ ಪಟೇಲ್ ಬಲವಾದ ಸದಸ್ಯನೆನಿಸಿಕೊಂಡಿದ್ದರೂ, ಪಕ್ಷದ ತತ್ವಗಳನ್ನೊಪ್ಪಿಕೊಂಡಿದ್ದರೂ, ಒಪ್ಪದಿದ್ದರೂ ರಾಜಕೀಯ ತಜ್ಞನೆನ್ನಿಸಿಕೊಂಡ ರಾಜಾಜಿ ಇದ್ದರೂ, ಗಾಂಧಿಯ ತರುವಾಯ ರಾಜಕೀಯ ನಾಯಕ ಜವಾಹರ್‌ಲಾಲ್ ನೆಹ್ರೂ ಎಂದು ಗೊತ್ತಾಗಿತ್ತು. ಗಾಂಧಿಯ ತತ್ವದಲ್ಲಿ ಹೆಚ್ಚು ವಿಶ್ವಾಸವಿಲ್ಲದಿದ್ದರೂ, ಗಾಂಧಿ ನೆಹ್ರೂಗಳಲ್ಲಿ ತಂದೆ ಮಕ್ಕಳ ಸೌಹಾರ್ದವಿದ್ದು, ಯಾವ ಅಸಮಾಧಾನದಿಂದಲೂ ಕಡಿಮೆಯಾಗುತ್ತಿರಲಿಲ್ಲ. ೧೯೪೨ರ ಜನವರಿ ೧೫ರ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿ ಮಹಾತ್ಮ, "ನನಗೂ, ಪಂಡಿತ ಜವಾಹರ್ ಲಾಲರಿಗೂ ಅಸಮಾಧಾನವುಂಟಾಗಿತ್ತೆಂದು ವದಂತಿಯಿತ್ತು. ಅಭಿಪ್ರಾಯ ಭೇದಗಳಿಂದ ನಮ್ಮಿಬ್ಬರಿಗೆ ವೈಮನಸ್ಯವುಂಟಾಗುವ ಸಂಭವವಿಲ್ಲ. ನಾವು ಕೆಲಸಮಾಡಲು ಪ್ರಾರಂಭಿಸಿದಾಗಿನಿಂದಲೂ ಅಭಿಪ್ರಾಯ ಭೇದಗಳಿದ್ದೆ ಇವೆ. ಆದರೂ ನಾನು ಈಗ ಹಲವು ವರ್ಷಗಳಿಂದ ಹೇಳುತ್ತಿರುವಂತೆ ನನ್ನ ನಂತರ ನಾಯಕನಾಗುವವನು ರಾಜಾಜಿಯಲ್ಲ; ಜವಹರ್‌ಲಾಲ್. ಆತನಿಗೆ ನನ್ನ ಭಾಷೆ ತಿಳಿಯುವುದಿಲ್ಲವೆನ್ನುತ್ತಾನೆ; ಆತನ ಭಾಷೆ ಬೇರೆಯೆನ್ನುತ್ತಾನೆ. ಇದು ನಿಜವಿರಬಹುದು; ಅಲ್ಲದಿರಬಹುದು. ಆದರೆ ಹೃದಯಗಳನ್ನು ಬೆಸೆಯಲು ಭಾಷೆ ಅಡ್ಡಿಯಾಗಲಾರದು. ನಾನು ಹೋದ ಮೇಲೆ ಆತನು ನನ್ನ ಭಾಷೆಯನ್ನೇ ಆಡುವನೆಂದು ನನಗೆ ತಿಳಿದಿದೆ" ಎಂದು ಹೇಳಿದನು.

ಗಾಂಧಿ ೧೯೪೭ ರಲ್ಲಿ ನನ್ನೊಡನೆ, " ನೆಹ್ರೂಗೆ ವಾಕ್ಪಟುತ್ವ ಮನೋಭಾವವಿದೆ ", ಎಂದು ಹೇಳಿದನು. ಪಟೇಲ್ ತಾನು ಗಾಂಧಿ ಹೇಳಿದ ಮಾತಿಗೆ ಒಪ್ಪಿಗೆ ಕೊಡುವವನೆಂದು ಹೆಮ್ಮೆಯಿಂದ ಹೇಳಿದನು. ನೆಹ್ರು ಗಾಂಧಿಯ ಮಾತಿಗೆ " ಇಲ್ಲ–ಹೌದು " ಎನ್ನುತ್ತಿದ್ದನು. ಅದರಿಂದಲೇ

ಒಂದು ದಿನ ಆತನು ಮಹಾತ್ಮನ ಹೃದಯದ ಭಾಷೆಯನ್ನಾಡುವನೆಂಬ ಆಸೆ ಗಾಂಧಿಗಿತ್ತು.

ಸ್ವಾತಂತ್ರ್ಯದ ದಿನ ಹತ್ತಿರ ಬರುತ್ತಾ, ರಾಜಕೀಯ ಚಟುವಟಿಕೆ ತೀಕ್ಷ್ಣವಾಗಿ, ಗಾಂಧಿ ಅದರ ಕೇಂದ್ರವಾಗಿದ್ದನು. ನೆಹ್ರು, ಪಟೇಲ್, ರಾಜಾಜಿ, ಬೇರೆ ನಾಯಕರು ಪ್ರತಿದಿನ ಹರಿಜನ ಕೇರಿಗೆ ಹೋಗಿ ಬರುತ್ತಿದ್ದರು. ತಮ್ಮ ಯೋಜನೆಗಳಿಗೆ, ಸೂಚನೆಗಳಿಗೆ ಗಾಂಧಿಯ ಒಪ್ಪಿಗೆಯಿಲ್ಲದೆ ಜನ ಮನ್ನಣೆ ದೊರಕುವುದಿಲ್ಲವೆಂದು ಅವರಿಗೆ ತಿಳಿದಿತ್ತು. ಗಾಂಧಿಯ ನಿರ್ದೇಶನ ಅವರಿಗೆ ಅಗತ್ಯವಾಗಿತ್ತು. ಆತನ ಅಂತರ್ದೃಷ್ಟಿಗೆ, ಇಂಡಿಯಾದ ಸ್ವಾತಂತ್ರ್ಯ ಸಮಾಲೋಚನೆಗಳಲ್ಲಿ ಮುಖ್ಯ ಸ್ಥಾನವಿತ್ತು.

೧೯೪೬ರ ಮಾರ್ಚ್ ೨೩ರಲ್ಲಿ ಒಂದು ಬ್ರಿಟಿಷ್ ಮಂತ್ರಿ ನಿಯೋಗ ಇಂಡಿಯಾದ ಸ್ವಾತಂತ್ರ್ಯದ ಕರಾರುಗಳನ್ನು ಗೊತ್ತುಮಾಡಲು ಬಂದಿತು. ಇಂಡಿಯಾ ಕಾರ್ಯದರ್ಶಿ ಲಾರ್ಡ್ ಪೆಥಿಕ್‌ಲಾರೆನ್ಸ್, ವಾಣಿಜ್ಯ ಸಂಸ್ಥೆಯ ಅಧ್ಯಕ್ಷ ಸರ್ ಸ್ಟಾಫರ್ಡ್‌ಕ್ರಿಪ್ಸ್, ನೌಕಾಸೈನ್ಯಾಧಿಪತಿ ಆಲ್ಬರ್ಟ್ ವಿ. ಅಲೆಕ್ಸಾಂಡರ್ ಮುಂತಾದ ಅದರ ಸದಸ್ಯರು ಬ್ರಿಟಿಷ್ ಆಡಳಿತಕ್ಕೆ ಬದಲಾಗಿ ಇಂಡಿಯಾ ಸ್ವಾತಂತ್ರ್ಯವನ್ನು ಏರ್ಪಡಿಸಲು ಸೂಚನೆಗಳನ್ನು ಕೊಡಬೇಕೆಂದು ಇಂಡಿಯಾ ನಾಯಕರನ್ನು ಕೇಳಿದರು. ಆದರೆ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗಿನ ನಾಯಕರು ಒಪ್ಪಂದಕ್ಕೆ ಬರಲಾರದಿದ್ದುದರಿಂದ ೧೯೪೬ರ ಮೇ ೧೬ ರಲ್ಲಿ ನಿಯೋಗ ತನ್ನದೇ ಒಂದು ಯೋಜನೆಯನ್ನು ಸಿದ್ಧಪಡಿಸಿತು. ಅದನ್ನು ಸರಿಯಾಗಿ ನೋಡಿ ಗಾಂಧಿ, “ಈ ಸಂದರ್ಭದಲ್ಲಿ ಇದಕ್ಕಿಂತ ಒಳ್ಳೆಯ ಯೋಜನೆಯನ್ನು ಬ್ರಿಟಿಷ್ ಸರ್ಕಾರ ಸಿದ್ಧಪಡಿಸಲಾರದು. ಆದಷ್ಟು ಜಾಗ್ರತೆಯಾಗಿ ಬ್ರಿಟಿಷ್ ಆಡಳಿತವನ್ನು ಕೊನೆಗಾಣಿಸುವುದೇ ಇಂಗ್ಲೆಂಡಿನ ಧ್ಯೇಯ,” ಎಂದನು.

ಮಂತ್ರಿ ಮಂಡಲದ ವರದಿಯಲ್ಲಿ, “ಮುಸ್ಲಿಂ ಲೀಗನ್ನು ಬಿಟ್ಟರೆ, ಇಂಡಿಯಾ ದೇಶದ ಐಕ್ಯತೆಯ ಅಭಿಲಾಷೆ ಎಲ್ಲರಿಗೂ ಇದೆಯೆನ್ನುವುದಕ್ಕೆ ಬೇಕಾದಷ್ಟು ಸಾಕ್ಷ್ಯವಿದೆ. ಮುಸ್ಲಿಮರಿಗೆ ತಾವು ಎಂದೆಂದಿಗೂ ಹಿಂದೂ ಬಹು ಸಂಖ್ಯಾತರಿಂದ ಆಳಲ್ಪಡಬಹುದೆಂಬ ಹೆದರಿಕೆ ಇದೆ. ಆದುದರಿಂದ ಪಕ್ಷಪಾತವಿಲ್ಲದೆ ಇಂಡಿಯಾ ದೇಶವನ್ನು ಭಾಗಮಾಡಬಹುದೇ ಎಂದು

ನಿಯೋಗ ಆಲೋಚಿಸಿ, ಸಾಧ್ಯವಿಲ್ಲವೆಂದು ನಿರ್ಧರಿಸಿತು. ಪಾಕಿಸ್ತಾನದ ಎರಡು ಭಾಗಗಳು ೭೦೦ ಮೈಲಿಗಳ ಅಂತರದಲ್ಲಿವೆ. ಅವುಗಳಿಗೆ ಪ್ರಯಾಣ ಸೌಕರ್ಯಗಳು ಹಿಂದೂಸ್ಥಾನದ ಸೌಹಾರ್ದವನ್ನವಲಂಬಿಸಿವೆ. ಪಶ್ಚಿಮ ಪಾಕಿಸ್ತಾನದಲ್ಲಿ ಅಲ್ಪ ಸಂಖ್ಯಾತರ ಶೇಕಡಾ ೩೭ ಭಾಗ, ಪೂರ್ವ ಪಾಕಿಸ್ಥಾನದಲ್ಲಿ ೪೮ ಭಾಗವಿರುತ್ತಾರೆ. ೩೦ ಲಕ್ಷ ಜನ ಮುಸ್ಲಿಮರು ಹಿಂದೂಸ್ಥಾನದಲ್ಲಿ ಅಲ್ಪಸಂಖ್ಯಾತರೆನಿಸಿ ಹಿಂದೂಸ್ಥಾನದಲ್ಲಿ ಇರುತ್ತಾರೆ. ಈ ಅಂಕಿ ಅಂಶಗಳಿಂದ ಮುಸ್ಲಿಂ ಲೀಗಿನ ಇಷ್ಟಪ್ರಕಾರ ಪಾಕಿಸ್ತಾನವನ್ನು ಬೇರೆ ರಾಷ್ಟ್ರವಾಗಿ ಮಾಡುವುದು ಜಾತಿಯ ಪ್ರಶ್ನೆಯನ್ನು ಇತ್ಯರ್ಥ ಮಾಡುವುದಿಲ್ಲ."

ಅನಂತರ ಆ ಮೂವರು ಮಂತ್ರಿಗಳು ಹಿಂದು, ಸಿಕ್ ಪ್ರಾಂತ್ಯಗಳನ್ನು ಬಿಟ್ಟು ಪಾಕಿಸ್ತಾನ ಮಾಡುವ ಆಲೋಚನೆ ಮಾಡಿದರೆ, ಅದು ಸಾಧ್ಯವಲ್ಲದ ಮಾತೆಂದು ಮುಸ್ಲಿಂ ಲೀಗ್ ಅಭಿಪ್ರಾಯಪಟ್ಟಿತು. (ಆದರೆ ಈಗ ನಿರ್ಮಿತವಾಗಿರುವ ಪಾಕಿಸ್ತಾನ ಇದೇ)." ಈ ಚಿಕ್ಕ ಪಾಕಿಸ್ತಾನವಾಗಬೇಕಾದರೆ ಅಸ್ಸಾಂ, ಬಂಗಾಳ, ಪಂಜಾಬುಗಳು ಭಾಗವಾಗಬೇಕಾಗುತ್ತವೆ. ನಮ್ಮ ಅಭಿಪ್ರಾಯದಲ್ಲಿ ಅಲ್ಲಿಯ ಜನರಿಗೆ ಇದು ಇಷ್ಟವಿಲ್ಲ. ಬಂಗಾಳ ಪಂಜಾಬುಗಳಿಗೆ ತಮ್ಮದೇ ಭಾಷೆ, ಚರಿತ್ರೆಗಳಿವೆ. ಅದೂ ಅಲ್ಲದೆ ಪಂಜಾಬನ್ನು ಭಾಗಮಾಡಿದರೆ ಸಿಕ್ಕರನ್ನು ಬೇರ್ಪಡಿಸಿ ಎರಡು ಕಡೆಯೂ ಅವರು ಹೆಚ್ಚು ಸಂಖ್ಯೆಯಲ್ಲಿರಬೇಕಾಗುತ್ತದೆ," ಎಂದು ಬರೆದರು.

ಈ ಕಾರಣಗಳಿಂದ ಮಂತ್ರಿಮಂಡಲ ಇಂಗ್ಲಿಷ್ ಸರ್ಕಾರ ಇಂಡಿಯಾವನ್ನು ಭಾಗಮಾಡಕೂಡದೆಂದು ಸಲಹೆ ಕೊಟ್ಟಿತು. ಬದಲಾಗಿ (೧) ಬ್ರಿಟಿಷ್ ಇಂಡಿಯಾ, ರಾಜಮಹಾರಾಜರ ಸಂಸ್ಥಾನಗಳನ್ನೊಳಗೊಂಡ ಒಂದು ಕೇಂದ್ರ ಸರ್ಕಾರ, ರಕ್ಷಣೆ, ಪರದೇಶಗಳೊಡನೆ ವ್ಯವಹಾರ, ಪ್ರಯಾಣ ಸೌಕರ್ಯಗಳನ್ನು ನೋಡಿಕೊಳ್ಳಬೇಕು. (೨) ಮತೀಯ ವಿಚಾರಗಳಲ್ಲಿ ಹಿಂದೂ, ಮುಸ್ಲಿಂ ಪ್ರತಿನಿಧಿಗಳ ಒಪ್ಪಿಗೆಯಿಲ್ಲದೆ ಯಾವ ಬದಲಾವಣೆಯನ್ನೂ ಕೇಂದ್ರ ಸರ್ಕಾರ ಮಾಡಕೂಡದು. (೩) ಪ್ರಾಂತ್ಯ ಸರ್ಕಾರಗಳಿಗೆ ಹೆಚ್ಚು ಆಡಳಿತ ಹಕ್ಕುಗಳಿರಬೇಕು. ಅಲ್ಪ ಸಂಖ್ಯಾತರ ನೆಮ್ಮದಿಗೆ ಭಂಗತರದೆ ಕೇಂದ್ರ ಸರ್ಕಾರ ದೇಶಕ್ಕೆ ಸಂಬಂಧಪಟ್ಟ ಕೆಲವು

ವಿಚಾರಗಳನ್ನುಮಾತ್ರ ನೋಡಿಕೊಂಡು ಮಿಕ್ಕ ಕೆಲಸಗಳನ್ನೆಲ್ಲಾ ಪ್ರಾಂತ್ಯ ಸರ್ಕಾರಗಳಿಗೆ ಬಿಡಬೇಕು. ಮುಸ್ಲಿಮರು ಬಹು ಸಂಖ್ಯಾತರಾಗಿರುವ ಕಡೆ ಮುಸ್ಲಿಮರ ಕೈಯಲ್ಲೇ ಆಡಳಿತ ಸೂತ್ರಗಳಿದ್ದಂತಾಯಿತು.

ಹೊಸ ದೆಹಲಿಯಲ್ಲಿ ಈ ಕಾನ್‌ಸ್ಟಿಟ್ಯುಯಂಟ್ ಅಸೆಂಬ್ಲಿ ಸೇರಿ, ಮೂರು ಭಾಗವಾಗಿ ಬೇರ್ಪಡುವುದು. (೧)' ಮಧ್ಯ ಇಂಡಿಯಾದ ಹಿಂದೂ ಬಹು ಸಂಖ್ಯಾತರ ಪ್ರತಿನಿಧಿಗಳು (೨) ವಾಯುವ್ಯ ಪ್ರಾಂತ್ಯ, ಸಿಂಧ್, ಪಂಜಾಬು ಮುಂತಾದ ಮುಸ್ಲಿಂ ಪ್ರಾಂತ್ಯಗಳ ಪ್ರತಿನಿಧಿಗಳು. (೩) ಬಂಗಾಳ, ಅಸ್ಸಾಮಿನ ಪ್ರತಿನಿಧಿಗಳು—ಈ ಮೂರು ಭಾಗಗಳೂ ಇಂಡಿಯಾದ ಮೂರು ಭಾಗಗಳಿಗೆ ಆಡಳಿತ ಕ್ರಮವನ್ನು ನಿರ್ಧರಿಸಬೇಕು.

ಈ ಕಲ್ಲಿನ ಮೇಲೆ ಬ್ರಿಟಿಷ್ ನಿಯೋಗದ ಯೋಜನೆ ಒಡೆಯಿತು. ಗಾಂಧಿಯ ಅಂತರ್ದೃಷ್ಟಿ ಈ ಭಾಗಹಾರ ಬೇಡವೆಂದಿತು. ಯಾವಾಗಲೂ ಕಾಂಗ್ರೆಸ್ಸಿನ ಕಡೆ ಒಲವಿದ್ದ ವಾಯುವ್ಯ ಪ್ರಾಂತ್ಯ ಮೊದಲ ಗುಂಪಿಗೆ ಸೇರ ಲಿಚ್ಛಿಸಬಹುದು. ಅದನ್ನು ಬಲವಂತದಿಂದ ಎರಡನೆಯ ಗುಂಪಿಗೆ ಸೇರಿಸುವುದೇಕೆ? ಅಸ್ಸಾಮಿನಲ್ಲಿ ಹಿಂದುಗಳ ಸಂಖ್ಯೆ ಹೆಚ್ಚು. ಮುಸ್ಲಿಮರು ಹೆಚ್ಚಾಗಿದ್ದ ಬಂಗಾಳದೊಡನೆ ಅದೇಕೆ ಸೇರಬೇಕು? ಅದು ಒತ್ತಾಯ ಮಾಡಿದಂತಾಯಿತು. ಬ್ರಿಟಿಷರು, ಈ ಪ್ರಾಂತ್ಯಗಳು ಸುಮ್ಮನೆ ಆಡಳಿತ ಕ್ರಮ ನಿರ್ಧರಿಸಲು ಸೇರುವುವೆಂದೂ, ಮುಂದೆ ಬೇಕಾದ ಪಂಗಡಕ್ಕೆ ಸೇರ ಬಹುದೆಂದೂ ಹೇಳಿದರು. ಅಸ್ಸಾಂ ಮೊದಲ ಗುಂಪಿಗೇ ಸೇರಬಹುದು. ಆಡಳಿತ ಕ್ರಮ ನಿರ್ಧಾರವಾದ ಮೇಲೆ, ಅಸ್ಸಾಮಾಗಲಿ, ವಾಯುವ್ಯ ಪ್ರಾಂತ್ಯವಾಗಲಿ ಬೇರೆಯಾಗಲು ಅಸಾಧ್ಯವಾಗಬಹುದೆಂದು ಗಾಂಧಿ ಹೆದರಿದನು. ಜೀವನದಲ್ಲಿ ಮೊದಲಬಾರಿ, ಒಳ್ಳೆಯ ಪರ್ವಕಾಲದಲ್ಲಿ ಗಾಂಧಿಯ ಮನಸ್ಸು ನಿಶ್ಚಯಕ್ಕೆ ಬರಲಾರದೆ ಹೋಯಿತು. ಬ್ರಿಟಿಷರು ಸೌಹಾರ್ದದಿಂದ ಬಂದರೆಂದು ಒಪ್ಪಿಕೊಂಡನು. ಆದರೂ ಸಂದೇಹಗಳಿದ್ದುವು. ಹೀಗೆ ಭಾಗಮಾಡಿ ಹಿಂದಿನಿಂದ ಅರ್ಧ ಪಾಕಿಸ್ತಾನವನ್ನೋ ಕಾಲು ಪಾಕಿಸ್ತಾನವನ್ನೋ ತುರುಕುವ ಯೋಜನೆಯೋ?

ಬ್ರಿಟಿಷ್ ಮಂತ್ರಿ ಮಂಡಲ ಯಾವುದೋ ಓಬಿರಾಯನ ಕಾರಣ ಹೇಳಿ ಪಾಕಿಸ್ತಾನವಾಗಲು ಅಡ್ಡಬಂದಿತೆಂದು ಕೂಗಾಡಿ ಜಿನ್ನಾ ಜೂನ್ ೪

ವಲ್ಲಿ ಅದರ ಸೂಚನೆಗಳಿಗೆ ಒಪ್ಪಿಗೆಕೊಡಲು ಪರಿಸ್ಥಿತಿ ಸುಲಭವಾಗಲಿಲ್ಲ. ಇದು ಮನಶ್ಶಾಸ್ತ್ರಕ್ಕೆ ಸಂಬಂಧಿಸಿರಬಹುದು ; ರಾಜಕೀಯ ಜಾಣತನವಿರಬಹುದು. ಮುಸ್ಲಿಂ ಲೀಗ್ ಏನನ್ನು ಒಪ್ಪಿದರೂ, ಕಾಂಗ್ರೆಸ್ಸಿಗೆ ಅದು ಸರಿಯಲ್ಲವೆಂಬ ಭಾವನೆಯಿತ್ತು. ಕಾಂಗ್ರೆಸ್ ಅನೇಕ ವಾರ ಚರ್ಚೆ ನಡೆಸಿತು. ಅನೇಕ ಸಂಶಯಗಳು ಅದನ್ನು ಬಾಧಿಸಿದವು. ಡಾಕ್ಟರ್ ಮೆಹ್ತಾರ ಪ್ರಕೃತಿ ಚಿಕಿತ್ಸಾಲಯದಲ್ಲಿ ನನ್ನ ಹಾಸಿಗೆಯ ಮೇಲೆ ಕುಳಿತು ನೆಹ್ರೂ, ಬ್ರಿಟಿಷ್ ಯೋಜನೆಯನ್ನು ಅಳೆದಳೆದು ನೋಡಿದನು. "ಅವರು ಇಂಡಿಯಾ ಬಿಟ್ಟು ಹೋಗುವಂತಿಲ್ಲ," ಎಂದನು. ಆತನ ಒಡನಾಡಿಯಾದ, ಮುಂದೆ ಲಂಡನ್ನಿನಲ್ಲಿ ಹೈಕಮಿಷನರಾಗಿ, ಸಂಯುಕ್ತ ಸಂಸ್ಥೆಗೆ ಪ್ರತಿನಿಧಿಯಾದ ಶ್ರೀ ಕೃಷ್ಣಮೆನನ್‌ಗೂ ಈ ಸಂದೇಹವಿತ್ತು. ಇದು ಕಾಂಗ್ರೆಸ್ಸಿನಲ್ಲಿ ಅನೇಕರಿಗಿತ್ತು. ಆ ಸಂದರ್ಭದಲ್ಲಿ ನಾನು ಸಂಧಿಸಿದ ಅನೇಕ ನಾಯಕರಲ್ಲಿ ಒಬ್ಬರಿಗೂ ಇಂಗ್ಲೆಂಡ್ ಅಧಿಕಾರ ಬಿಟ್ಟುಹೋಗುವುದೆಂಬ ನಂಬಿಕೆಯಿರಲಿಲ್ಲ. ಅದು ನಂಬಲಸಾಧ್ಯವಾದಷ್ಟು ಒಳ್ಳೆಯ ವರ್ತಮಾನ. ೧೯೪೨–೪೩ ರಲ್ಲಿ ಹಿಂಸಾಕೃತ್ಯಗಳಲ್ಲಿ ಭಾಗವಹಿಸಿದ ಕೆಲವು ಕಾಂಗ್ರೆಸ್ ಪಕ್ಷದವರು, ಯುದ್ಧಮಾಡಿ ಬ್ರಿಟಿಷರನ್ನೋಡಿಸಿದರೆ ಮಾತ್ರ ಸ್ವಾತಂತ್ರ್ಯ ಗಟ್ಟಿಯೆಂದು ಭಾವಿಸಿದರು. ರಾಜಕೀಯ ವಾತಾವರಣ, ರಾಜಕಾರಣಿಗಳ ಸಭೆಗಳನ್ನು ಮಬ್ಬಿನಂತೆ ಮುಸುಕಿ ಅವರ ನಿರ್ಧಾರಗಳ ಮೇಲೆ ಪ್ರಭಾವ ಬೀರಿತು.

ಗಾಂಧಿಯ ಅನುಮಾನಗಳು ಮಬ್ಬನ್ನು ಭಾರವಾಗಿ ಮಾಡಿತು. ಆದರೆ ಬ್ರಿಟಿಷ್ ಯೋಜನೆಯನ್ನು ಕಾಂಗ್ರೆಸ್ ತಿರಸ್ಕರಿಸಲು ಆತನು ಅವಕಾಶ ಕೊಡಲಿಲ್ಲ. ಅದನ್ನು ಒಪ್ಪಬೇಕೆಂದು ಒತ್ತಾಯಮಾಡಿದನು. ಬುದ್ಧಿ, ಭಾವನೆಗೆ ಒತ್ತಾಸೆ ಕೊಡದಿದ್ದುದರಿಂದ ತನ್ನ ಸಂದೇಹಗಳಿಗೆ ಅಡಿಗಲ್ಲಿಲ್ಲವೆಂದು ಆತನು ಹೇಳಿದನು. ಅದರಂತೆ ಕಾಂಗ್ರೆಸ್ ರಾಜ್ಯ ವ್ಯವಸ್ಥಾಸಭೆಯಲ್ಲಿ ಭಾಗವಹಿಸಲು ಒಪ್ಪಿಕೊಂಡಿತು. ಆದರೆ ಮಹಾತ್ಮನ ಸಂದೇಹಗಳು ಬೇರೆಯವರ ಮಿದುಳಿನಲ್ಲಿ ನಿಂತವು. ಜುಲೈ ಪ್ರಾರಂಭದಲ್ಲಿ ನೆಹ್ರು ಒಂದು ಪತ್ರಿಕಾ ಪ್ರತಿನಿಧಿಗಳ ಸಮ್ಮೇಳನದಲ್ಲಿ ಕಾಂಗ್ರೆಸ್ ದೇಶದ ಮೂರು ಭಾಗಗಳ ರಾಜ್ಯ ವ್ಯವಸ್ಥಾಸಭೆಗಳಲ್ಲಿ ಭಾಗವಹಿಸುವುದಿಲ್ಲವೆಂದು

ಹೇಳಿದನು. ಇದರಿಂದ ೧೯೪೬ ಮೇ ೧೬ರ ಬ್ರಿಟಿಷ್ ನಿಯೋಗದ ಯೋಜನೆ ಮುರಿದು ಬಿದ್ದಿತು. ಜಿನ್ನಾ ತನ್ನ ಒಪ್ಪಿಗೆಯನ್ನು ಹಿಂದಕ್ಕೆ ತೆಗೆದುಕೊಳ್ಳಲು ಅನುಕೂಲವಾಯಿತು.

ಈಗ ನೋಡಿದಲ್ಲಿ, ಬ್ರಿಟಿಷ್ ಯೋಜನೆ, ಗಾಂಧಿ, ನೆಹ್ರೂ, ಕಾಂಗ್ರೆಸ್ ನಿರೀಕ್ಷಿಸಿದುದಕ್ಕಿಂತ ಉತ್ತಮವಾಗಿತ್ತು. ಇಂಡಿಯಾ ದೇಶ ವನ್ನು ಇಬ್ಭಾಗ ಮಾಡುವುದಕ್ಕಿಂತ ಸಾವಿರಪಾಲು ಮೇಲಾಗಿತ್ತು. ಆ ಯೋಜನೆ ಕಾರ್ಯಗತವಾಗುವುದು ಅಸಾಧ್ಯವೆಂದು ವಾದಿಸಬಹುದು. ದೊಡ್ಡ ಪಾಕಿಸ್ತಾನವಾಗುತ್ತಿತ್ತೆನ್ನಬಹುದು. ಆದರೆ ರಾಜಕೀಯದಲ್ಲಿ ಹೀಗೆ ನಡೆಯುತ್ತಿತ್ತೆಂದು ಹೇಳಲು ಸಾಧ್ಯವಿಲ್ಲ. ಮುಖ್ಯ ಅಂಶವೇನೆಂದರೆ ಸರಿಪಡಿಸಿ ಉತ್ತಮಗೊಳಿಸಬಹುದಾಗಿದ್ದ ೧೯೪೬ರ ಮೇ ತಿಂಗಳಿನ ಬ್ರಿಟಿಷ್ ಯೋಜನೆ ಒಂದು ಕೇಂದ್ರ ಸರ್ಕಾರವನ್ನು ಒಳಗೊಂಡಿದ್ದ ಐಕ್ಯತೆಗೆ ಅವಕಾಶ ಕೊಟ್ಟಿತ್ತು. ಅನಂತರ ಕತ್ತರಿಸಿದುದರ ಪರಿಣಾಮವಾಗಿ ಘೋರ ಕೃತ್ಯಗಳನ್ನು ತಪ್ಪಿಸಬಹುದಾಗಿತ್ತು.

ಜಿನ್ನಾ ಐಕ್ಯ ಇಂಡಿಯಾದಲ್ಲಿ ಒಂದು ಸಂಯುಕ್ತ ಸರ್ಕಾರ ನಡೆಯಲು ಒಪ್ಪುತ್ತಿದ್ದನೆಂಬುದು ಸಂದೇಹಾಸ್ಪದವಾದ ವಿಚಾರ. ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗಿಗೆ ಪ್ರಾತಿನಿಧ್ಯ ಕೊಟ್ಟು ತಾತ್ಕಾಲಿಕ ಸಂಯುಕ್ತ ಸರ್ಕಾರ ಸ್ಥಾಪಿಸಬೇಕೆಂದು ಲಾರ್ಡ್ ವೇವೆಲ್ ಪ್ರಯತ್ನಿಸುತ್ತಿದ್ದನು. ಮಂತ್ರಿ ಮಂಡಲದ ಮುಸ್ಲಿಮರನ್ನೆಲ್ಲಾ ತಾನೇ ಚುನಾಯಿಸಬಹುದಾದರೆ ಆಗ ಬಹುದೆಂದು ಜಿನ್ನಾ ಒಪ್ಪಿದನು. ಕಾಂಗ್ರೆಸ್ ತಾನು ಮತೀಯವೆಂದು ಎಂದೂ ಒಪ್ಪಿಕೊಂಡಿರಲಿಲ್ಲವಾದುದರಿಂದ ಈ ಕರಾರಿಗೆ ಒಪ್ಪಲಿಲ್ಲ. ಅದ ರಲ್ಲೂ ಅಧ್ಯಕ್ಷ ಅಜಾದರಂತೆ ಪ್ರಮುಖ ಮುಸ್ಲಿಂ ಸದಸ್ಯರಿದ್ದರು. ಜಿನ್ನಾ ಮಾತಿಗೆ ಒಪ್ಪಿದರೆ ಆತನು ಇಂಡಿಯಾ ದೇಶದ ಎಲ್ಲಾ ಮುಸ್ಲಿಮರ ಪ್ರತಿ ನಿಧಿಯೆಂದೂ, ಮತೀಯವಾಗಿ ಎರಡು ಭಾಗವಾಗಿದ್ದುದರಿಂದ ಇಂಡಿಯಾ ರಾಜಕೀಯವಾಗಿಯೂ, ಹಾಗಾಗಬಹುದೆಂದೂ ಒಪ್ಪಿಕೊಂಡಂತಾಗುತ್ತಿತ್ತು.

ಕಾಂಗ್ರೆಸ್ಸಿನ ಈ ಸಮರ್ಪಕವಾದ ಆಕ್ಷೇಪಣೆಗೆ ವೇವೆಲ್ ಒಪ್ಪಿ, ಎರಡು ಪಂಗಡಗಳೂ ಪ್ರತಿನಿಧಿಗಳ ಪಟ್ಟಿ ಕೊಡಬೇಕೆಂದೂ, ಒಂದು ಪಕ್ಷ ಇನ್ನೊಂದರ ಪ್ರತಿನಿಧಿಯನ್ನು ನಿರಾಕರಿಸುವಂತಿಲ್ಲವೆಂದೂ ಹೇಳಿದನು.

ಇದಕ್ಕೆ ಜಿನ್ನಾ ಒಪ್ಪಲಿಲ್ಲ. ೧೯೪೬ರ ಆಗಸ್ಟ್ ೧೨ರಲ್ಲಿ ವೇವೆಲ್ ನೆಹ್ರೂವನ್ನು ಸರ್ಕಾರ ರೂಪಿಸುವಂತೆ ಕೇಳಿದನು. ನೆಹ್ರೂ ಜಿನ್ನಾ ಬಳಿಗೆ ಹೋಗಿ ಮಂತ್ರಿ ಮಂಡಲದಲ್ಲಿ ಯಾವ ಸ್ಥಾನ ಬೇಕಾದರೂ ಆರಿಸಿಕೊಳ್ಳುವಂತೆ ಹೇಳಿದನು. ಜಿನ್ನಾ ಮುಖ್ಯ ಮಂತ್ರಿಯ ಸ್ಥಾನವಾಗಲಿ, ರಕ್ಷಣಾ ಮಂತ್ರಿ ಸ್ಥಾನವಾಗಲಿ ತೆಗೆದುಕೊಳ್ಳಬೇಕೆಂದು ಗಾಂಧಿ ಹೇಳಿದನು. ಜಿನ್ನಾ ನಿರಾಕರಿಸಿದನು. ೫ ಜನ ಹಿಂದುಗಳು, ಒಬ್ಬ ಹರಿಜನ, ಇಬ್ಬರು ಮುಸ್ಲಿಮರು, ಒಬ್ಬ ಸಿಕ್, ಒಬ್ಬ ಕ್ರಿಶ್ಚಿಯನ್, ಒಬ್ಬ ಪಾರ್ಸಿಗಳನ್ನೊಳಗೊಂಡ ಮಂತ್ರಿಮಂಡಲವನ್ನು ನೆಹ್ರು ರಚಿಸಿದನು.

ಆಗಸ್ಟ್ ೧೬ನ್ನು ಜಿನ್ನಾ "ನೇರ ಕಾರ್ಯಾಚರಣೆಯ ದಿನ" (Direct action day) ಎಂದು ಘೋಷಿಸಿದನು. ಕಲ್ಕತ್ತಾದಲ್ಲಿ ನಾಲ್ಕು ದಿನ ಗಲಭೆಗಳುಂಟಾಗಿ, ಲಾರ್ಡ್ ಪೆಥಿಕ್ ಲಾರೆನ್ಸ್ ಹೇಳಿದಂತೆ "೫ ಸಾವಿರ ಸಾವು, ೧೫,೦೦೦ ಜನರಿಗೆ ಗಾಯಗಳೂ" ಆದುವು. ಕೆಲವು ದಿನಗಳಾದ ಮೇಲೆ ನೆಹ್ರೂ ನಿಯಮಿಸಿದ್ದ ಒಬ್ಬ ಮುಸ್ಲಿಂ ಮಂತ್ರಿಯನ್ನು ಸಿಮ್ಲಾ ಬಳಿ ಅಡ್ಡಹಾಕಿ ಏಳುಸಲ ಯಾರೋ ತಿವಿದರು. ಬ್ರಿಟಿಷ್ ಅಧಿಕಾರ ವೃತ್ತ, "ಇದು ರಾಜಕೀಯ ಪ್ರಸಂಗ," ಎಂದಿತು.

ಸೆಪ್ಟೆಂಬರ್ ೨ನೇ ತಾರೀಖು ನೆಹ್ರು ಇಂಡಿಯಾದ ಮುಖ್ಯ ಮಂತ್ರಿಯಾದನು. ಜಿನ್ನಾ ಅದು ದುಃಖದ ದಿನವೆಂದು ಘೋಷಿಸಿ, ಮುಸ್ಲಿಮರು ಕಪ್ಪು ಬಾವುಟಗಳನ್ನು ಪ್ರದರ್ಶಿಸಬೇಕೆಂದು ಹೇಳಿದನು. ಮಾರನೆಯ ದಿನ ಬೊಂಬಾಯಿಯಲ್ಲಿ, "ರಷ್ಯನರಿಗೆ ಇಂಡಿಯಾದಲ್ಲಿ, ಪ್ರೇಕ್ಷಕರಿಗಿರುವುದಕ್ಕಿಂತ ಹೆಚ್ಚು ಆಸಕ್ತಿಯಿರಬಹುದು. ಅವರು ಇಂಡಿಯಾದಿಂದ ಬಹಳ ದೂರ ಕೂಡ ಇಲ್ಲ," ಎಂದನು. ತನ್ನ ಹಟ ಸಾಧಿಸಲು ಆತನು ಯಾವುದಕ್ಕೂ ಹೇಸುವಂತಿರಲಿಲ್ಲ. ಮುಸ್ಲಿಮರ ಕಪ್ಪು ಬಾವುಟಗಳು ಹಿಂದುಗಳ ರೋಷವನ್ನುಕ್ಕಿಸಿತು. ಬೊಂಬಾಯಿಯಲ್ಲಿ ಗುಂಡಿನ ಹೊಡೆತ, ಚಾಕುವಿನ ತಿವಿತಗಳು ಆರಂಭವಾಗಿ, ಪಂಜಾಬು, ಬಿಹಾರ, ಬಂಗಾಳಗಳಿಗೆ ವ್ಯಾಪಿಸಿದುವು. ಮೊದಲು ಒಪ್ಪಿದರೂ ಈಗ ರಾಜ್ಯ ವ್ಯವಸ್ಥಾ ಸಭೆಯನ್ನು ತಾನು ಬಹಿಷ್ಕರಿಸುವುದಾಗಿ ಮುಸ್ಲಿಂ ಲೀಗ್ ಘೋಷಿಸಿತು.

ರಾಜ್ಯದಲ್ಲಿ ಅಂತರ್ಯುದ್ಧ ಆರಂಭವಾಗುವ ಸ್ಥಿತಿ ಬಂದಿತೆಂದು

ಗಾಂಧಿ ಹೇಳಲು ವೇವೆಲ್ ಗಾಬರಿ ಪಟ್ಟು ಜಿನ್ನಾ ಕಡೆಯವರನ್ನು ನೆಹ್ರೂ ಸರ್ಕಾರದೊಳಕ್ಕೆ ತರಲು ಪ್ರಯತ್ನವನ್ನು ಇಮ್ಮಡಿಗೊಳಿಸಿದನು. ಕಡೆಗೆ ಜಿನ್ನಾ ಒಪ್ಪಿ ೪ ಜನ ಮುಸ್ಲಿಮರನ್ನೂ, ಗಾಂಧಿ ದ್ವೇಷಿಯಾದ ಒಬ್ಬ ಹರಿ ಜನನನ್ನೂ ಮಂತ್ರಿಮಂಡಲಕ್ಕೆ ಕಳುಹಿಸಿದನು. ಮುಸ್ಲಿಂ ಲೀಗ್ ಮುಸ್ಲಿಮರನ್ನು ಮಾತ್ರ ಪ್ರತಿನಿಧಿಸುವುದೆಂದು ವಾದಿಸುತ್ತಿದ್ದ ಜಿನ್ನಾ ಕಾಂಗ್ರೆಸ್ ಮತ್ತು ಹಿಂದುಗಳ ಮನಸ್ಸನ್ನು ನೋಯಿಸಲು ಆ ಅಸ್ಪೃಶ್ಯನನ್ನು ಆರಿಸಿ ಕಳುಹಿಸಿದನು. ಇದೇ ಜಿನ್ನಾ ಆಸೆ. ಲೀಗಿನ ನಾಯಕರಲ್ಲೊಬ್ಬನಾದ ಲಿಯಾಖತ್ ಅಲಿಖಾನ್ ನೆಹ್ರೂ ಸರ್ಕಾರವನ್ನು ತಾವು ಇಂಡಿಯಾ ಸರ್ಕಾರವೆಂದು ಒಪ್ಪಿಕೊಳ್ಳಲಿಲ್ಲವೆಂದೂ, ಅದಕ್ಕೆ ವಿಧೇಯತೆ ತೋರುವುದಿಲ್ಲವೆಂದೂ ಹೇಳಿದನು. ಒಪ್ಪಿಕೊಳ್ಳಲೂ ಇಲ್ಲ. ಅದನ್ನು ನಾಶಪಡಿಸಲು ಪಣ ತೊಟ್ಟರು. ಸರ್ಕಾರ ಮತದ್ವೇಷದಿಂದ ಒಡಕಾಗಿತ್ತು.

ಮಂತ್ರಿಮಂಡಲದ ಕಾಂಗ್ರೆಸ್ ಸದಸ್ಯರು ಅವರ ಸಹಾಯಕರು ಗುಡಿಸಲಿಗೆ ಬಂದು ಗಾಂಧಿಯ ಬುದ್ಧಿವಾದ ಕೇಳುತ್ತಿದ್ದರು. ಆತನು ಮುಖ್ಯ ಮಂತ್ರಿಗಿಂತ ಮೇಲ್ತರದ ಮುಖ್ಯ ಮಂತ್ರಿ. ಆತನ ದೃಷ್ಟಿ ಮುಖ್ಯ ವಾದದ ಕಡೆಗಿತ್ತು; ಹಿಂದೂ ಮುಸ್ಲಿಂ ಸಂಬಂಧ ಕೊಲೆಗಳ ವಿಚಾರ ಕೇಳಿ, "ಹಿಂದುಗಳು ಪ್ರತೀಕಾರಕ್ಕೆಚ್ಚೆಸದೆ ಸತ್ತರೂ ನನಗೆ ಸಂತೋಷ," ಎಂದನು. ವಿಷಪೂರಿತ ರಾಜಕೀಯ ಪರಿಸ್ಥಿತಿ ಆತನ ದೃಷ್ಟಿಯನ್ನು ಮಿಕ್ಕ ಸಮಸ್ಯೆಗಳಿಂದ ತಿರುಗಿಸಲಿಲ್ಲ. ಅಂಟುಜಾಡ್ಯಗಳು ಹರಡಿದಾಗ, ಹರಿಜನರು ಭಾವಿ ಮುಟ್ಟಲು ಅವಕಾಶ ಕೊಡದಿರಲು, ತನ್ನ ಅಸಮಾಧಾನ ಸೂಚಿಸಿದನು. ಉಪ್ಪಿನ ತೆರಿಗೆಯನ್ನು ತೆಗೆಯಬೇಕೆಂದು ಹೇಳಿದನು. ಅಭ್ಯಾಸವಿಲ್ಲದ ಭಾರ ಹೊತ್ತಿದ್ದ ಮಂತ್ರಿಗಳ ವಿಚಾರದಲ್ಲಿ ಸಹಾನುಭೂತಿಯಿರಬೇಕೆಂದು ಜನರನ್ನು ಕೇಳಿಕೊಂಡನು. ಒಬ್ಬ ಕುಷ್ಠರೋಗಿ ಆಶ್ರಮಕ್ಕೆ ಭಿಕ್ಷೆಗೆ ಬರಲು ಆತನಿಗೆ ಔಷಧಿ ಹಾಕಿದನು. ಕುಷ್ಠರೋಗದ ವಿಚಾರವಾಗಿ ಬರೆದು, ಸಾಮೂಹಿಕ ಪ್ರಾರ್ಥನೆಯ ಅಗತ್ಯವನ್ನು ತಿಳಿಸಿದನು.

ಹಿಂದೂ, ಮುಸ್ಲಿಂ ದ್ವೇಷದ ಜ್ವಾಲೆಯಿಂದ ಆತನು ಬಹಳವಾಗಿ ನೊಂದನು. "ಈ ದುಃಖವನ್ನು ನಾನು ಸಮತಾಭಾವದಿಂದ ಅನುಭವಿಸಲಾರನೇಕೆ? ೧೨೫ ವರ್ಷ ಬಾಳುವ ಸಂಯಮ ನನ್ನಲ್ಲಿಲ್ಲವೆಂದು ಕಾಣು

ತ್ತದೆ." ಆದರೂ ಮಾನವರಲ್ಲಿ ಆತನ ನಂಬಿಕೆ ಕಡಿಮೆಯಾಗದೆ, ಅಲ್ಪಾಹಾರದಿಂದಲೇ ತೃಪ್ತವಾಗುತ್ತಿತ್ತು. "ಬೊಂಬಾಯಿಯಲ್ಲಿ ಒಬ್ಬ ಹಿಂದು ಒಬ್ಬ ಮುಸ್ಲಿಂ ಸ್ನೇಹಿತನಿಗೆ ಆಸರೆ ಕೊಟ್ಟನು. ಇದರಿಂದ ರೇಗಿದ ಹಿಂದೂ ಗುಂಪು ಅವನ ತಲೆಯನ್ನು ಕೇಳಿತು. ಹಿಂದು ಸ್ನೇಹಿತನನ್ನು ಬಿಟ್ಟು ಕೊಡಲು ಒಪ್ಪಲಿಲ್ಲ. ಇಬ್ಬರೂ ಮೃತ್ಯುವಿನ ಆಲಿಂಗನೆಯಲ್ಲಿ ಸತ್ತರು. ಈ ಹುಚ್ಚಿನ ನಡುವೆ ಒಳ್ಳೆಯತನದ ಉದಾಹರಣೆ ಇದೊಂದೇ ಅಲ್ಲ. ಕಲ್ಕತ್ತದಲ್ಲಿ ಈಚೆಗೆ ನಡೆದ ರಕ್ತಸ್ನಾನದಲ್ಲಿ ಜೀವ ಭಯ ಬಿಟ್ಟು ಮುಸ್ಲಿಮರು ಹಿಂದೂಗಳಿಗೂ, ಹಿಂದೂಗಳು ಮುಸ್ಲಿಮರಿಗೂ ಆಶ್ರಯ ಕೊಟ್ಟ ಕತೆಗಳೆಷ್ಟೋ ಇವೆ," ಎಂದು ಪತ್ರಿಕೆಯಲ್ಲಿ ಬರೆದರು. ಇದರಿಂದ ಆತನ ಆಸೆ ಅಳಿಯಲಿಲ್ಲ. "ಮನುಷ್ಯನಲ್ಲಿ ಎಲ್ಲಿಯೋ, ಯಾವಾಗಲೋ, ದೇವತ್ವದ ಕುರುಹು ಕಾಣದಿದ್ದರೆ ಮಾನವರು ನಾಶವಾಗುವರು," ಎಂದನು.

ಅಂದಿನಿಂದ ಸಾಯುವವರೆಗೂ ಗಾಂಧಿ ಮಾನವರಲ್ಲಿ ದೈವತ್ವವನ್ನೂ, ಇಂಡಿಯಾದಲ್ಲಿ ಬುದ್ಧಿ ಕಳೆದು ಕೊಳ್ಳದವರನ್ನೂ ಹುಡುಕುತ್ತಲೇ ಇದ್ದನು. ಪೂರ್ವ ಬಂಗಾಳದ ನೌಖಾಲಿ, ತ್ರಿಪುರ ಪ್ರಾಂತ್ಯಗಳಲ್ಲಿ ಮುಸ್ಲಿಮರು ಕೊಲೆ, ಜಾತಿ ಕೆಡಿಸುವುದು, ಸ್ತ್ರೀಯರ ಮಾನಭಂಗ ಮಾಡುವುದು ಮುಂತಾದ ಸುದ್ದಿಗಳು ಬರುತ್ತಿದ್ದವು. ಗಲಭೆಗಳು ಹಳ್ಳಿಗಳಿಗೂ ಹರಡುತ್ತಿದ್ದುದು ಗಾಂಧಿಗೆ ಬೇಸರವನ್ನುಂಟುಮಾಡಿತು. ಆತನು ನೌಖಾಲಿಗೆ ಹೋಗಲು ನಿರ್ಧರಿಸಿದನು. ಸ್ನೇಹಿತರು ತಡೆಯಲು ಪ್ರಯತ್ನಿಸಿದರು. ಆತನ ಆರೋಗ್ಯ ಚೆನ್ನಾಗಿಲ್ಲವೆಂದೂ, ಹೊಸ ದೆಹಲಿಯಲ್ಲಿ ಸರ್ಕಾರದ ಕಾಂಗ್ರೆಸ್ ಸದಸ್ಯರಿಗೆ ಆತನ ಬುದ್ಧಿವಾದದ ಆವಶ್ಯಕತೆಯಿದೆಯೆಂದೂ ಹೇಳಿದರು. "ಅಲ್ಲಿಗೆ ಹೋಗದಿದ್ದರೆ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ," ಎಂದು ಆತನು ಉತ್ತರವಿತ್ತನು. ಯಾರೂ ರೈಲ್ವೆ ನಿಲ್ದಾಣಕ್ಕೆ ಬಂದು ತನ್ನ ಆಶೀರ್ವಾದ ಕೋರಕೂಡದೆಂದೂ, ಅದನ್ನು ನೀಡುವ ಮನಸು ತನಗಿಲ್ಲವೆಂದೂ ಹೇಳಿದನು. ಗುಂಪು ಗುಂಪೇ ಬಂದಿತು. ಬಂಗಾಳದ ದಾರಿಯಲ್ಲಿ ಪ್ರತಿ ನಿಲ್ದಾಣದಲ್ಲೂ ಜನರ ಗುಂಪು ತುಂಬಿರುತ್ತಿತ್ತು. ಗಾಡಿಗಳಲ್ಲಿ ಹತ್ತಿ, ಗಾಜುಗಳನ್ನೊಡೆದು ಗಲಾಟೆ ಮಾಡಿದರು. ರೈಲು ಹೊರಡದಂತೆ ಸರಪಣಿಯೆಳೆದು ನಿಲ್ಲಿಸುತ್ತಿದ್ದರು. ಒಂದು

ನಿಲ್ದಾಣದಲ್ಲಿ ರೈಲ್ವೆ ಅಧಿಕಾರಿಗಳು ನೀರಿನ ಕೊಳವೆಗಳನ್ನು ಗುಂಪಿನ ಮೇಲೆ ತಿರುಗಿಸಿ, ಗಾಂಧಿಯು ಗಾಡಿಯ ತುಂಬಾ ನೀರು ತುಂಬಿದರು. ಕಲ್ಕತ್ತೆಗೆ ಐದು ಘಂಟೆ ತಡವಾಗಿ, ಆಯಾಸದಿಂದ, ವ್ಯಸನದಿಂದ ಸೇರಿದನು.

ಮಹಾತ್ಮ ಬರುವುದಕ್ಕೆ ಕೆಲವು ದಿನಗಳ ಕೆಳಗೆ ಜಾತಿ ಗಲಭೆಗಳಲ್ಲಿ ೩೨ ಜನ ಕಲ್ಕತ್ತೆಯಲ್ಲಿ ಕೊಲ್ಲಲ್ಪಟ್ಟಿದ್ದರು. ಬಂಗಾಳದ ಮುಸ್ಲಿಂ ಮುಖ್ಯ ಮಂತ್ರಿ ಶ್ರೀ ಸುಹ್ರವರ್ದಿಯೊಡನೆ ಗಾಂಧಿ ಪಟ್ಟಣದಲ್ಲಿ ಗಲಭೆಗಳಾದ ಪ್ರದೇಶಗಳಲ್ಲೆಲ್ಲಾ ಸಂಚರಿಸಿದನು. ಜನವಿಹೀನವಾದ ರಸ್ತೆಗಳಲ್ಲಿ ತಿಪ್ಪೆ ಬಿದ್ದಿತ್ತು; ಸುಟ್ಟಮನೆಗಳೂ, ಮುಚ್ಚಿದ ಅಂಗಡಿಗಳೂ ಸಾಲುಗಟ್ಟಿದ್ದವು. “ಮನುಷ್ಯನನ್ನು ಮೃಗಕ್ಕಿಂತ ಹೀನ ಮಾಡುವ ಜನರ ಹುಚ್ಚನ್ನು ನೋಡಿ” ಗಾಂಧಿಗೆ ತಲೆತಿರುಗಿದಂತಾಯಿತು. ಆದರೂ ಆತ ಸ್ಥೈರ್ಯ ಕೆಡಲಿಲ್ಲ. ಕಲ್ಕತ್ತ, ನೌಖಾಲಿಗಳಲ್ಲಿ ನಿಲ್ಲಲು ನಿರ್ಧರಿಸಿದನು. ಒಂದು ಪ್ರಾರ್ಥನಾ ಸಭೆಯಲ್ಲಿ, “ಗಲಭೆಗಳ ಕಡೆಯ ಕಿಡಿ ಆರುವವರೆಗೂ ನಾನು ಬಂಗಾಳವನ್ನು ಬಿಟ್ಟು ಹೋಗುವುದಿಲ್ಲ. ಇಲ್ಲಿ ನಾನು ವರ್ಷಕ್ಕಿಂತ ಹೆಚ್ಚು ಕಾಲ ನಿಲ್ಲಬಹುದು. ಅಗತ್ಯಬಿದ್ದರೆ ಇಲ್ಲೇ ಸಾಯುತ್ತೇನೆ. ಸೋಲನ್ನು ಮಾತ್ರ ಒಪ್ಪಿಕೊಳ್ಳುವುದಿಲ್ಲ. ಜನರು ನನ್ನ ಕಡೆ ಆಸೆಯಿಂದ ನೋಡಿದರೆ, ಪ್ರತಿಫಲವಾಗಿ ನಾನೇನೂ ಮಾಡದಿದ್ದರೆ, ನನ್ನ ಕಣ್ಣು ಸಾವಿನಲ್ಲಿ ಮುಚ್ಚಿ ಹೋಗುವುದೇ ಲೇಸು,” ಎಂದು ಹೇಳಿದನು.

## ೨೮. ಸ್ವಾತಂತ್ರ್ಯದ ಮುನ್ನ.

ಆತನ ವಿಸ್ಮಯಕಾರಕ ಜೀವನದಲ್ಲಿ ಅತ್ಯಂತ ವಿಸ್ಮಯಕರವಾದ ಅಧ್ಯಾಯವಾದ ನೌಖಾಲಿಯ ಪ್ರಯಾಣದ ಸಿದ್ಧತೆಯಾಗುತ್ತಿರುವಾಗ ಬಿಹಾರದಲ್ಲಿ ಗಲಭೆಗಳಾದ ಕೆಟ್ಟ ವರ್ತಮಾನ ಕಲ್ಕತ್ತೆಯಲ್ಲಿದ್ದ ಗಾಂಧಿಗೆ ಮುಟ್ಟಿತು. ಅಲ್ಲಿ ೩೧೦೦೦,೦೦೦ ಹಿಂದೂಗಳೂ, ೫೦೦೦,೦೦೦ ಮುಸ್ಲಿಮರೂ ವಾಸಿಸುತ್ತಿದ್ದರು. ನೌಖಾಲಿಯ ಮುಸ್ಲಿಂ ದೌರ್ಜನ್ಯಗಳು ಬಿಹಾರಿ ಹಿಂದುಗಳಿಗೆ ರೋಷವನ್ನುಂಟು ಮಾಡಿದವು. ಅಕ್ಟೋಬರ್ ೨೫ ನ್ನು, “ನೌಖಾಲಿಯ ದಿನ” ವೆಂದು ಕರೆದರು. ಮಹಾತ್ಮನ ಪಾದಗಳ ಮೇಲೆ ಬೀಳಲು ಸಿದ್ಧರಾಗಿದ್ದ ಕಾಂಗ್ರೆಸ್ ನಾಯಕರ ಭಾಷಣಗಳು, ವರ್ತಮಾನ

ಪತ್ರಿಕೆಗಳಲ್ಲಿ ಹಿಂದೂ ಕೊಲೆಗಳನ್ನು ಉತ್ಪ್ರೇಕ್ಷೆಮಾಡಿ ಬರೆದಿದ್ದ ವರದಿಗಳು ಹಿಂದುಗಳಲ್ಲಿ ಹುಚ್ಚೆಬ್ಬಿಸಿತು. ಸಾವಿರಾರು ಜನ ರಸ್ತೆಗಳಲ್ಲಿ, "ರಕ್ತಕ್ಕೆ ರಕ್ತ," ಎಂದು ಕೂಗುತ್ತಾ ತಿರುಗಿದರು. ಮೂರನೆಯ ವಾರ, ಲಂಡನ್ ಟೈಮ್ಸ್ ಪತ್ರಿಕೆಯ ದೆಹಲಿ ವರದಿಕಾರರ ಪ್ರಕಾರ, ಬಿಹಾರದಲ್ಲಿ ಗಲಭೆಕಾರರಿಂದ ಕೊಲ್ಲಲ್ಪಟ್ಟವರ ಸಂಖ್ಯೆ ೪೫೮೦. ಒಟ್ಟು ಹತ್ತು ಸಾವಿರಕ್ಕೂ ಹೆಚ್ಚು ಜನ, ಅದರಲ್ಲೂ ಹೆಚ್ಚು ಜನ ಮುಸಲ್ಮಾನರು ಕೊಲ್ಲಲ್ಪಟ್ಟರೆಂದು ಗಾಂಧಿ ಹೇಳಿದರು. ತೀವ್ರಕೋಪ, ಹೆಚ್ಚು ಜನಸಂಖ್ಯೆಯುಳ್ಳ ಇಂಡಿಯಾದಲ್ಲಿ ಕೊಲೆಗಳ ಸಂಖ್ಯೆ ವಿಪರೀತವಾಗುತ್ತಿದ್ದುದು ಆಶ್ಚರ್ಯವೇನೂ ಅಲ್ಲ.

ದುಃಖದಿಂದ ತಲೆಬಾಗಿ ಗಾಂಧಿ ಬಿಹಾರಿಗಳಿಗೆ ಒಂದು ಸಂದೇಶ ಕೊಟ್ಟನು. "ಬಿಹಾರಿ ಹಿಂದುಗಳ ಅತ್ಯಾಚಾರ, ಕಾಯ್ದೆ ಅಜಾಂ ಜಿನ್ನಾ ಕಾಂಗ್ರೆಸ್ ಹಿಂದೂ ಸಂಸ್ಥೆಯೆಂದು ಅವಹೇಳನ ಮಾಡಿದುದನ್ನು ನಿಜವೆನ್ನಿಸಿದೆ. ಕಾಂಗ್ರೆಸ್ಸಿನ ಗೌರವವನ್ನು ಹೆಚ್ಚಿಸಲು ದುಡಿದ ಬಿಹಾರ ಅದರ ಗೋರಿಯನ್ನಗೆಯದಿರಲಿ". ಬಿಹಾರಿನ ಕೊಲೆಗಳಿಗೆ ಪ್ರಾಯಶ್ಚಿತ್ತವಾಗಿ ಗಾಂಧಿ, "ಸಾಧ್ಯವಾದಷ್ಟು ಕಡಮೆ ಆಹಾರ ತಿನ್ನುವುದಾಗಿಯೂ, ಬಿಹಾರಿಗಳು ನಡತೆಯನ್ನು ಸರಿಪಡಿಸಿಕೊಳ್ಳದಿದ್ದರೆ ಆಮರಣಾಂತ ಉಪವಾಸ ಮಾಡುವುದಾಗಿಯೂ" ಹೇಳಿದನು. ಈ ಸಮಯದಲ್ಲಿ ಪ್ರಧಾನ ಮಂತ್ರಿ ನೆಹ್ರೂ, ಪಟೇಲ್, ಲಿಯಾಖತ್ ಆಲಿಖಾನ್, ಅಬ್ದುರ್‌ರಬ್ ನಿಷ್ತಾರ್ ಮುಂತಾದವರು ಬಿಹಾರಕ್ಕೆ ವಿಮಾನದಲ್ಲಿ ಬಂದಿಳಿದರು. ತಾನು ಕೇಳಿದ ವರ್ತಮಾನದಿಂದ ರೋಷಗೊಂಡ ನೆಹ್ರೂ, ಕೊಲೆಗಳನ್ನು ನಿಲ್ಲಿಸದಿದ್ದರೆ ಬಿಹಾರಿನ ಮೇಲೆ ಬಾಂಬು ಹಾಕುವುದಾಗಿ ಹೇಳಿದನು. ಆದರೆ ಗಾಂಧಿ "ಅದೆಲ್ಲಾ ಬ್ರಿಟಿಷರ ಮಾರ್ಗ," ಎಂದು ಹೇಳಿದನು.

ಕೆಲವು ದಿನಗಳಾದ ಮೇಲೆ ಬಿಹಾರಿನ ಗಲಭೆಗಳು ತಗ್ಗಿ, ಕಲ್ಕತ್ತ ತಣ್ಣಗಾಯಿತು. ಗಾಂಧಿ, ಮುಸ್ಲಿಮರ ಹಿಂಸೆಯಿಂದ ಹಿಂದುಗಳು ಹೆದರಿ ಓಡುತ್ತಿದ್ದ ನೌಖಾಲಿಗೆ ಹೋದನು.

ಗಂಗಾ ಬ್ರಹ್ಮಪುತ್ರಾ ನದಿಗಳ ನೀರಿನಿಂದ ಜೌಗಾದ ನೌಖಾಲಿಗೆ ಹೋಗುವುದು ತುಂಬಾ ಕಷ್ಟ. ಕೆಲವು ಹಳ್ಳಿಗಳಿಗಂತೂ ದೋಣಿಗಳಲ್ಲೇ ಹೋಗಬೇಕು. ಬಂಗಾಳ ಪ್ರಾಂತ್ಯದಲ್ಲೇ ಇರುವ ಕಲ್ಕತ್ತದಿಂದ, ಗಾಂಧಿ

ಯಿದ್ದ ನೌಖಾಲಿಗೆ ಹೋಗಲು, ರೈಲು, ಹಡಗು, ಬೈಸಿಕಲ್, ದೋಣಿ, ನಡಿಗೆಗಳಲ್ಲಿ ಫಿಲಿಪ್ಸ್ ಟಾಲ್ಬಟ್ ಎಂಬ ಅಮೇರಿಕಾ ವಿದ್ಯಾರ್ಥಿ ನಾಲ್ಕು ದಿನ ಪ್ರಯಾಣ ಮಾಡಬೇಕಾಯಿತು. ಗಾಂಧಿ ಬೆಳಿಗ್ಗೆ ೪ ಘಂಟೆಗೆ ಎದ್ದು ಮೂರು ನಾಲ್ಕು ಮೈಲಿ ಬರಿಗಾಲಿನಲ್ಲಿ ಹತ್ತಿರವಿದ್ದ ಹಳ್ಳಿಗೆ ನಡೆದು ಹೋಗಿ ಅಲ್ಲಿನ ಜನರೊಡನೆ ಮೂರು ನಾಲ್ಕು ದಿನಗಳು ಮಾತನಾಡಿ, ಪ್ರಾರ್ಥನೆ ಮಾಡುತ್ತಾ ಇದ್ದು ಮುಂದಿನ ಹಳ್ಳಿಗೆ ಹೋಗುತ್ತಿದ್ದನು. ನೆರಳೀಯಲು ಒಪ್ಪಿದ ರೈತರೊಡನೆ ನಿಲ್ಲುತ್ತಿದ್ದನು. ಅಲ್ಲಿ ಹಣ್ಣು, ತರಕಾರಿ, ಸಿಕ್ಕಿದರೆ ಮೇಕೆಯ ಹಾಲನ್ನು ಕುಡಿಯುತ್ತಿದ್ದನು. ೧೯೪೬ರ ನವೆಂಬರ್ ೭ ರಿಂದ ೧೯೪೭ರ ಮಾರ್ಚ್ ೨ ರವರೆಗೂ ಇದೇ ಆತನ ದಿನಚರಿಯಾಗಿತ್ತು. ಆಗ ಆತನಿಗೆ ೭೭ ವರ್ಷಗಳು ಮುಗಿದಿದ್ದುವು. ಆ ನಾಲ್ಕು ತಿಂಗಳಲ್ಲಿ ಆತನು ೪೯ ಹಳ್ಳಿಗಳಲ್ಲಿ ವಾಸಮಾಡಿದನು.

ನಡೆಯುವುದೇ ತುಂಬಾ ಕಷ್ಟವಾಗಿತ್ತು. ಕಾಲಿನಲ್ಲಿ ಬೊಬ್ಬೆಗಳಾದವು. ಹಳ್ಳಿಗಳ ರಸ್ತೆಗಳಲ್ಲಿ ಆಗದವರು ಮುಳ್ಳುಗಳನ್ನು ಹರಡುತ್ತಿದ್ದರು. ಆತನು ಆಕ್ಷೇಪಿಸಲಿಲ್ಲ. ರಾಜಕೀಯ ನಾಯಕರಿಂದ ಅವರಿಗೆ ತಪ್ಪು ತಿಳಿವಳಿಕೆಯುಂಟಾಗಿದ್ದಿತೆಂದನು. ಅನೇಕ ಕಡೆ ಹಳ್ಳಿಯಿಂದ ಹಳ್ಳಿಗೆ ಹೋಗಬೇಕಾದರೆ ನಾಲ್ಕೈದು ಬೊಂಬುಗಳನ್ನು ಕಟ್ಟಿ ಮಾಡಿದ್ದ ಸೇತುವೆಗಳ ಮೇಲೆ ನಡೆದು ಹೋಗಬೇಕಾಗಿತ್ತು. ಕೆಲವು ಬಾರಿ ಕೈಯಿಂದ ಹಿಡಿದುಕೊಳ್ಳಲು ಕಂಬಿಯಿರುತ್ತಿತ್ತು; ಕೆಲವು ಬಾರಿ ಇರುತ್ತಿರಲಿಲ್ಲ. ಒಂದು ಬಾರಿ ಕಾಲುಜಾರಿ ಕೆಳಗೆ ಬೀಳುವುದರಲ್ಲಿದ್ದ ಗಾಂಧಿ, ಸ್ವಲ್ಪದರಲ್ಲಿ ತಪ್ಪಿಸಿಕೊಂಡನು. ಸೇತುವೆಗಳ ಮೇಲೆ ನಡೆಯಲು, ನೆಲಕ್ಕೆ ಸ್ವಲ್ಪ ಎತ್ತರದಲ್ಲಿ ನಿರ್ಮಿಸಿದ ಅಂತಹ ಸೇತುವೆಗಳ ಮೇಲೆ ನಡೆದು ಅಭ್ಯಾಸ ಮಾಡಿಕೊಳ್ಳುತ್ತಿದ್ದನು.

ಗಾಂಧಿ ಬೇಕೆಂದು ಈ ದೂರದ, ೨,೫೦೦,೦೦೦ ಜನರಿದ್ದ, ಶೇಕಡಾ ೮೦ ಭಾಗ ಮುಸ್ಲಿಮರಿದ್ದ ಪ್ರಾಂತ್ಯದ ದೈಹಿಕ, ಮಾನಸಿಕ, ಪ್ರತಿಭಟನೆಯನ್ನೆದುರಿಸಲು ಸಿದ್ಧನಾದನು. ಅನೇಕ ತಿಂಗಳುಗಳು ಬಿಡದೆ ಸಾಧಿಸಿದನು. ನೌಖಾಲಿಯಿಂದ ಡಿಸೆಂಬರ್ ೫ರಲ್ಲಿ, "ನನ್ನ ಈಗಿನ ಕೆಲಸ ಜೀವಮಾನದಲ್ಲೆಲ್ಲಾ ತುಂಬಾ ಕಠಿಣವಾದುದು ಮತ್ತು ತೊಡಕಾದುದು. ಯಾವ

ಅನಾಹುತವಾದರೂ ನಾನು ಸಿದ್ಧನಾಗಿದ್ದೇನೆ. 'ಮಾಡು ಅಥವ ಮಡಿ,' ಎಂಬುದನ್ನು ಇಲ್ಲಿ ಪ್ರಯೋಗಮಾಡಿ ನೋಡಬೇಕಾಗಿದೆ. 'ಮಾಡು,' ಎಂದರೆ ಹಿಂದು ಮುಸ್ಲಿಮರು ಶಾಂತಿ ಸೌಹಾರ್ದಗಳಿಂದ ಜತೆಯಲ್ಲಿ ಬದುಕುವಂತೆ ಮಾಡುವುದು. ಇಲ್ಲದಿದ್ದರೆ ಆ ಪ್ರಯತ್ನದಲ್ಲಿ ನಾನು ಮಡಿಯಬೇಕು," ಎಂದು ಗಾಂಧಿ ಬರೆದರು.

ಜತೆಯಲ್ಲಿದ್ದವರನ್ನೆಲ್ಲಾ ಬೇರೆ ಬೇರೆ ಕಡೆಗೆ ಕಳುಹಿಸಿದರು. ಡಾಕ್ಟರ್ ಸುಶೀಲಾ ನಯ್ಯರ್, ಸುಚೇತ ಕೃಪಲಾನಿ, ಕನುಗಾಂಧಿ, ಆತನ ಹೆಂಡತಿ, ಆಭಾ ಎಲ್ಲರನ್ನೂ ಬೇರೆಬೇರೆ, ದೂರವಾಗಿದ್ದ, ವಿಶ್ವಾಸ ರಹಿತವಾಗಿದ್ದ ಹಳ್ಳಿಗಳಲ್ಲಿರುವಂತೆ ಹೇಳಿದನು. ಪ್ಯಾರಿಲಾಲ್‌ಗೆ ಮಲೇರಿಯಾ ಬಂದು ತನ್ನ ಸಹೋದರಿಯನ್ನು ಜತೆಗೆ ಕಳುಹಿಸಬೇಕೆಂದು ಬರೆದಾಗ ಮಹಾತ್ಮ, "ಖಾಯಿಲೆ ಬಂದರೆ, ಅಲ್ಲೇ ವಾಸಿಮಾಡಿಕೊಳ್ಳಬೇಕು; ಇಲ್ಲದಿದ್ದರೆ ಸಾಯಬೇಕು. ಪ್ರಕೃತಿ ಚಿಕಿತ್ಸೆಯಿಂದ ಗುಣ ಹೊಂದಬೇಕು. ಡಾಕ್ಟರ್ ಸುಶೀಲ ತನ್ನ ಹಳ್ಳಿಯನ್ನು ನೋಡಿಕೊಳ್ಳಬೇಕು......"ಗಾಂಧಿ ತನ್ನ ವಿಚಾರದಲ್ಲೂ ಅದೇ ಕಠಿಣ ನಿಯಮಗಳನ್ನನುಸರಿಸಿದನು. ತನ್ನೊಡನೆ ನಿರ್ಮಲ್ ಕುಮಾರ್ ಬೋಸ್ ಎಂಬ ಮಾನವ ಶಾಸ್ತ್ರ ಅಧ್ಯಾಪಕನನ್ನು ಮಾತ್ರ ಇಟ್ಟುಕೊಂಡಿದ್ದನು. ಈತನೂ ಗಾಂಧಿಯ ಆಶ್ರಮದಲ್ಲಿದ್ದಾತನೇ. ಬಂಗಾಳಿ ಭಾಷೆ ತಿಳಿಸುವುದರಲ್ಲಿ ಈಗ ಗಾಂಧಿಗೆ ಸಹಾಯಕನಾದನು. ಕಾಗದ ಪತ್ರಗಳನ್ನು ಬರೆಯಲು ಪರಶುರಾಂ ಎಂಬಾತನು ಮತ್ತು ಮನುಗಾಂಧಿ ಇದ್ದರು. ಅಡಿಗೆ ಮಾಡಲು, ಗುಡಿಸಲನ್ನು ಶುದ್ಧಿ ಮಾಡಲು ಮಹಾತ್ಮ ಆಕೆಗೆ ಸಹಾಯಮಾಡುತ್ತಿದ್ದನು. ತನ್ನ ಮೈಯ್ಯನ್ನು ತಾನೇ ನೀವಿಕೊಳ್ಳುತ್ತಿದ್ದನು.

ಕೆಲವುವೇಳೆ ಆತನೂ ಆಸೆಯ ಗಡಿಯನ್ನು ಮುಟ್ಟಿರಬೇಕು. ಒಂದು ದಿನ ತನ್ನಲ್ಲಿ ತಾನೇ ಗಾಂಧಿ, "ನಾನೇನು ಮಾಡಲಿ ? ಏನು ಮಾಡಲಿ ?" ಎಂದುಕೊಳ್ಳುತ್ತಿದ್ದುದನ್ನು ಪ್ರೊಫೆಸರ್ ಬೋಸ್ ಕೇಳಿದರು.

ಬಂಗಾಳದ ಮುಸ್ಲಿಂ ಸರ್ಕಾರದ ಪ್ರಕಾರ ನೌಖಾಲಿ ಮತ್ತು ತ್ರಿಪುರ ಜಿಲ್ಲೆಗಳ ಗಲಭೆಗಳಲ್ಲಿ ೨೧೬ ಜನ ಕೊಲ್ಲಲ್ಪಟ್ಟರು. ಹತ್ತು ಸಾವಿರಕ್ಕೂ ಹೆಚ್ಚು ಮನೆಗಳು ಲೂಟಿಯಾದವು. ತ್ರಿಪುರದಲ್ಲಿ ೯೮೯೫ ಹಿಂದುಗಳನ್ನು

ಬಲವಂತದಿಂದ ಮುಸ್ಲಿಂ ಜಾತಿಗೆ ಸೇರಿಸಿದ್ದರು. ನೌಖಾಲಿಯಲ್ಲಿ ಈ ಸಂಖ್ಯೆ ಇನ್ನೂ ಹೆಚ್ಚಾಗಿತ್ತು. ಸಾವಿರಾರು ಜನ ಹಿಂದೂ ಹೆಂಗಸರನ್ನು ಕಳವುಮಾಡಿ ಬಲವಂತದಿಂದ ಮುಸ್ಲಿಮರಿಗೆ ಮದುವೆ ಮಾಡಿದ್ದರು. ಅವರು ಎಂದಿಗೂ ಹಿಂದೂ ಮತಕ್ಕೆ ಹಿಂದಿರುಗುವಂತಿರಲಿಲ್ಲ. ಹಿಂದುಗಳಿಂದ ಹಸುಗಳನ್ನು ಕೊಲ್ಲಿಸಿ ಮಾಂಸವನ್ನು ತಿನ್ನಿಸಿದ್ದರು. ಗಡ್ಡ ಬೆಳೆಸುವಂತೆ ಮಾಡಿ ಕುರಾನನ್ನೋದಿಸಿದ್ದರು.

ಗಾಂಧಿ ನೌಖಾಲಿ ತ್ರಿಪುರ ಯಾತ್ರೆ ಹೊರಟಾಗ ಹಿಂದುಗಳನ್ನು ಬೇರೆ ಪ್ರಾಂತ್ಯಗಳಿಗೆ ಕಳುಹಿಸಬೇಕೆಂದು ಯಾರೋ ಸೂಚಿಸಿದರು. ಇಂಡಿಯಾ ಒಗ್ಗಟ್ಟಿನಲ್ಲಿರಲಾರದೆಂದು ಸೋಲನ್ನೊಪ್ಪಿಕೊಳ್ಳಲು ಗಾಂಧಿ ನಿರಾಕರಿಸಿದರು. ಅದು ಗಾಂಧಿಯ ನಂಬಿಕೆಯ ಒಂದು ಮುಖ್ಯ ಅಂಶವಾದ, ವಿರೋಧಗಳಲ್ಲಿ ಸೌಹಾರ್ದವುಂಟಾಗುವುದು ಸಾಧ್ಯವೆಂಬುದನ್ನು ಸುಳ್ಳು ಮಾಡಿದಂತಾಗುವುದು. ಇದೇ ಈಗ ಆತನ ಕೆಲಸವಾಯಿತು. ಯೇಸು, "ಶತ್ರುಗಳನ್ನು ಪ್ರೀತಿಸಿರಿ; ನಿಮಗೆ ಶಾಪಕೊಟ್ಟವರನ್ನಾಶೀರ್ವದಿಸಿರಿ; ದ್ವೇಷಿಸುವವರಿಗೆ ಒಳ್ಳೆಯದನ್ನು ಮಾಡಿ; ಹಿಂಸೆಮಾಡುವವರ ಮೇಲ್ಮೆಗಾಗಿ ಪ್ರಾರ್ಥಿಸಿ. ಪ್ರೀತಿಸುವವರನ್ನು ಪ್ರೀತಿಸುವುದರಲ್ಲಿ ಹೆಚ್ಚಳವೇನಿದೆ?" ಎಂದನು. ಗಾಂಧಿ ಅದರಂತೆ ತಾನು ಜೀವಿಸಿ, ಬೇರೆಯವರನ್ನೂ ಹಾಗೆ ಜೀವಿಸಬೇಕೆಂದು ಕೇಳಿದನು. ಒಂದು ಮುಸ್ಲಿಂ ಗುಡಿಸಲಲ್ಲಿ ಕುಳಿತು ಅಹಿಂಸೆಯ ವಿಚಾರವಾಗಿ ಮಾತನಾಡುತ್ತಿದ್ದಾಗ ಆತನ ಬಲಗಡೆಯಿದ್ದ ಮನುಷ್ಯ ಅನೇಕ ಹಿಂದುಗಳನ್ನು ಕೊಂದವನೆಂದು ಒಂದು ಚೀಟಿ ಯಾರೋ ಬರೆದುಕೊಟ್ಟರು. ಗಾಂಧಿ ಸ್ವಲ್ಪ ನಕ್ಕು ಮಾತನ್ನು ಮುಂದುವರೆಸಿದನು. ಸ್ವಲ್ಪ ಹೊತ್ತಾದ ಮೇಲೆ ಅನೇಕ ಜನ ಮುಸ್ಲಿಮರು ತಮ್ಮ ಆಯುಧಗಳನ್ನೆಲ್ಲಾ ಆತನ ಕಾಲಬಳಿ ಇಟ್ಟರು. ಬಡ ಮುಸ್ಲಿಮರು ಗುಂಪು ಗುಂಪಾಗಿ ಆತನ ಪ್ರಾರ್ಥನಾ ಸಭೆಗಳಿಗೆ ಬರುತ್ತಿದ್ದರು; ಆದರೆ ಧನಿಕ ಮುಸ್ಲಿಮರು ಅವರನ್ನು ಹೆದರಿಸುತ್ತಿದ್ದರು. ಮುಸ್ಲಿಂ ರಾಜಕೀಯ ನಾಯಕರೂ ಗಾಂಧಿಯ ಸಂಪರ್ಕ ಬೆಳೆಸಲು ಜನರಿಗೆ ಉತ್ತೇಜನ ಕೊಡುತ್ತಿರಲಿಲ್ಲ. ನಾರಾಯಣಪುರ ಹಳ್ಳಿಯಲ್ಲಿನ ಒಬ್ಬ ಮುಸ್ಲಿಂ ಗಾಂಧಿಗೆ ಆಹಾರ, ನೆರಳನ್ನು ಕೊಟ್ಟನು. ಗಾಂಧಿ ಬಹಿರಂಗವಾಗಿ ಆತನನ್ನು ವಂದಿಸಿ

ದನು. ಇಂತಹ ಸತ್ಕಾರಗಳು ಹೆಚ್ಚುತ್ತಿದ್ದುವು. ಪಣಿಯಾಲ ಹಳ್ಳಿಯಲ್ಲಿ ಜನವರಿ ೨೨ನೇ ತಾರೀಖು ೫ ಸಾವಿರ ಹಿಂದು, ಮುಸ್ಲಿಮರು ಆತನ ಸಭೆಗೆ ಬಂದರು. ಪ್ರಾರ್ಥನೆಯನ್ನು ನಡುವೆ ನಿಲ್ಲಿಸಿ, ಮುಸ್ಲಿಮರನ್ನು ಒಂದುಕಡೆ ಕೂಡಿಸಿ ಅವರು ಮಕ್ಕಾ ಕಡೆ ತಿರುಗಿ ಪ್ರಾರ್ಥನೆ ಮಾಡಲು ಅವಕಾಶ ಕೊಟ್ಟನು. ರಾಯಪುರದಲ್ಲಿ ಒಂದು ಭಾನುವಾರ ಹಿಂದೂ ವರ್ತಕರು, ಎರಡು ಸಾವಿರ ಹಿಂದುಗಳು, ಅಸ್ಪೃಶ್ಯರು, ಮುಸ್ಲಿಮರು, ಕ್ರೈಸ್ತರಿಗೆ ಭೋಜನ ಸಮಾರಂಭ ನಡೆಸಿದುದನ್ನು ನೋಡಿ ಗಾಂಧಿ ಆನಂದಿಸಿದನು. ಮುಸ್ಲಿಂ ಪೂಜಾರಿ ಗಾಂಧಿಯನ್ನು ಮಸೀದಿಗೆ ಕರೆದುಕೊಂಡು ಹೋದನು. ಸಮಾಧಾನವನ್ನರಸಿ ರೈತರು ಆತನ ಗುಡಿಸಲಿಗೆ ಗುಂಪು ಗುಂಪಾಗಿ ಬರುತ್ತಿದ್ದರು. ಹಿಂದುಗಳು, ಸೈನ್ಯ ಪೋಲೀಸರನ್ನು ನಂಬದೆ ತಮ್ಮ ಸೌಜನ್ಯದಲ್ಲೇ ನಂಬಿಕೆಯಿಡಬೇಕೆಂದು ಬೋಧಿಸಿದನು. "ಪ್ರಜಾರಾಜ್ಯ, ಸೈನ್ಯ ಪೋಲೀಸರ ಮೇಲೆ ಅವಲಂಬನೆ, ಒಟ್ಟಾಗಿರಲು ಸಾಧ್ಯವಿಲ್ಲ," ಎಂದು ಕಲಿಸಿದನು. ಗಲಭೆಗಳಾದ ಊರುಬಿಟ್ಟು ಹೋದ ಹಿಂದುಗಳು ಚಂಡೀಪುರಕ್ಕೆ ಹಿಂತಿರುಗುತ್ತಿದ್ದರೆಂಬ ಸುದ್ದಿ ಬಂತು. ಇದೇ ಆತನ ಗುರಿಯಾಗಿತ್ತು.

ಇಷ್ಟು ದೂರ ಆತನು ಬಂದುದೇಕೆಂದು ಜನರು ಪ್ರಶ್ನಿಸಿದರು. ಜಿನ್ನಾರೊಡನೆ ಸಂಧಾನ ಬಿಟ್ಟು ಈ ಕಷ್ಟಕರವಾದ ಯಾತ್ರೆ ಕೈಗೊಂಡುದೇಕೆಂದು ಕೇಳಿದರು. "ನಾಯಕನಿಗೆ ಹಿಂಬಾಲಕರಿರಬೇಕು, ಜನರಲ್ಲಿ ಸೌಹಾರ್ದವಿದ್ದರೆ ಅವರಲ್ಲಿ ಕಂಡುಬರುವ ಶಾಂತಿಯನ್ನು ನಾಯಕರು ಪ್ರತಿಬಿಂಬಿಸುತ್ತಾರೆ," ಎಂದು ಆತನು ಉತ್ತರ ಕೊಟ್ಟನು.

ರಾಜಕೀಯ, ನ್ಯಾಯ ಶಾಸನಗಳ ನಡುವೆ ಗೋಡೆಯೆಬ್ಬಿಸುವ ಮೊದಲು ಹಿಂದೂ ಮುಸ್ಲಿಂ ಸೌಹಾರ್ದವನ್ನೇರ್ಪಡಿಸಲು ಗಾಂಧಿ ನೌಖಾಲಿಗೆ ಹೋಗಿದ್ದನು. ರಾಜಕೀಯ ತಜ್ಞರೊಡನೆ ಆತ ಪಂಥ ಹೂಡಿದ್ದನು ಅವರು ಶಸ್ತ್ರ ಚಿಕಿತ್ಸೆ ಪ್ರಾರಂಭಿಸುವ ಮೊದಲು ಆತನ ವೈದ್ಯ ಫಲಿಸುವುದೇ?

ಶಸ್ತ್ರ ಸಿದ್ಧವಾಗಿತ್ತು. ೧೯೪೬ರ ನವೆಂಬರಿನ ಕಡೆಯಲ್ಲಿ ಪ್ರಧಾನ ಮಂತ್ರಿ ಅಟ್ಲೆ, ನೆಹ್ರು, ಜಿನ್ನಾ, ರಕ್ಷಣಾ ಮಂತ್ರಿ ಬಲದೇವ ಸಿಂಗ್ ಮತ್ತು

ಲಿಯಾಖತ್ ಆಲೀಖಾನರನ್ನು ಡೌನಿಂಗ್ ರಸ್ತೆ ೧೦ನೇ ನಂಬರಿಗೆ ಕರೆದನು. ಹೊಸ ದೆಹಲಿಯಲ್ಲಿ ಡಿಸೆಂಬರ್ ೯ರಲ್ಲಿ ಸೇರಬೇಕಾಗಿದ್ದ ಇಂಡಿಯಾ ಶಾಸನ ಸಭೆಯು ವಿಚಾರವಾಗಿ ಚರ್ಚಿಸಬೇಕಾಗಿತ್ತು. ಕಾಂಗ್ರೆಸ್ ಭಾಗವಾದ ಶಾಸನ ಸಭೆಗಳಿಗೆ ಬರಲು ನಿರಾಕರಿಸಿದುದರಿಂದ ಜಿನ್ನಾ ಶಾಸನ ಸಭೆಗೆ ಮುಸ್ಲಿಂ ಲೀಗ್ ಹೋಗುವುದಿಲ್ಲವೆಂದು ಹೇಳಿದನು. ಮುಸ್ಲಿಂ ಲೀಗ್ ಭಾಗವಹಿಸದಿದ್ದರೆ ಇಂಗ್ಲೆಂಡ್ ಇಂಡಿಯಾವನ್ನು ಬಿಡುಗಡೆ ಮಾಡುವುದು ಹೇಗೆ? ಅಧಿಕಾರವನ್ನು ಯಾರಿಗೆ ವಹಿಸುವುದು? ಈ ಪ್ರಶ್ನೆಗಳನ್ನು ಬಗೆಹರಿಸಲು ಅಟ್ಲಿ ಇಂಡಿಯಾ ನಾಯಕರನ್ನು ತನ್ನ ಅಧಿಕೃತ ನಿವಾಸಕ್ಕೆ ಕರೆದನು.

ಲಂಡನ್ನಿನಲ್ಲಿದ್ದಾಗ ಜಿನ್ನಾ ಬಹಿರಂಗವಾಗಿ ಇಂಡಿಯಾ ಮುಸ್ಲಿಂ, ಹಿಂದೂ ಎಂದು ಎರಡು ಭಾಗವಾಗುವುದೆಂದೂ, ಚರ್ಚಿಲ್ಲರಂತೆ ತನಗೂ ದೇಶದಲ್ಲಿ ಯುದ್ಧ ಗಲಭೆಗಳಾಗುವ ಹೆದರಿಕೆಯಿತ್ತೆಂದೂ ಹೇಳಿದನು. ಪಾಕೀಸ್ತಾನವಾಗದಿದ್ದರೆ ಯುದ್ಧ. ಇದರಿಂದ ಡೌನಿಂಗ್ ರಸ್ತೆಯಲ್ಲಿ ನಡೆದ ಮಾತಿನಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಲಂಡನ್ ಸಂಧಾನ ಮುರಿದು ಬಿದ್ದ ವಿಚಾರ ಗಾಂಧಿಗೆ ತಿಳಿಸಲು ಪ್ರಧಾನ ಮಂತ್ರಿ ನೆಹ್ರು ನೌಖಾಲಿಯ ಶ್ರೀ ರಾಮಪುರಕ್ಕೆ ಹೋದನು. ಆದರೂ ಗಾಂಧಿ, ಕಾಂಗ್ರೆಸ್ ಭಾಗವಾದ ಶಾಸನ ಸಭೆಗಳಿಗೆ ಹೋಗಕೂಡ ದೆಂದು ಹೇಳಿದನು; ಅದರಿಂದ ಇಂಡಿಯಾ ಭಾಗವಾಗುವುದೆಂದು ಆತನು ಹೆದರಿದನು. ಆದರೂ ೧೯೪೭ರ ಜನವರಿ ೬ ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಭೆ, ಗಾಂಧಿಯ ಇಚ್ಛೆಗೆ ವಿರೋಧವಾಗಿ ಆ ಶಾಸನ ಸಭೆಗಳಲ್ಲಿ ಭಾಗ ಹಿಸಬೇಕೆಂದು ಬಹುಮತದಿಂದ ತೀರ್ಮಾನಿಸಿತು. ಆದರೆ ೧೯೪೬ ಮೇ ೧೬ ರ ಬ್ರಿಟಿಷ್ ಮಂತ್ರಿ ಮಂಡಲದ ಈ ಯೋಜನೆಯನ್ನು ಪುನರುಜ್ಜೀವಿ ತಗೊಳಿಸುವ ಪ್ರಯತ್ನ ವಿಫಲವಾಯಿತು. ಪರಿಸ್ಥಿತಿ ಕೈಮೀರಿತ್ತು. ೧೯೪೭ರ ಫೆಬ್ರವರಿ ೨೦ ರಲ್ಲಿ ಅಟ್ಲಿ, ಹೌಸ್ ಆಫ್ ಕಾಮನ್ಸಿನಲ್ಲಿ ಇಂಗ್ಲೆಂಡು ಇಂಡಿಯಾವನ್ನು ೧೯೪೮ರ ಜೂನ್‌ನೊಳಗಾಗಿ ಬಿಟ್ಟು ಹೊರ ಡುವುದೆಂದು ಘೋಷಿಸಿದನು. ರಾಣಿ ವಿಕ್ಟೋರಿಯಳ ಮೊಮ್ಮಗ ಲಾರ್ಡ್ ಲೂಯಿ ಮೌಂಟ್ ಬ್ಯಾಟನ್ ವೇವೆಲ್‌ಗೆ ಬದಲಾಗಿ ನಿಯಮಿಸಲ್ಪಟ್ಟನು.

ಆತನು ಇಂಡಿಯಾದ ಇಪ್ಪತ್ತನೆಯ, ಕಡೆಯ ಬ್ರಿಟಿಷ್ ವೈಸರಾಯಿ.

ಇಂಡಿಯಾ ಭಾಗವಾಗುವುದೆಂದು ಅಟ್ಲೆ ಹೇಳಲಿಲ್ಲವಾದರೂ ಘಟನೆಗಳು ತೀವ್ರವಾಗಿ ಚಲಿಸಿದವು. ಮುಸ್ಲಿಮರು, ಸಿಕ್ಕರು, ಹಿಂದುಗಳಿದ್ದ ಪಂಜಾಬ್ ಪ್ರಾಂತ್ಯದಲ್ಲಿ ಘೋರವಾಗಿ ಗಲಭೆಗಳುಂಟಾದುವು. ಪಾಕಿಸ್ತಾನದ ಮುಖ್ಯ ಪ್ರಾಂತ್ಯಗಳಾಗಬೇಕಾಗಿದ್ದ ಪಂಜಾಬ್ ಮತ್ತು ಬಂಗಾಳಗಳಲ್ಲಿ ಮುಸ್ಲಿಮರ ಸಂಖ್ಯೆ ಹೆಚ್ಚಾಗಿದ್ದುದರಿಂದ ಅವರಿಗೆ ಹಿಂದುಗಳ ಹೆದರಿಕೆಯೂ ಇರಲಿಲ್ಲ; ಪಾಕಿಸ್ತಾನ ಬೇಕಾಗಿಯೂ ಇರಲಿಲ್ಲ; ಪಂಜಾಬಿ, ಬಂಗಾಳಿ ಮುಸ್ಲಿಮರಿಗೆ ಒಟ್ಟು ಸೇರಬೇಕೆಂಬ ಭ್ರಾತೃಭಾವವೂ ಇರಲಿಲ್ಲ. ಆದರೂ ಎರಡು ಪ್ರಾಂತ್ಯಗಳಲ್ಲೂ ಜಿನ್ನಾರ ಕರೆಯ ಉದ್ವೇಗ ವಿವೇಕವನ್ನು ಮರೆಸಿ ರಕ್ತ ಪ್ರವಾಹ ಹರಿಸಿತು.

ಮಾರ್ಚ್ ಮೊದಲನೆಯ ವಾರದಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಪಂಜಾಬನ್ನು ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿದ್ದ ಭಾಗ, ಅಲ್ಪ ಸಂಖ್ಯೆಯಲ್ಲಿದ್ದ ಭಾಗ ಎಂದು ವಿಭಜಿಸುವ ಆಲೋಚನೆಯನ್ನೊಡ್ಡಿತು. ಇದು ರಾಜಕೀಯ ವಿಭಾಜಕ ಪ್ರದೇಶವಾಯಿತು. ಗಲಭೆಗಳಿಂದ ಪ್ರಾಂತ್ಯ ಭಾಗವಾಗುವುದೆಂಬ ಅರಿವು ಪಂಜಾಬಿ ಮುಸ್ಲಿಮರಿಗುಂಟಾಯಿತು. ಕಾಂಗ್ರೆಸ್ ಈಗ ಸೃಷ್ಟಿಯಾಗಿರುವ ಚಿಕ್ಕ ಪಾಕಿಸ್ತಾನಕ್ಕೆ ಒಪ್ಪಿಗೆಯನ್ನಿತ್ತಂತಾಯಿತು.

ಈ ಘಟನೆಗಳಿಂದ ಗಾಬರಿಯಾಗಿ, ನೌಖಾಲಿ ಸ್ವಲ್ಪ ಶಾಂತ ಪರಿಸ್ಥಿತಿಗೆ ಬಂದಿದ್ದುದರಿಂದ ಗಾಂಧಿ ಪಶ್ಚಿಮದ ಕಡೆ ಪಂಜಾಬಿಗೆ ಹೊರಟನು. ದಾರಿಯಲ್ಲಿ ಬಿಹಾರಿನ ರಕ್ತಪಾತ ಆತನನ್ನು ನಿಲ್ಲಿಸಿತು. ವಿಶ್ರಾಂತಿಯಿಲ್ಲದೆ ಆ ಪ್ರಾಂತ್ಯವನ್ನೆಲ್ಲಾ ಸುತ್ತಿದನು. "ಬಿಹಾರಿ ಹಿಂದುಗಳು ಹುಚ್ಚುಹಿಡಿದು ತಾವು ಮಾನವರೆಂಬುದನ್ನು ಮರೆತಿದ್ದಾರೆ", ಎಂದನು. ಪಂಜಾಬಿನ ಮುಸ್ಲಿಮರು ಹಿಂದುಗಳನ್ನು ಕೊಂದರೆಂದು ಸೇಡುತೀರಿಸಿಕೊಳ್ಳಕೂಡದೆಂದು ಎಚ್ಚರಿಸಿದನು. "ಅದೇ ಇಂಡಿಯಾದ ನಾಶದ ಹಾದಿ," ಎಂದನು. ಗಲಭೆಗಳಲ್ಲಿ ಅಪರಾಧ ಮಾಡಿದವರು ಪೋಲೀಸಿನವರಾಗಲಿ, ತನಗಾಗಲಿ ಶರಣಾಗತರಾಗಬೇಕೆಂದು ಹೇಳಿದನು. ನೂರಾರು ಜನ ಹಾಗೆಯೇ ಮಾಡಿದರು. ಹಿಂದುಗಳನ್ನು ಆಕ್ಷೇಪಿಸಕೂಡದೆಂದು

ಮಹಾತ್ಮನಿಗೆ ಒಬ್ಬ ಹಿಂದು ತಂತಿ ಕೊಟ್ಟನು. ಪ್ರಾರ್ಥನಾ ಸಭೆಯಲ್ಲಿ ಅದನ್ನು ಓದಿಹೇಳಿ, "ಹಿಂದುಗಳ ತಪ್ಪನ್ನು ನಾನು ಒಪ್ಪಿದರೆ, ಹಿಂದುವಾಗಲು ನನಗೆ ಯೋಗ್ಯತೆಯಿಲ್ಲ," ಎಂದು ಹೇಳಿದನು. ಹಿಂದುಗಳು ಮುಸ್ಲಿಮರ ಮೇಲೆ ಹಾಕಿದ್ದ ಆರ್ಥಿಕ ನಿರ್ಬಂಧಗಳನ್ನು ಕಡೆಗಣಿಸಬೇಕೆಂದು ಬೇಡಿದನು. ಒಬ್ಬ ಹಿಂದುವಾದರೂ ಒಪ್ಪಲಿಲ್ಲ. ಮುಸ್ಲಿಮರ ಹಳ್ಳಿಗಳಿಗೆ ಹಿಂದಿರುಗಲು ಹೆದರಿದ್ದಲ್ಲಿ ಆಶ್ಚರ್ಯವೇನಿದೆ? ಇಂಡಿಯಾದಲ್ಲಿ ಈ ಗಲಭೆ ಮುಂದುವರಿದರೆ ಸ್ವಾತಂತ್ರ್ಯದ ಸವಿಫಲವನ್ನು ಇಂಡಿಯಾ ಕಳೆದುಕೊಳ್ಳುವುದೆಂದು ಆತನು ಹೇಳಿದನು.

೧೯೪೭ ರ ಮಾರ್ಚ್ ೨೨ ರಲ್ಲಿ ನೌಕಾವಸ್ತ್ರಗಳಲ್ಲಿ ಚೆಲುವನಾದ ಲಾರ್ಡ್ ಮೌಂಟ್ ಬೇಟನ್ ತನ್ನ ಪತ್ನಿ ಎಡ್ವಿನಾಳೊಡನೆ ಹೊಸ ದೆಹಲಿಗೆ ಬಂದನು. ಅವರ ಸರಳತೆ, ಸೌಜನ್ಯಗಳಿಗೆ ಸಕಲರೂ ಮಾರುಹೋದರು. ಆತನು ಬಂದ ೨೪ ಘಂಟೆಗಳೊಳಗಾಗಿ ಜಿನ್ನಾ ಪಾಕಿಸ್ತಾನವಾಗದಿದ್ದರೆ ಭಯಂಕರ ಪರಿಸ್ಥಿತಿಯೊದಗುವುದೆಂದು ಮೌಂಟ್ ಬೇಟನ್ನಿಗೆ ಎಚ್ಚರಿಕೆ ಕೊಟ್ಟನು. ಬಂದು ನಾಲ್ಕು ದಿನಗಳಾದ ಮೇಲೆ ವೈಸರಾಯಿ ಜಿನ್ನಾ, ಗಾಂಧಿಗಳನ್ನು ಮಾತನಾಡಲು ಕರೆದನು. ಗಾಂಧಿ ಬಿಹಾರದ ಒಳ ಪ್ರಾಂತ್ಯದಲ್ಲಿದ್ದನು. ಮೌಂಟ್ ಬೇಟನ್ ವಾಯು ವಿಮಾನ ಕಳುಹಿಸುವುದಾಗಿ ಹೇಳಿದನು. ಗಾಂಧಿ ಲಕ್ಷಾಂತರ ಜನ ಉಪಯೋಗಿಸುತ್ತಿದ್ದ ವಾಹನವನ್ನೇ ಅಪೇಕ್ಷಿಸಿದನು. ರೈಲು ಹೊರಡುವ ಮೊದಲು ಪಾಟ್ನ ನಿಲ್ದಾಣದಲ್ಲಿ ಹರಿಜನರಿಗಾಗಿ ಹಣ ಕೂಡಿಸಿದನು. ಮಾರ್ಚ್ ೩೧ ರಲ್ಲಿ ಲಾರ್ಡ್ ಲೂಯಿಯೊಡನೆ ೨-೧೫ ಘಂಟೆ ಹೊತ್ತು ಮಾತನಾಡಿದನು. ಆಗಿನಿಂದ ಏಪ್ರಿಲ್ ೧೨ ರವರೆಗೆ ಇನ್ನೈದು ಬಾರಿ ಸೇರಿ ಮಾತನಾಡಿದರು. ಜಿನ್ನಾ ಕೂಡ ಅಷ್ಟೇ ಬಾರಿ ಮೌಂಟ್ ಬೇಟನ್ನಿನೊಡನೆ ಮಾತನಾಡಿದನು. ಮುಂದಿನ ೨ ತಿಂಗಳು, ಎರಡು ವಾರ ಇಂಡಿಯಾ ಚರಿತ್ರೆಯಲ್ಲಿ ಅತ್ಯಂತ ಮಹತ್ವಪೂರ್ಣವಾದುದು. ಇಂಡಿಯಾವನ್ನು ಸೀಳುವ ಭಯಂಕರ ಕಾರ್ಯಕ್ರಮ ಮುಗಿದ ಮೇಲೆ ಮೌಂಟ್ ಬೇಟನ್ ಕತೆಯನ್ನೆಲ್ಲಾ ಹೇಳಿದನು.

೨೯. ತಿರುತಿರುಗಿ.

೧೯೪೮ ರ ಅಕ್ಟೋಬರ್ ೬ ರಲ್ಲಿ ಲಾರ್ಡ್ ಮೌಂಟ್ ಬೇಟನ್ ಲಂಡನ್ನಿನಲ್ಲಿ ರಾಯಲ್ ಎಂಪೈರ್ ಸೊಸೈಟಿಯ ಎದುರಿಗೆ ನಡೆದುದನ್ನು ತನ್ನ ದೃಷ್ಟಿಯಿಂದ ವಿವರಿಸಿದನು.

" ಇಂಡಿಯಾದಲ್ಲಿ ಗಾಂಧಿಯನ್ನು ರೂಸ್‌ವೆಲ್ಟ್, ಚರ್ಚಿಲರಂತಹ ರಾಜಕಾರಣಿಗಳಿಗೆ ಹೋಲಿಸುವುದಿಲ್ಲ. ಆತನನ್ನು ಸರಳವಾಗಿ ಮುಹಮ್ಮದ್, ಏಸು ಮುಂತಾದವರ ಸಮವೆಂದು ಭಾವಿಸುತ್ತಾರೆ." ಮೊದಲ ಬಾರಿ ಕಂಡಾಗ ಆತನು ಗಾಂಧಿಯ ದಕ್ಷಿಣ ಆಫ್ರಿಕಾ ಅನುಭವಗಳನ್ನು ವಿವರಿಸ ಬೇಕೆಂದು ಕೇಳಿದನು. ಜಿನ್ನಾರನ್ನು ಲಂಡನ್ನಿನ ಅನುಭವಗಳೇನೆಂದು ವಿಚಾರಿಸಿದನು. " ಅವರೊಡನೆ ಮಾತನಾಡಿ ನಾನು ಪರಿಚಯಮಾಡಿ ಕೊಳ್ಳಲು ಹೀಗೆ ಮಾಡಿದೆ." ಗಾಂಧಿ ಜಿನ್ನಾರಿಗೆ ಬೇರೆ ಬೇರೆಯಾಗಿ ತನ್ನ ಜೀವನ ವಿಚಾರಗಳನ್ನೂ ತಿಳಿಸಿದನು. ಸ್ವಲ್ಪ ಪರಿಚಯವಾದ ಮೇಲೆ ನಮ್ಮೆದುರಿಗಿದ್ದ ಸಮಸ್ಯೆಯ ವಿಚಾರ ಪ್ರಾರಂಭಿಸಿದೆ.

೧೯೪೮ರ ಜೂನಿನೊಳಗಾಗಿ ಮೌಂಟ್ ಬೇಟನ್ ಬ್ರಿಟನ್ನನ್ನು ಇಂಡಿಯಾದಿಂದ ಹೊರಕ್ಕೊಯ್ಯಬೇಕಾಗಿತ್ತು. ಚಕ್ರಾಧಿಪತ್ಯವನ್ನು ಕಡಿಮೆ ಮಾಡುವುದಕ್ಕೆ ಬೇಕಾದ ಏರ್ಪಾಟುಗಳನ್ನು ಮಾಡಲು ಬ್ರಿಟಿಷ್ ಪಾರ್ಲಿ ಮೆಂಟಿಗೆ ಸಮಯ ಕೊಡಲು ೧೯೪೭ ರ ಕೊನೆಯ ವೇಳೆಗೆ ಸಮಸ್ಯೆ ಇತ್ಯ ರ್ಥವಾಗಬೇಕಾಗಿತ್ತು. ಈ ಕಾರ್ಯಕ್ರಮ ತುಂಬಾ ನಿಧಾನವಾಗಿ ತೋರಿತು; ಘಟನೆಗಳು ತೀವ್ರ ವೇಗದಿಂದ ನಡೆದು ಹೋಗುತ್ತಿದ್ದವು. ೧೯೪೬ ರ ಆಗಸ್ಟ್ ೧೬ ನ್ನು ಜಿನ್ನಾ, " ನೇರ ಕಾರ್ಯಾಚರಣೆಯ ದಿನ" ವೆಂದು ಘೋಷಿಸಿದಾಗ ತೊಂದರೆಗಾರಂಭವಾಯಿತು. ನೌಖಾಲಿಯಲ್ಲಿ ಹಿಂದುಗಳ ಕೊಲೆ, ಬಿಹಾರದಲ್ಲಿ ಅವರ ಪ್ರತೀಕಾರ, ಅನಂತರ ಪಂಜಾಬಿನ ರಾವಲ್ಪಿಂಡಿಯಲ್ಲಿ ಮುಸ್ಲಿಮರು ಸಿಕ್ಕರನ್ನು ಕೊಲೆಮಾಡಿದ್ದು, ವಾಯುವ್ಯ ಪ್ರಾಂತ್ಯದಲ್ಲಿ ದಂಗೆ. ನಾನು ಅಲ್ಲಿಗೆ ಹೋದಾಗ ಈ ಕೊಲೆಗಳು ಹೆಚ್ಚು ಹೆಚ್ಚು ತೀವ್ರವಾಗುತ್ತಿದ್ದವು."

" ಇಂಡಿಯಾವನ್ನು ಪೂರ್ಣವಾಗಿಟ್ಟಿರುವುದೇ ಸರಿಯಾದ ಪರಿಹಾರ ವೆಂದು ಆಗಲೂ, ಈಗಲೂ ನನ್ನ ಅಭಿಪ್ರಾಯ. ಆದರೆ ಇದಕ್ಕೆ ಎರಡು

ಪಕ್ಷಗಳ ಸಹಕಾರ ಬೇಕಾಗಿತ್ತು. ಜಿನ್ನಾರವರು ಮೊದಲ ಕ್ಷಣದಿಂದಲೇ ತಾನು ಬದುಕಿರುವವರೆಗೂ ಅವಿಭಕ್ತ ಇಂಡಿಯಾವನ್ನೊಪ್ಪುವುದಿಲ್ಲವೆಂದು ಸ್ಪಷ್ಟಪಡಿಸಿದರು. ಭಾಗವಾಗಬೇಕೆಂದು ಹಠಹಿಡಿದರು; ಪಾಕಿಸ್ತಾನ ಬೇಕೆಂದು ಒತ್ತಾಯಮಾಡಿದರು. ಕಾಂಗ್ರೆಸ್ಸಿಗೆ ಅವಿಭಕ್ತ ಇಂಡಿಯಾ ಬೇಕಾಗಿದ್ದರೂ ಅಂತರ್ಯುದ್ಧ ತಪ್ಪಿಸಲು ಭಾಗಕ್ಕೆ ಒಪ್ಪುವುದಾಗಿ ಹೇಳಿತು. ಮುಸ್ಲಿಂ ಲೀಗ್ ಯುದ್ಧಮಾಡಲು ಹಿಂಜರಿಯುತ್ತಿರಲಿಲ್ಲ.

ಆದರೆ ಮುಸ್ಲಿಮರಿಲ್ಲದ ಪ್ರಾಂತ್ಯಗಳನ್ನು ಪಾಕಿಸ್ತಾನಕ್ಕೆ ಕೊಡಲು ಕಾಂಗ್ರೆಸ್ ಒಪ್ಪಲಿಲ್ಲ. ಆದರಿಂದ ಪಂಜಾಬು, ಬಂಗಾಳ ಭಾಗವಾಗಲೇ ಬೇಕಾಯಿತು. ಕಾಂಗ್ರೆಸ್ ಪಾಕೀಸ್ತಾನಕ್ಕೆ ಒಪ್ಪಬಹುದೆಂದು ನಾನು ಹೇಳಿದಾಗ ಜಿನ್ನಾಗೆ ವಿಪರೀತ ಸಂತೋಷವಾಯಿತು. ಇದರಿಂದ ಪಂಜಾಬು, ಬಂಗಾಳ ಭಾಗವಾಗಬೇಕೆಂದಾಗ ಆತನಿಗೆ ಗಾಬರಿಯಾಯಿತು. ಅವು ಭಾಗವಾಗಕೂಡದೆಂಬುದಕ್ಕೆ ಎಷ್ಟೋ ಬಲವಾದ ಕಾರಣಗಳನ್ನು ಹೇಳಿದನು. ಅವರು ಒಂದೇ ಜನಾಂಗವಾಗಿದ್ದುದರಿಂದ ಭಾಗಮಾಡಿದರೆ ಅನಾಹುತವಾಗುವುದೆಂದನು. ನಾನು ಒಪ್ಪಿ, ಅದೇ ಕಾರಣವಾದರೆ ಇಂಡಿಯಾ ಭಾಗವಾಗುವುದೇ ತಪ್ಪು ಎಂದೆ. ಆ ಮಾತು ಆತನಿಗೆ ರುಚಿಸದೆ, ಇಂಡಿಯಾ ಭಾಗವಾಗಬೇಕಾದ ಕಾರಣಗಳನ್ನು ವಿವರಿಸಲಾರಂಭಿಸಿದನು. ತಿರುತಿರುಗಿ ಮಾತನಾಡಿದ ಮೇಲೆ, ಇಂಡಿಯಾ ಒಂದಾಗಿರದಿದ್ದರೆ ಪಂಜಾಬು, ಬಂಗಾಳ ಭಾಗವಾಗಬೇಕಾಗಿಲ್ಲ. ಇಂಡಿಯಾದ ವಿಭಜನೆಯಾದರೆ ಪಂಜಾಬು, ಬಂಗಾಳ ಭಾಗವಾಗಬೇಕೆಂಬುದು ಸ್ಪಷ್ಟವಾದ ಮೇಲೆ ಆತನು ಎರಡನೆಯ ಯೋಜನೆಗೆ ಒಪ್ಪಿದನು."

೪೦೦,೦೦೦,೦೦೦ ಜನರ ದೇಶವಾದ ಇಂಡಿಯಾವನ್ನು ವಿಭಾಗ ಮಾಡಬೇಕೆಂದು ನಿರ್ಧರವಾಯಿತು. ಗಾಂಧಿ ಒಪ್ಪಲೇ ಇಲ್ಲ; ಆ ನಿರ್ಧಾರ ಸಡಿಲುವುದೆಂದು ಆತನು ಆಶಿಸಿದನು.

**೩೦. ಎರಡು ಜನಾಂಗಗಳ ಸೃಷ್ಟಿ.**

ಒಂದುಬಾರಿ ಮಾತನಾಡುವಾಗ ಲಾರ್ಡ್ ಮೌಂಟ್ ಬೇಟನ್ ಮಹಾತ್ಮನೊಡನೆ, "ಸ್ವಾಮೀ ಗಾಂಧಿ, ಇಂದು ಕಾಂಗ್ರೆಸ್ ನನ್ನ ಕಡೆ ಇದೆ," ಎಂದನು.

ಗಾಂಧಿ, "ಆದರೆ ಇಂಡಿಯಾ ನನ್ನ ಕಡೆಗಿದೆ," ಎಂದು ಉತ್ತರ ವಿತ್ತನು. ಈ ಮಾತನ್ನು ಪ್ರೊಫೆಸರ್ ನಿರ್ಮಲ ಕುಮಾರ ಬೋಸರಿಗೆ ಹೇಳುತ್ತಾ ಗಾಂಧಿ, "ಮೌಂಟ್ ಬೇಟನ್ನರ ಅಹಂಕಾರ ನೋಡಿ," ಎಂದನು. ಆದರೆ ಅದು ಸತ್ಯವಾದ ಮಾತಾಗಿ ಇಂಡಿಯಾದ ವಿಭಜನೆಗೆ ಕಾರಣ ವಾಯಿತು. ಗಾಂಧಿಯ ಮಾತು ಆಸೆಯಾಗಿ ಮಾತ್ರ ಉಳಿಯಿತು. ಇಂಡಿಯಾ ನಿಜವಾಗಿ ಗಾಂಧಿಯ ಕಡೆಗಿದ್ದಿದ್ದರೆ ಆತನು ಕಾಂಗ್ರೆಸ್ಸಿನ ನಿರ್ಧಾರವನ್ನು ತಲೆಕೆಳಗು ಮಾಡುತ್ತಿದ್ದನು.

ನೆಹ್ರು ಮಂತ್ರಿಮಂಡಲದಲ್ಲಿದ್ದ ಕಾಂಗ್ರೆಸ್ ಮಂತ್ರಿಗಳು,—ಮುಸ್ಲಿಂ ಸಹೋದ್ಯೋಗಿಗಳು ಸರ್ಕಾರದ ಕೆಲಸಕ್ಕೆ ಅಡಚಣೆ ಮಾಡುತ್ತಿದ್ದುದರಿಂದ, ತುಂಬಾ ತೊಂದರೆಪಡುತ್ತಿದ್ದರು. ಇದರಿಂದ ಕಾಂಗ್ರೆಸ್ ಮಂತ್ರಿಗಳಿಗೆ, "ಇವರಿಗೆ ಪಾಕೀಸ್ತಾನ ಬೇಕಾದರೆ ತೆಗೆದುಕೊಂಡು ಹೊರಟುಹೋಗಲಿ," ಎನ್ನಿಸಿತ್ತು. "ನೆಹ್ರು ೧೯೪೭ರ ಏಪ್ರಿಲ್ ೨೧ರಲ್ಲಿ, ಮುಸ್ಲಿಂ ಲೀಗಿಗೆ ಬೇಕಾದರೆ ಪಾಕೀಸ್ತಾನ ತೆಗೆದುಕೊಳ್ಳಲಿ. ಆದರೆ ಸೇರಲು ಇಷ್ಟವಿಲ್ಲದ ಪ್ರಾಂತ್ಯಗಳನ್ನು ಮಾತ್ರ ಅವರು ತೆಗೆದುಕೊಳ್ಳದಿದ್ದರೆ ಸರಿ," ಎಂದನು.

ಇಷ್ಟವಿಲ್ಲದೆ ಈಗಿನ ಅಸ್ಸಾಂ, ಬಂಗಾಳ, ಪಂಜಾಬಿನ ಭಾಗಗಳ ನ್ನೊಳಗೊಂಡ ಪಾಕೀಸ್ತಾನಕ್ಕೆ ಒಪ್ಪಿದಾಗ ವಿಭಜನೆಯಿಂದಾಗಬಹುದಾದ ಅನಾಹುತಗಳ ಕಲ್ಪನೆಯಿರಲಿಲ್ಲ. ೧೯೪೯ರ ಅಕ್ಟೋಬರ್ ೧೬ರಲ್ಲಿ ನ್ಯೂಯಾರ್ಕಿನಲ್ಲಿ ನೆಹ್ರು, "ಅದರಿಂದಾದ ಅನಾಹುತಗಳ ಮುನ್ಸೂಚನೆ ನನಗಿದ್ದಿದ್ದರೆ ಪಾಕೀಸ್ತಾನವಾಗದಂತೆ ಕಡೆಯವರೆಗೂ ಹೊಡೆದಾಡುತ್ತಿದ್ದೆ. ಇಂಡಿಯಾ ವಿಭಜನೆಯಿಂದ ನೂರಾರು ಸಾವಿರ ಇಂಡಿಯನ್ನರು ಹತ ರಾದರು. ೧೫ ಲಕ್ಷ ಜನ ಮನೆ ಮಠಗಳನ್ನು ಕಳೆದುಕೊಂಡರು. ಕಾಶ್ಮೀರದ ಯುದ್ಧ ಅದರಿಂದ ಪ್ರಾರಂಭವಾಯಿತು; ಇಂಡಿಯಾದಲ್ಲಿ ಹೇರಳವಾಗಿ ಆರ್ಥಿಕ ನಷ್ಟವುಂಟಾಯಿತು. ಮತೀಯವಾದ ಜನಾಂಗದ ಕಹಿ ಸಂಬಂಧದ ಅಡಿಗಲ್ಲಾಯಿತು. ಗಾಂಧಿಗೆ ಈ ಘೋರ ಫಲಿತಾಂಶಗಳ ಅರಿವಾಯಿತೋ ಇಲ್ಲವೋ ಮುಖ್ಯವಲ್ಲ. ಫಲಿತಾಂಶ ಹೀಗಾಗಬಹುದೆಂದು ಆತನು ವಿಭಜನೆ ಬೇಡವೆನ್ನಲಿಲ್ಲ. ಅದರ ದುಷ್ಟ ಮೂಲವನ್ನರಿತು ಬೇಡವೆಂದನು. ಇದರಿಂದ ಆತನಿಗೆ ಹೋರಾಡುವ ಶಕ್ತಿಯುಂಟಾಯಿತು. ಗಾಂಧಿಯ ಆಪ್ತ ಆಶ್ರಮ

ವಾಸಿಯೊಬ್ಬನು, ಹೇಳಿದಂತೆ, 'ವಯಸ್ಸಿನಲ್ಲಿ ಚಿಕ್ಕವರಾದ ನಾಯಕರು ಆಯಾಸಗೊಂಡು ದೂರದೃಷ್ಟಿಯನ್ನು ಕಳೆದುಕೊಂಡರು.' "

ಸಂಯುಕ್ತ ರಾಷ್ಟ್ರಕ್ಕೆ ಸ್ವಾತಂತ್ರ್ಯ ದೊರಕಿಸುವ ಆಸೆಯಿಂದ ವಿಭಜನೆ ಬೇಡವೆಂಬ ಹೋರಾಟ, ಸ್ವಾತಂತ್ರ್ಯದ ಆಗಮನವನ್ನು ನಿಧಾನ ಮಾಡುತ್ತಿತ್ತು. ಆದರೆ ಅನೇಕ ಕಾಂಗ್ರೆಸ್ ನಾಯಕರಿಗೆ ಅಧಿಕಾರಲಾಲಸೆಯುಂಟಾಗಿ ಪುನಃ ಹೋರಾಟ ಹೂಡಲು ಹಿಂದೆಗೆದರು. ಹೋರಾಟ ಸೆರೆಮನೆಯಲ್ಲಿ ಕೊನೆಗಾಣಬಹುದು. ಗಾಂಧಿಯು ಸೆರೆಯೆಂದರೆ ವಿಶ್ರಾಂತಿ, ಗೆಲ್ಲು; ಬೇರೆಯವರಿಗೆ ಅದು ನೋವು. ೧೯೩೪ ರ ಆಗಸ್ಟ್ ೧೩ ರಲ್ಲಿ ನೆಹ್ರು ಗಾಂಧಿಗೆ, "ಈ ಸಲದ ನನ್ನ ಸೆರೆಮನೆಯ ವಾಸ ಹಿಂದಿನ ಬಾರಿಗಳಿಗಿಂತ ಮನಸ್ಸಿಗೆ ಬೇಸರವನ್ನುಂಟುಮಾಡಿತು," ಎಂದು ಬರೆದನು. ನೋವು ಹೆಚ್ಚುತ್ತಾ ಹೋಗಿ, ಕಡೆಯ ಬಾರಿ ೧೯೪೨ ರ ಆಗಸ್ಟ್ ೯ ರಿಂದ ೧೯೪೫ ರ ಜುಲೈ ೧೪ ರವರೆಗೆ ಮೂರು ವರ್ಷಕಾಲ ಸೆರೆಯಲ್ಲಿದ್ದುದು, ಹೋರಾಟದ ವಿವೇಕದಲ್ಲೂ ಅನುಮಾನವುಂಟಾದ ಮೇಲೆ ಪುನಃ ಸೆರೆಯಲ್ಲಿರುವುದು ಆಕರ್ಷಕವಾಗಿ ಕಂಡಿರಲಾರದು. ಜಿನ್ನಾ ಹೆದರಿಸಿದ್ದ ಅಂತರ್ಯುದ್ಧದ ರಕ್ತಛಾಯೆ, ಗಲಭೆಗಳಲ್ಲಿ ಕಾಣಿಸಿಕೊಂಡಿತ್ತು. ಎರಡನೆಯ ಮಹಾಯುದ್ಧ ಮುಗಿದ ಈ ಅಲ್ಪ ಕಾಲದಲ್ಲೇ ಇಂಡಿಯಾದ ಮುಸ್ಲಿಮರೊಡನೆ ಹೋರಾಡುವ ಮನಸ್ಸು ಬ್ರಿಟಿಷರಿಗೆ ಇರಲಿಲ್ಲ. ವಿಭಜನೆ ತಪ್ಪಿದ್ದಲ್ಲವೆಂದೂ, ಸ್ವಾತಂತ್ರ್ಯ ಸುಂದರವಾದುದೆಂದೂ ಮೌಂಟ್ ಬೇಟನ್ ಚಿತ್ರಿಸಿದನು. ಆತನು ಕಾಂಗ್ರೆಸ್ಸಿಗೆ ಅಧಿಕಾರ ನೀಡಿದನು; ಗಾಂಧಿ ಸೆರೆಮನೆಯ ವಾಸವನ್ನು ನೀಡಿದನು. ಇಂತಹ ಸತ್ಯತೆಯ ಮುಂದೆ ಗಾಂಧಿ, ಇಂಡಿಯಾ ಜನರು ಒಂದು ಜನಾಂಗವೆಂದು, ಅವರನ್ನು ಹರಿದು ಹಂಚುವುದು ಪಾಪಕರವೆಂದೂ ಮಾತ್ರ ಹೇಳಬಲ್ಲವನಾಗಿದ್ದನು. ತನ್ನ ನಿಲುವಿನ ದೌರ್ಬಲ್ಯ ಆತನಿಗೆ ತಿಳಿದಿತ್ತು. ಮೌಂಟ್ ಬೇಟನ್ನಿನೊಡನೆ, "ನನ್ನೊಡನೆ ಇಂಡಿಯಾ ಇದೆ," ಎಂದಾಗ ಅದು ನಂಬಿಕೆಯ ಮಾತೆಂದೂ, ವಾಸ್ತವಿಕವಾದುದಲ್ಲವೆಂದೂ, ಆತನು ತಿಳಿದಿದ್ದನು. ಆದರ ನಿಜವನ್ನು ತೋರುವ ಭಾರ ತನ್ನದೆಂದರಿತನು.

ಆದುದರಿಂದ ವೈಸರಾಯಿಯೊಡನೆ ಮಾತು ಮುಗಿಯುತ್ತಲೇ ದೆಹಲಿ

ಯನ್ನು ಬಿಟ್ಟು ಬಿಹಾರಕ್ಕೆ ಹಿಂದಿರುಗಿದನು. ಏಪ್ರಿಲ್‌ನಲ್ಲಿ ಆ ಪ್ರಾಂತ್ಯ ಬಹಳ ಸೆಕೆಯಾಗಿದ್ದುದರಿಂದ ಹಳ್ಳಿಗಳಲ್ಲಿ ಓಡಾಡುವುದೇ ಆತನಿಗೆ ಕಷ್ಟ ವಾಗಿತ್ತು. ಆದರೆ ತನ್ನ ದೇಹ ಸೌಖ್ಯದ ಕಡೆ ಆತನಿಗೆ ಗಮನವಿರಲಿಲ್ಲ. ಬಿಹಾರದಲ್ಲಿ ಶಾಂತಿ, ಕಲ್ಕತ್ತ ಮುಂತಾದ ಕಡೆಗಳಲ್ಲಿನ ಗಲಭೆಗಳನ್ನು ಕರಗಿಸುವುದು. ಅನಕ್ಷರಸ್ಥಳಾದ ಆತನ ತಾಯಿ, "ಅಣು, ಜಗತ್ತನ್ನು ಪ್ರತಿಬಿಂಬಿಸುವುದು; ಪ್ರತಿಯೊಬ್ಬನೂ ತನ್ನ ಸುತ್ತು ಮುತ್ತಲಿನ ಪ್ರದೇಶ ವನ್ನು ನೋಡಿಕೊಂಡರೆ ಜಗತ್ತೇ ಉತ್ತಮವಾಗುವುದು," ಎಂದು ಹೇಳು ತ್ತಿದ್ದಳಂತೆ. ದೆಹಲಿಗೆ ಹೋದಾಗ ಬಿಹಾರಿನಲ್ಲಿ ಗಾಂಧಿ ಇಟ್ಟುಹೋಗಿದ್ದ ಜನರಲ್ ಷಾ ನವಾಜ್‌ಎಂಬ ಮುಸ್ಲಿಮನು ಓಡಿಹೋಗಿದ್ದ ಮುಸ್ಲಿಮರೆಲ್ಲಾ ತಮ್ಮ ಹಳ್ಳಿಗಳಿಗೆ ಹಿಂದಿರುಗುತ್ತಿದ್ದಾರೆಂದು ವರದಿ ಮಾಡಿದನು. ಗಾಂಧಿಗೆ ಸಂತೋಷವಾಯಿತು.

ಈ ಸಮಯದಲ್ಲಿ ನೆಹ್ರೂ ಗಾಂಧಿ ರಾಜಧಾನಿಗೆ ಬರಬೇಕೆಂದು ತಂತಿ ಕೊಟ್ಟನು. ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಕಡೆಯ ನಿರ್ಧಾರಕ್ಕೆ ಬರಬೇಕಾಗಿತ್ತು. ಪಾಕಿಸ್ತಾನವನ್ನೊಪ್ಪಬೇಕೇ ಇಲ್ಲವೇ? ಗಾಂಧಿ, ಧೂಳು ಸೆಕೆಗಳಿಂದ ಕೂಡಿದ ಐನೂರು ಮೈಲಿ ಪ್ರಯಾಣವನ್ನು ರೈಲಿನಲ್ಲಿ ಮಾಡಿದನು.

ಒಪ್ಪುವುದೇ ಸಹಿಸಲಸಾಧ್ಯವಾದ ಪರಿಸ್ಥಿತಿಯಿಂದ ಬಿಡುಗಡೆ ಹೊಂದುವ ದಾರಿಯೆಂದು ನೆಹ್ರು ಅಭಿಪ್ರಾಯಪಟ್ಟನು. ವಲ್ಲಭಾಯ್ ಪಟೇಲ್ ಅನುಮಾನಿಸಿದನು. ಜಿನ್ನಾ ಹೆದರಿಸದ ಅಂತರ್ಯುದ್ಧ ನಡೆಯು ವುದೇ ಎಂದು ಪರೀಕ್ಷಿಸಿಯೇ ಬಿಟ್ಟು ಗಲಭೆಗಳನ್ನು ಕಠಿಣವಾಗಿ ಅಡಗಿಸ ಬೇಕೆಂದನು. ಕಡೆಯಲ್ಲಿ ಆತನೂ ಒಪ್ಪಿದನು. ಎರಡೂವರೆ ವರ್ಷಗಳಾದ ಮೇಲೆ ಆತನು, "ಸರ್ವಸ್ವವನ್ನೂ ಕಳೆದುಕೊಳ್ಳುವ ಸಮಯ ಬಂದಾಗ ಮನಸ್ಸಿಲ್ಲದೆ ವಿಭಜನೆಗೆ ಒಪ್ಪಿದೆವು," ಎಂದು ಹೇಳಿದನು. ಪಾಕೀಸ್ತಾನ, ಇಲ್ಲದಿದ್ದರೆ, ಬ್ರಿಟಿಷ್ ರಾಜ್ಯಭಾರ ಎನ್ನುವಂತಾಯಿತು.

ಗಾಂಧಿ, ಕಾಂಗ್ರೆಸ್ಸಿನ ತೀರ್ಮಾನದಿಂದ ತನಗುಂಟಾದ ಅಸಮಾಧಾನ ವನ್ನು ಮರೆಸಲಿಲ್ಲ. ಮೇ ೭ರಲ್ಲಿ ದೆಹಲಿಯ ಹರಿಜನಕೇರಿಯ ಪ್ರಾರ್ಥನಾ ಸಭೆಯಲ್ಲಿ, "ಕಾಂಗ್ರೆಸ್ ಪಾಕೀಸ್ತಾನವನ್ನೊಪ್ಪಿಕೊಂಡಿದೆ. ಪಂಜಾಬು

ಬಂಗಾಳ ಭಾಗವಾಗಬೇಕೆಂದಿದೆ. ನನಗೆ ಎಂದೂ ಈ ವಿಭಜನೆ ಇಷ್ಟವಿಲ್ಲ; ಈಗಲೂ ಇಲ್ಲ. ಆದರೆ ನಾನೇನು ಮಾಡುವಂತಿದ್ದೇನೆ. ಈ ಯೋಜನೆಗೂ, ನನಗೂ ಸಂಬಂಧವಿಲ್ಲವೆಂದು ಮಾತ್ರ ಹೇಳಬಲ್ಲೆ. ಅದಕ್ಕೊಪ್ಪಿಕೊಳ್ಳುವಂತೆ ಮಾಡಲು ಭಗವಂತನೊಬ್ಬನನ್ನು ಬಿಟ್ಟರೆ ಬೇರೆ ಯಾರಿಗೂ ಸಾಧ್ಯವಿಲ್ಲ," ಎಂದನು. ದೇವರು ಕೈಹಾಕಲಿಲ್ಲ.

ಗಾಂಧಿ ಮುಖ್ಯ ಸಮಾಲೋಚನೆಗಾಗಿ ಮೌಂಟ್ ಬೇಟನ್ನರನ್ನು ನೋಡಲು ಹೋದನು. ಬ್ರಿಟಿಷರು ಸೈನ್ಯ ತೆಗೆದುಕೊಂಡು ಇಂಡಿಯಾವನ್ನು ಬಿಟ್ಟು ಹೊರಡಬೇಕೆಂದೂ, "ಇಂಡಿಯಾದಲ್ಲಿ ಅರಾಜಕತೆ," ಯುಂಟಾದರೂ ಚಿಂತೆಯಿಲ್ಲವೆಂದೂ ಹೇಳಿದನು. ಮೇಲೆ ನೋಡಲು ಇದು ಅರ್ಥವಿಲ್ಲದ ಮಾತಿನಂತೆ ಕಂಡರೂ ಅದರಲ್ಲಿ ಸಮಸ್ಯೆಯ ಪರಿಹಾರಕ್ಕೆ ಒಳ್ಳೆಯ ದಾರಿಯಿತ್ತು. ಒಂದು ಸರ್ಕಾರವಿಲ್ಲದಿದ್ದರೆ ಬ್ರಿಟಿಷರು ಇಂಡಿಯಾ ಬಿಟ್ಟುಹೋಗುವಂತಿಲ್ಲ. ಗಾಂಧಿ ಅದು ಕಾಂಗ್ರೆಸ್ ಸರ್ಕಾರವಾಗಿರಬೇಕೆಂದು ಮೌಂಟ್ ಬೇಟನ್‌ಗೆ ಹೇಳಿದನು. ಇಂಗ್ಲೆಂಡ್ ನಿರಾಕರಿಸಿದರೆ ಕಾಂಗ್ರೆಸ್ ಆಗಿನ ಸರ್ಕಾರವನ್ನು ಬಿಟ್ಟು ಹೊರಡುವುದು. ಆಗ ಕಾಂಗ್ರೆಸ್ ಎದುರು ಪಕ್ಷವಾಗಿರುವಾಗ ಮುಸ್ಲಿಂ ಅಲ್ಪಸಂಖ್ಯಾತರು ಇಂಡಿಯಾವನ್ನು ಆಳಲು ಸಾಧ್ಯವಿಲ್ಲದಿರುವುದರಿಂದ, ಬ್ರಿಟನ್ ಹೊರಡಲಿಷ್ಟಪಟ್ಟರೂ ನಿಲ್ಲಬೇಕಾಗುವುದು.

ಅಲ್ಪಸಂಖ್ಯಾತರನ್ನು ತೃಪ್ತಿಪಡಿಸಲು ಬಹು ಸಂಖ್ಯಾತರ ದ್ವೇಷ ಕಟ್ಟಿಕೊಳ್ಳಲು ಬ್ರಿಟನ್ನಿಗೆ ಸಾಧ್ಯವಿಲ್ಲವೆಂದು ಗಾಂಧಿ ಭಾವಿಸಿದನು. ಆದುದರಿಂದ ಕಾಂಗ್ರೆಸ್ಸಿಗೆ ಪಾಕೀಸ್ತಾನದ ಸೃಷ್ಟಿ ಇಷ್ಟವಿಲ್ಲದಿದ್ದರೆ ಇಂಗ್ಲೆಂಡು ಅದನ್ನು ಸೃಷ್ಟಿಸುವುದಿಲ್ಲವೆಂದೂ, ಪಾಕೀಸ್ತಾನವಿಲ್ಲದಿರುವುದೆಂದೂ ತಿಳಿದನು.

ಇದು ನಡೆಯಬೇಕಾದರೆ ಬ್ರಿಟಿಷ್ ಸರ್ಕಾರ, ಕಾಂಗ್ರೆಸ್ಸಿನ ಬೆಂಬಲದಿಂದ ಜಿನ್ನಾ ರೋಷವನ್ನೆದುರಿಸಬೇಕಾಗಿತ್ತು. ಬ್ರಿಟಿಷ್ ಸರ್ಕಾರಕ್ಕೆ ಅದು ಇಷ್ಟವಿರಲಿಲ್ಲ. ಬ್ರಿಟಿಷರು ಇಂಡಿಯಾ ಬಿಟ್ಟು ಹೋಗಿದ್ದರೆ ಕಾಂಗ್ರೆಸ್ ಒಂದೇ ಮುಸ್ಲಿಂ ಲೀಗನ್ನು ಎದುರಿಸಬೇಕಾಗುತ್ತಿತ್ತು. ಅದಕ್ಕೆ ಈ ಮಾರ್ಗ ಇಷ್ಟವಿರಲಿಲ್ಲ.

ಈ ದುಃಖದ ಸತ್ಯಗಳನ್ನು ಅರಿತುಕೊಂಡೇ ಗಾಂಧಿ ಕಲ್ಕತ್ತದಿಂದ ಬಂದನು. ಬಂಗಾಳ ಮೂಳೆಗಳಿಂದ ಮಾಂಸವನ್ನೂ, ಮಿದುಳಿನಿಂದ ಹೃದಯವನ್ನೂ, ಪಶ್ಚಿಮದಿಂದ ಪೂರ್ವವನ್ನೂ ಹರಿದುಹಾಕದಿದ್ದರೆ ಪಾಕೀಸ್ತಾನ ಜನಿಸುವಂತಿರಲಿಲ್ಲ. ಗಾಂಧಿ ಕಲ್ಕತ್ತಾ ಸಭೆಯನ್ನು, "ಮೇಲ್ಗಡೆ ಎಲ್ಲಾ ಕೆಟ್ಟಿರುವಾಗ, ಕೆಳಗಿರುವ ಜನರ ಒಳ್ಳೆಯತನ ಈ ಅನರ್ಥವನ್ನು ತಪ್ಪಿಸಲಾದೀತೆ?" ಎಂದು ಪ್ರಶ್ನಿಸಿದನು. ಇದೇ ಆತನ ಅಸಾಧ್ಯ ಕನಸು. ಬಂಗಾಳ, ಒಂದು ಭಾಷೆ, ಒಂದು ಸಂಸ್ಕೃತಿ ಪಡೆದು ಶತಮಾನದ ಪ್ರಾರಂಭದಲ್ಲಿ ಬ್ರಿಟಿಷರು ಭಾಗಮಾಡಲು ಪ್ರಯತ್ನಿಸಿದಾಗ ಒಮ್ಮತದಿಂದ ಪ್ರತಿಭಟಿಸಿತ್ತು. ಈಗ ಜಿನ್ನಾರನ್ನು ಎದುರಿಸಲಾರದೆ?

ಕಲ್ಕತ್ತೆಯಲ್ಲಿ ೬ ದಿನ ಬಿಡುವಿಲ್ಲದೆ ಕೆಲಸಮಾಡಿ, ಬಿಹಾರಿಗೆ ಹೋದರು. ಬಿಸಿಲು ವಿಪರೀತವಾಗಿದ್ದರೂ, ಅನೇಕ ಹಳ್ಳಿಗಳಿಗೆ ಹೋದರು. ಎಲ್ಲಿಯೂ ಒಂದೇ ಮಾತು. "ಹಿಂದುಗಳು ಸಹೋದರ ಭಾವ ತೋರಿದರೆ, ಬಿಹಾರಕ್ಕೆ, ಇಂಡಿಯಾಗೆ, ಜಗತ್ತಿಗೆ ಒಳ್ಳಿತಾಗುವುದು".

ಆತನ ಡಾಕ್ಟರ್, ಸುಶೀಲಾ ನಯ್ಯರ್, "ತುಂಬಾ ಆಯಾಸಮಾಡಿಕೊಳ್ಳುತ್ತಿದ್ದಾರೆ," ಎಂದಳು. ವಿಭಜನೆಯ ಪ್ರವಾಹವನ್ನಡ್ಡಗಟ್ಟಲು ಆತನು ಪ್ರಯತ್ನಮಾಡುತ್ತಿದ್ದನು. ಪ್ರಯತ್ನದಲ್ಲಿ ಸಾವುಂಟಾದರೆ ನಷ್ಟವೇನು? "ಈಗ ರೂಪುಗೊಳ್ಳುತ್ತಿರುವ ಇಂಡಿಯಾದಲ್ಲಿ ನನಗೆ ಸ್ಥಾನವಿಲ್ಲ. ೧೨೫ ವರ್ಷ ಬದುಕುವ ಆಸೆ ಬಿಟ್ಟಿದ್ದೇನೆ. ಇನ್ನೊಂದೆರಡು ವರ್ಷ ಇರಬಹುದು," ಎಂದು ಉದ್ವೇಗದಿಂದ ನಡುಗುವ ದನಿಯಲ್ಲಿ ಹೇಳಿದರು.

ಬ್ರಿಟಿಷ್ ಸರ್ಕಾರ ನಿರ್ಧಾರಕ್ಕೆ ಬಂದಿತ್ತು. ಪಂಜಾಬು, ಬಂಗಾಳ ಭಾಗವಾಗಲೊಪ್ಪಿದರೆ ಇಂಡಿಯಾವನ್ನು ವಿಭಾಗಿಸುವುದು. ಹೊಸ ದೆಹಲಿಯಲ್ಲಿ, ಆಕಾಶವಾಣಿಯಲ್ಲಿ ಮಾತನಾಡುತ್ತಾ ಪ್ಯಾಟ್ರಿಕ್ ಲಾರೆನ್ಸ್, "ನನಗೆ ದೇಶ ವಿಭಾಗವಾಗುವುದೂ ಇಷ್ಟವಿಲ್ಲ; ಪ್ರಾಂತ್ಯ ವಿಭಾಗವೂ ಇಷ್ಟವಿಲ್ಲ. ಅದೂ ಅಲ್ಲದೆ, ಎರಡು ಪಂಗಡಗಳೂ ಅವಿಭಕ್ತ ಇಂಡಿಯಾವನ್ನಿಟ್ಟುಕೊಳ್ಳಲು ಒಪ್ಪಂದಕ್ಕೆ ಬಂದರೆ ನಮ್ಮ ಅಭ್ಯಂತರವಿಲ್ಲ", ಎಂದು ಹೇಳಿದನು.

ಲಂಡನ್ನಿನಿಂದ ಹರ್ಬರ್ಟ್ ಎಲ್. ಮ್ಯಾಥ್ಯೂಸ್ ನ್ಯೂಯಾರ್ಕ್

ಟೈಮ್ಸ್‌ಗೆ ತಂತಿಕೊಟ್ಟನು. "ಈಗ ಇರುವ ತೊಂದರೆಯೆಲ್ಲಾ ಗಾಂಧಿಯೇ. ಆತನೇನಾದರೂ ಆಮರಣಾಂತ ಉಪವಾಸ ಪ್ರಾರಂಭಿಸಿದರೆ ನಮ್ಮ ಯೋಜನೆಗಳೆಲ್ಲಾ ಮುರಿದುಬಿದ್ದಂತೆಯೇ."

೧೯೪೭ರ ಜೂನ್ ೧೫ರಲ್ಲಿ ಅಖಿಲಭಾರತ ಕಾಂಗ್ರೆಸ್ ಸಭೆ ಯೋಜನೆಗೆ ತನ್ನ ಒಪ್ಪಂದವನ್ನು ಕೊಟ್ಟಿತು. ೧೫೭ ಜನ ಪರವಾಗಿಯೂ, ೨೯ ಜನ ವಿರೋಧವಾಗಿಯೂ ಮತಕೊಟ್ಟರು. ಕಾಂಗ್ರೆಸ್ ಗಾಂಧಿಯನ್ನು ಬಿಟ್ಟು ಬಿಟ್ಟಿತ್ತು. ಜೆ. ಬಿ. ಕೃಪಲಾನಿ ಭಾಷಣದಲ್ಲಿ, "ಮಾನವನ್ನು ಸಂರಕ್ಷಿಸಿ ಕೊಳ್ಳಲು ೧೦೭ ಜನ ಹೆಂಗಸರು ಮಕ್ಕಳು ಹಾರಿದ ಭಾವಿಯನ್ನು ನಾನು ಕಂಡಿದ್ದೇನೆ. ದೇವಸ್ಥಾನದಲ್ಲಿ ಇದಕ್ಕಾಗಿಯೇ ೫೦ ಜನ ಹೆಂಗಸರನ್ನು, ಅವರ ಗಂಡಸರು ಕೊಂದಿದ್ದಾರೆ. ಈ ಘೋರ ಅನುಭವಗಳು ನನ್ನ ಅಭಿಪ್ರಾಯಕ್ಕೆ ಬಣ್ಣ ಕೊಟ್ಟಿರಬಹುದು. ಹೆದರಿಕೆಯಿಂದ ಈ ನಿರ್ಧಾರಕ್ಕೆ ಬಂದಿದ್ದೇವೆಂದು ಕೆಲವು ಜನ ಆಕ್ಷೇಪಿಸಿದ್ದಾರೆ. ಅದು ನಿಜ; ಆದರೆ ಅವರು ಹೇಳುವ ಅರ್ಥದಿಂದ ಅಲ್ಲ. ಸತ್ತವರಿಗಾಗಿ, ವಿಧವೆಯರ ಗೋಳಿಗಾಗಿ, ಅನಾಥರ ಅಳುವಿಗಾಗಲಿ, ಸುಟ್ಟ ಮನೆಗಳಿಗೋಸ್ಕರವಾಗಲಿ ನಾವು ಹೆದರಲಿಲ್ಲ. ಹೀಗೆ ಇದ್ದರೆ, ಒಬ್ಬರಮೇಲೊಬ್ಬರು ಸೇಡುತೀರಿಸಿ ಕೊಳ್ಳುತ್ತಾ ನಾವು ನರಮಾಂಸ ಭಕ್ಷಕರೊ, ಇನ್ನೂ ಹೀನರೋ ಆಗುವ ಹೆದರಿಕೆಯಿದೆ", ಎಂದು ಹೇಳಿದನು.

ಮುಂದುವರಿಸುತ್ತ ಕೃಪಲಾನಿ, "ನಾನು ಮೂವತ್ತು ವರ್ಷಗಳಿಂದ ಗಾಂಧೀಜಿಯ ಬಳಿ ಇದ್ದೇನೆ. ಚಂಪಾರನ್‌ದಲ್ಲಿ ಆತನೊಡನೆ ಸೇರಿದೆ. ಎಂದೂ ನಾನು ವಿಶ್ವಾಸ ಕಳೆದುಕೊಳ್ಳಲಿಲ್ಲ. ಅಭಿಪ್ರಾಯ ಭೇದವಿದ್ದಾಗಲೂ ಆತನ ರಾಜಕೀಯ ದೃಷ್ಟಿ, ನಾನು ಎಷ್ಟೋ ಆಲೋಚಿಸಿ ಮಾಡಿದ ನಿರ್ಧಾರಗಳಿಗಿಂತ, ಸರಿಯಾದುದೆಂದು ನಂಬಿದ್ದೇನೆ. ಹೆದರಿಕೆಯೇ ಇಲ್ಲದ ಆತನೇ ಸರಿ, ನನ್ನ ನಿಲುವೆ ತಪ್ಪೆಂದು ಈಗಲೂ ಎನ್ನಿಸುತ್ತದೆ", ಎಂದನು. ಗಾಂಧಿಯ ವಿರೋಧಿಗಳಿಗೆಲ್ಲಾ ಬಹುಶಃ ಹೀಗೇ ಎನ್ನಿಸಿರಬೇಕು.

ಕೃಪಲಾನಿ, "ಆದರೆ ನಾನು ಆತನನ್ನು ವಿರೋಧಿಸಿದುದೇಕೆ? ಗಾಂಧಿಯ ಅಭಿಪ್ರಾಯುವೇ ಸರಿಯೆಂದು ತಿಳಿದರೂ ನಾನು ಆತನನ್ನೇಕೆ ಹಿಂಬಾಲಿಸಲಿಲ್ಲ? ಜನಾಂಗ ದೃಷ್ಟಿಯಿಂದ ಈ ಸಮಸ್ಯೆಯ ಪರಿಹಾರವನ್ನು

'ಆತನಿನ್ನೂ ಕಂಡುಹಿಡಿಯಲಿಲ್ಲ". ಸೋದರಭಾವ ಶಾಂತಿಯಿಂದಿರ ಬೇಕೆಂಬ ಗಾಂಧಿಯ ಕರೆಗೆ ದೇಶ ಕಿವಿಗೊಟ್ಟಿರಲಿಲ್ಲ.

ಇದರಿಂದಲೇ ಗಾಂಧಿ ಉಪವಾಸ ಮಾಡಲಿಲ್ಲ. ಆಮರಣಾಂತ ಉಪವಾಸ ಮಾಡಿದ್ದರೆ ಕಾಂಗ್ರೆಸ್ ವಿಭಜನೆಗೆ ಅಡಚಣೆಯಾಗುತ್ತಿತ್ತು. ಆದರೇನು? ಇಂಡಿಯಾದಲ್ಲಿ ಅಧಿಕಾರ ಸ್ವೀಕರಿಸುವಂತೆ ತಾನೇ ತಯಾರಿಸಿದ್ದ ಕಾಂಗ್ರೆಸ್ ಮುರಿದು ಬೀಳುತ್ತಿತ್ತು. ಜನರಾದರೂ ತನ್ನ ಕಡೆಗಿದ್ದಿದ್ದರೆ ಆತನು ಉಪವಾಸ ಮಾಡುತ್ತಿದ್ದನು. "ಮುಸ್ಲಿಮೇತರರಾದರೂ ನನ್ನ ಕಡೆಗಿದ್ದಿದ್ದರೆ ವಿಭಜನೆಯಾಗದಂತೆ ನಾನು ಮಾರ್ಗ ತೋರಿಸುತ್ತಿದ್ದೆ", ಎಂದು ಆತನು ಹೇಳಿದನು. ಆದರೆ ಮುಸ್ಲಿಮೇತರರ ಇಂಡಿಯಾ ಆತನ ಕೈಬಿಟ್ಟಿತ್ತು. "ನನ್ನ ಪ್ರಿಯ ಸ್ನೇಹಿತರು ಮಾಡಿದ, ಮಾಡುತ್ತಿರುವ ಕೆಲಸವನ್ನು ನಾನೊಪ್ಪುವುದಿಲ್ಲ", ಎಂದನು.

"೩೨ ವರ್ಷದ ಕೆಲಸ ನಿಷ್ಪ್ರಯೋಜಕವಾಗಿತ್ತು", ಎಂದು ಗಾಂಧಿ ಹೇಳಿದನು. ಇಂತಹ ಮಾತನ್ನು ತನ್ನೊಳಗೆ, ಬಹಿರಂಗವಾಗಿ ಹೇಳಲು ತುಂಬಾ ಧೈರ್ಯಬೇಕು. ಜೀವಮಾನದ ಕೆಲಸ ಮುರಿದು ಬಿದ್ದಿರಲು ಕೆಲಸ ಮಾಡುತ್ತಾ ಇದಕ್ಕೂ ಹೆಚ್ಚಿನ ಧೈರ್ಯಬೇಕು. ಗಾಂಧಿ ಇಂತಹ ಅತ್ಯುನ್ನತ ಶಿಖರವನ್ನು ಮುಟ್ಟಿದನು.

## ೩೧. ಗಾಂಧಿಯ ತೋಟದ ಅಗೆತ.

ಮತೀಯ ಭೇದಗಳು ಜನಾಂಗದ ಐಕ್ಯತೆಗಿಂತ ಬಲವಾಗಿದ್ದುದರಿಂದ ಗಾಂಧಿ ವಿಭಜನೆಯನ್ನು ತಪ್ಪಿಸಲಾಗಲಿಲ್ಲ. ಗಾಂಧಿ, ನೆಹ್ರು ಮುಂತಾದವರು ಐಕ್ಯತೆಗೆ ತೋರಿದ ಕಾರಣಗಳಿಗಿಂತ ಚಳುವಳಿಗಾರರು ತೋರಿದ ಭಿನ್ನತೆಗಳೇ ಬಲವಾಗಿ ಕಂಡುವು. ಇಂಡಿಯಾ ದೇಶದ ಜನಾಂಗ ಮತೀಯ ಕೊಡಲಿಯಿಂದ ಕಡಿಯಲ್ಪಡದಷ್ಟು ಭದ್ರವಾಗಿ ಇರಲಿಲ್ಲ. ಇಂಡಿಯಾ ಜನಾಂಗವಾಗುವ ಮೊದಲೇ ಬ್ರಿಟನ್ ಅದಕ್ಕೆ ಸ್ವಾತಂತ್ರ್ಯ ಕೊಟ್ಟಿತ್ತು. ಅದರಿಂದ ಅದು ಎರಡು ಜನಾಂಗವಾಯಿತು. ಇವುಗಳಲ್ಲಿ ಪಾಕೀಸ್ತಾನ ಜನಾಂಗವಾಗಲು ಪ್ರಯತ್ನಿಸುತ್ತಿದ್ದ ಒಂದು ಮತೀಯ ಪಂಗಡ, ಇಂಡಿಯಾ ಪ್ರಾಂತೀಯ ಭಾವನೆ, ಭಾಷಾಭೇದ, ಮತದ್ವೇಷಗಳಿಂದ ಹಿಂಸೆಪಡುತ್ತಿದ್ದ ಜನಾಂಗ. ಗಾಂಧಿ ಇನ್ನೂ ಜನಿಸದ ಜನಾಂಗಕ್ಕೆ ತಂದೆಯಾಗಿದ್ದನು.

ಎಲ್ಲಾ ಮಾನವರಂತೆ, ಗಾಂಧಿಯನ್ನೂ ಆತನ ಬಯಕೆಗಳಿಂದ ಅಳೆಯಬೇಕು. ಮಹಾ ನಾಯಕರನ್ನು ಹಿಂಬಾಲಿಸುವ ಅವಿಭಕ್ತ ರಾಷ್ಟ್ರ, ಧೈರ್ಯದ ಮನೆಯಾದ ದೇಶ, ಆತನಿಗೆ ಬೇಕಾಗಿತ್ತು. ಅದಕ್ಕಿಂತ ಕಡಿಮೆ ಯಾದುದನ್ನು ಆತನು ಸ್ವೀಕರಿಸುವಂತಿರಲಿಲ್ಲ. ಜೀವನದ ಕಡೆಯ ವರ್ಷ ಗಾಂಧಿಯನ್ನು ಆತನಿಗೆ ಬೇಡವಾದುದರಿಂದಲೂ ಅಳೆಯಬೇಕು. ಆತನ ಗುರಿ ಬ್ರಿಟಿಷರನ್ನೋಡಿಸಿ, ಇಂಡಿಯನ್ನರ ಸರ್ಕಾರ ಸ್ಥಾಪಿಸಬೇಕೆಂದಲ್ಲ. ಮತದ್ವೇಷದಿಂದ, ಅಧಿಕಾರ ಲಾಲಸೆಯಿಂದ, ರಕ್ತದ ಮಡುವಿನಲ್ಲಿ ಹುಟ್ಟಿದ ಇಬ್ಭಾಗ ಸ್ವಾತಂತ್ರ್ಯ ಆತನ ಮನಸ್ಸಿಗೆ ಹರ್ಷ ತರಲಿಲ್ಲ. ಅದನ್ನು ಬೇಡ ವೆನ್ನುವ ಶಕ್ತಿ ಆತನಿಗಿತ್ತು ಇದೇ ಆತನ ಮಾಹಾತ್ಮ್ಯದ ಅಳತೆಗೋಲು. ೧೯೪೭ರ ಆಗಸ್ಟ್ ೧೫ರಲ್ಲಿ ಇಂಡಿಯಾಕ್ಕೆ ಸ್ವಾತಂತ್ರ್ಯ ಬಂತು. ಆದರೆ ಗಾಂಧಿ ಆ ಸಮಾರಂಭದಲ್ಲಿ ಭಾಗವಹಿಸುವುದಿಲ್ಲವೆಂದನು. ಆತನು ಕಲ್ಕತ್ತೆ ಯಲ್ಲಿ ಗಲಭೆಗಳನ್ನಡಗಿಸುತ್ತಿದ್ದನು.

ಜನಾಂಗದ ಜನ್ಮದಿನೋತ್ಸವಕ್ಕೆ ಬರಲು ನಿರಾಕರಿಸಿ, ಜನತೆಗೆ ಒಂದು ಸಂದೇಶವನ್ನೂ ಕೊಡಲಿಲ್ಲ. ಆ ದಿನವನ್ನೆಲ್ಲಾ ಉಪವಾಸ, ಪ್ರಾರ್ಥನೆಗಳಲ್ಲಿ ಕಳೆದನು. ರಾಜಕುಮಾರಿ ಅಮೃತ ಕೌರ್‌ಗೆ ಮಾರನೆಯ ದಿನ, "ನನ್ನ ಒಳಗಡೆ ಗಲಭೆಯಾಗಿದೆ," ಎಂದು ಬರೆದನು. ಆ ಸಮಾ ರಂಭಗಳ ನಡುವೆ ಆತನ ಹೃದಯ ಭಾರವಾಗಿ ಮನಸ್ಸು ದುಃಖಪೂರಿತ ವಾಗಿತ್ತು. ನನ್ನಲ್ಲೇ ತಪ್ಪಿದೆಯೋ, ಅಥವಾ ನಿಜವಾಗಿ ಕೆಡಕುಂಟಾಗು ತ್ತಿದೆಯೋ? ನನ್ನ ಮನಸ್ಸಿಗೇನೋ ಸಮಾಧಾನವಿಲ್ಲ". ಆತನ ಗೀತೆಯ ಸಮತಾಭಾವ ಕದಲಿತ್ತು. ಆದರೆ ನಂಬಿಕೆ ಕೆಡಲಿಲ್ಲ "ಸಹಜವಾಗಿ ನ್ಯಾಯ ವಾದ ಯಾವ ಉದ್ದೇಶವೂ ವಿಫಲವಾಗುವುದಿಲ್ಲ".

ಆಗಸ್ಟ್ ೨೯ರಲ್ಲಿ ರಾಜಕುಮಾರಿಗೆ ಇನ್ನೊಂದು ಕಾಗದ ಬರೆದನು. "ಮಾನವ ವರ್ಗ ಒಂದು ಮಹಾ ಸಮುದ್ರ. ಸಮುದ್ರದ ಕೆಲವು ಹನಿಗಳು ಕೊಳಕಾದರೆ ಸಮುದ್ರವೆಲ್ಲಾ ಕೊಳಕಾಗುವುದಿಲ್ಲ". ತನ್ನಲ್ಲಿ, ಮಾನವ ವರ್ಗದಲ್ಲಿ ಆತನ ವಿಶ್ವಾಸ ಸಡಿಲವಾಗಲಿಲ್ಲ. "ನಾನು ಸೋಲನ್ನರಿಯದ ಯೋಧ. ವಿಭಜನೆ ನಡೆಯಿತು. ಆದರೆ ಒಳ್ಳೆಯ ನಡತೆಯಿಂದ ಆ ಕೆಡಕನ್ನು ಕಡಿಮೆಮಾಡಿ, ಕೆಟ್ಟುದರಿಂದ ಒಳ್ಳೆಯುದನ್ನು ಉತ್ಪತ್ತಿಮಾಡ

ಬಹುದು," ಎಂದು ಕಲ್ಕತ್ತೆಯ ಪ್ರಾರ್ಥನಾ ಸಭೆಯಲ್ಲಿ ಹೇಳಿದನು.

ತನ್ನ ಅಂತರಾತ್ಮವನ್ನೂ ಪರೀಕ್ಷಿಸಿಕೊಂಡನು. "ಈಗ ನಾನು ದಾರಿಗಾಣದಿರುವೆ. ಆತನು ಎಷ್ಟೋ ಪ್ರಶ್ನೆಗಳಿಗೆ ಉತ್ತರ ಕಾಣಬೇಕಾಗಿತ್ತು. ಕುರ್ಷಿದ್ ನವರೋಜಿಗೆ, "ನನಗೆ ಶಾಂತಿ ದೊರಕಲೆಂಬ ನಿನ್ನ ಪ್ರಾರ್ಥನೆಯನ್ನೇ ನಾನೂ ಮಾರ್ನುಡಿಯುತ್ತಿರುವೆ. ಅದು ಕಷ್ಟದ ಕೆಲಸ; ಆದರೂ ಪ್ರಯತ್ನಿಸುತ್ತಿದ್ದೇನೆ. ದೇವಾ, ಅಂಧಕಾರದಿಂದ ಬೆಳಕಿಗೆ ನಡೆಸು." ಆಗ ಆತನಿಗೆ ೭೮ನೆಯ ವರ್ಷ. ಆತನು ಕಟ್ಟಿದ್ದ ಜಗತ್ತು ಅರ್ಧರ್ಧ ಕುಸಿದು ಸುತ್ತಲೂ ಬಿದ್ದಿತ್ತು. ಆದರೂ ಭವಿಷ್ಯತ್ತಿನ ಆಲೋಚನೆಯಲ್ಲಿದ್ದನು.

ಅಸಿಸಿಯ ಫ್ರಾನ್ಸಿಸ್ ತೋಟವನ್ನಗೆಯುತ್ತಿದ್ದಾಗ, ಆ ಸಂಜೆಯೊಳಗಾಗಿ ಆತನು ಸಾಯಬೇಕೆಂದು ತಿಳಿದರೆ ಏನು ಮಾಡುವನೆಂದು ಯಾರೋ ಒಬ್ಬರು ಕೇಳಿದರು. "ತೋಟವನ್ನಗೆದು ಮುಗಿಸುತ್ತೇನೆ," ಎಂದು ಆತನು ಉತ್ತರವಿತ್ತನು. ಗಾಂಧಿ ತೋಟವನ್ನಗೆಯುತ್ತಾ ಹೋದನು.

## ೩೨. ಕಲಕಿದ ವಾತಾವರಣದ ಮೇಲೆ ಪ್ರೇಮದ ಪ್ರಭಾವ

ಆಗಸ್ಟ್ ೧೯೪೭ ರಲ್ಲಿ ಕಲ್ಕತ್ತೆಯಲ್ಲಿ ಗಾಂಧಿಯಿದ್ದುದು ಮತದ್ವೇಷದ ಬಿರುಗಾಳಿಯನ್ನು ಶಮನಮಾಡಿತು. ತುಂಡು ಪಂಚೆಯ ಮಾಯಾವಿಯನ್ನು ವೃತ್ತ ಪತ್ರಿಕೆಗಳು ಪ್ರಶಂಸಿಸಿದವು. ಆದರೆ ಬಂಗಾಳದ ವಿಭಜನೆಯಿಂದ ಹಿಂದು ಮುಸ್ಲಿಮರಿಬ್ಬಗೂ ತೊಂದರೆಯಾಗಿ ಹುಚ್ಚು ರೇಗಿತು. ವಿಭಜನೆಯಿಂದ ಸಮಸ್ಯೆ ಪರಿಹಾರವಾಗುವ ಬದಲು ತೊಡಕಾಯಿತು. ತಿಂಗಳ ಕೊನೆಯೊಳಗಾಗಿ, ಗಾಂಧಿ ಇದ್ದ ಮನೆಗೆ ಕೂಡ ದ್ವೇಷ ಪ್ರವಾಹ ನುಗ್ಗಿತು. ಆಗಸ್ಟ್ ೩೧ ರ ರಾತ್ರಿ ಗಾಂಧಿ ಆಗತಾನೆ ಮಲಗಲು ಹೋದಾಗ, ಒಂದು ಹಿಂದೂ ಗುಂಪು ಮುಸ್ಲಿಮರಿಂದ ಕೊಲ್ಲಲ್ಪಟ್ಟ ಒಬ್ಬ ಹಿಂದುವನ್ನೆತ್ತಿಕೊಂಡು ಅರಚುತ್ತಾ ಮನೆಯೊಳಗೆ ನುಗ್ಗಿದರು. ಕಿಟಕಿ ಗಾಜುಗಳನ್ನು ಮುಷ್ಟಿಗಳಿಂದ, ಕಲ್ಲುಗಳಿಂದ ಒಡೆದು, ಬಾಗಿಲನ್ನೊದ್ದು, ವಿದ್ಯುಚ್ಛಕ್ತಿಯ ತಂತಿಗಳನ್ನು ಕತ್ತರಿಸಲು ಹವಣಿಸಿದರು. ಗಾಂಧಿ ಅವರನ್ನು ಸಮಾಧಾನಮಾಡಲು ಎದ್ದನು. ಮಾರನೆಯ ದಿನ ಸರ್ದಾರ್ ವಲ್ಲಭಾಯ್ ಪಟೇಲ್‌ಗೆ ಕಾಗದ ಬರೆದರು. "ನಾನು ಕೂಗಿದೆ. ಆದರೆ

ಕೇಳುವವರಾರು ?" ಆತನನ್ನು ಕಾಪಾಡಲು ಮುಸ್ಲಿಮರು ಸುತ್ತಲೂ ನಿಂತರು. ಆತನ ಕಡೆ ಯಾರೋ ಒಂದು ಇಟ್ಟಿಗೆಯನ್ನೆಸೆದರು ಆತನ ಪಕ್ಕದಲ್ಲಿ ನಿಂತಿದ್ದ ಒಬ್ಬ ಮುಸ್ಲಿಮನಿಗೆ ಅದು ತಾಕಿತು. ಗಲಭೆಕಾರರಲ್ಲಿ ಒಬ್ಬನು ಒಂದು ಲಾಠಿಯಿಂದ ಹೊಡೆಯಲು, ಸ್ವಲ್ಪದರಲ್ಲಿ ಅದು ಮಹಾತ್ಮನ ತಲೆಗೆ ತಾಕದೆ ತಪ್ಪಿತು. ಆತನು ದುಃಖದಿಂದ ತಲೆಯಾಡಿಸಿದನು. ಕಡೆಗೆ ಪೋಲೀಸರು ಬಂದರು ; ಅವರ ಮುಖ್ಯಸ್ಥ ಗಾಂಧಿ ಕೋಣೆಯೊಳಕ್ಕೆ ಹೋಗಬೇಕೆಂದು ಬೇಡಿದನು. ಹೊರಗಡೆ ಪೋಲೀಸಿನವರು ಅಶ್ರುವಾಯು ವನ್ನುಪಯೋಗಿಸಿ ಗುಂಪನ್ನು ಚದರಿಸಿದರು.

ಗಾಂಧಿ ಉಪವಾಸಮಾಡಲು ನಿಶ್ಚಯಿಸಿದನು. ಸೆಪ್ಟೆಂಬರ್ ೧ರಲ್ಲಿ ಪತ್ರಿಕೆಗಳಿಗೆ, "ಅರಚುತ್ತಿರುವ ಜನರ ಗುಂಪಿನೆದುರಿಗೆ ಹೋಗಿ ನಿಂತರೆ ಪ್ರಯೋಜನವಿಲ್ಲ. ನಿನ್ನೆಯ ದಿನ ಆದರಿಂದೇನೂ ಪ್ರಯೋಜನವಾಗಲಿಲ್ಲ. ನಾನು ಹೇಳಿದ ಮಾತಿಗಿರದ ನನ್ನ ಬೆಲೆ ಉಪವಾಸಕ್ಕಿರಬಹುದು. ಕಲ್ಕತ್ತೆ ಯಲ್ಲಿ ಅದು ಗಲಭೆಕಾರರ ಹೃದಯ ಮುಟ್ಟಿದರೆ ಪಂಜಾಬಿನಲ್ಲೂ ಮುಟ್ಟ ಬಹುದು. ಆದುದರಿಂದ ಈ ರಾತ್ರಿ ೮-೧೫ ಘಂಟೆಗೆ ಉಪವಾಸ ಆರಂಭಿಸಿ ಕಲ್ಕತ್ತೆಗೆ ಜ್ಞಾನೋದಯವಾಗುವವರೆಗೂ ನಡೆಸುತ್ತೇನೆ". ಎಂದು ಹೇಳಿಕೆ ಕೊಟ್ಟನು. ಅದು ಆಮರಣಾಂತ ಉಪವಾಸ.

ಸೆಪ್ಟೆಂಬರ್ ೩ ನೇ ತಾರೀಖು ಜನರು ಗಾಂಧಿಯ ಮನೆಗೆ ಬರ ಲಾರಂಭಿಸಿದರು. ಆತನ ಜೀವವನ್ನುಳಿಸಲು ಏನು ಬೇಕಾದರೂ ಮಾಡು ವುದಾಗಿ ಹೇಳಿದರು. ಅದು ಸರಿಯಾದ ಮಾತಲ್ಲವೆಂದು ಗಾಂಧಿ ವಿವರಿಸಿ ದನು. ಆತನ ಉಪವಾಸದ ಉದ್ದೇಶ ಜನರ ಅಂತರಾತ್ಮವನ್ನೆಬ್ಬಿಸಿ ಅವರ ಮನಸ್ಸಿನ ಅಲಸಿಕೆಯನ್ನು ಹೋಗಲಾಡಿಸುವುದಕ್ಕಾಗಿ, ಹೃದಯ ಪರಿ ವರ್ತನೆ ಮುಖ್ಯ ; ಆತನ ಜೀವವುಳಿಸುವುದಲ್ಲ. ಗಣ್ಯ ಮುಸ್ಲಿಮರೂ ಪಾಕಿಸ್ತಾನದ ನಾವಿಕರ ಸಂಘದ ಒಬ್ಬ ಅಧಿಕಾರಿಯೂ ತಾವು ಮತ ಸೌಹಾ ರ್ದಕ್ಕಾಗಿ ಕೆಲಸಮಾಡುವುದಾಗಿ ವಾಗ್ದಾನವಿತ್ತರು. ಸೆಪ್ಟೆಂಬರ್ ೪ ನೇ ತಾರೀಕು ಪೌರಸಭೆ ನಗರದಲ್ಲಿ ೨೪ ಘಂಟೆಗಳ ಕಾಲ ಯಾವ ಗಲಭೆಯೂ ಆಗಲಿಲ್ಲವೆಂದು ವರದಿಮಾಡಿತು. ೫೦೦ ಜನ ಪೋಲೀಸಿನವರು, ಅವರ ಬ್ರಿಟಿಷ್ ಅಧಿಕಾರಿಗಳು ಕೂಡಿ ಸಹಾನುಭೂತಿ ತೋರಲು ಒಂದು ದಿನ

ಉಪವಾಸ ಮಾಡಿದರು. ಕೊಲೆಪಾತಕಿಗಳು, ಗಲಭೆಗಳ ನಾಯಕರು, ಗಾಂಧಿಯ ಬಳಿಗೆ ಬಂದು ಆತನ ನಲುಗಿದ ದೇಹ ಕಂಡು ಕಣ್ಣೀರು ಸುರಿಸಿದರು. ತಾವು ಗಲಭೆಮಾಡುವುದಿಲ್ಲವೆಂದು ಮಾತು ಕೊಟ್ಟರು. ಹಿಂದು, ಮುಸ್ಲಿಂ,ಕ್ರಿಶ್ಚಿಯನ್ ವರ್ತಕರ ಕೂಲಿಕಾರರ ನಿಯೋಗಗಳು ಆತನೆದುರಿಗೆ ಕಲ್ಕತ್ತೆಯಲ್ಲಿ ಇನ್ನೇನೂ ತೊಂದರೆಯಾಗುವುದಿಲ್ಲವೆಂದು ಶಪಥ ಮಾಡಿದರು. ಆತನಿಗೆ ಅವರಲ್ಲಿ ನಂಬಿಕೆಯಿದ್ದರೂ ಈ ಬಾರಿ ಬರೆದುಕೊಡಬೇಕೆಂದು ಕೇಳಿದನು. ಅದಕ್ಕೆ ಸಹಿ ಹಾಕುವ ಮೊದಲು, ಅವರು ಮಾತಿಗೆ ತಪ್ಪಿದರೆ ಮರಣದಲ್ಲೇ ಕೊನೆಗಾಣುವ ಉಪವಾಸವನ್ನು ತಾನು ಕೈಗೊಳ್ಳುವನೆಂಬ ವಿಚಾರವನ್ನು ಚನ್ನಾಗಿ ತಿಳಿದುಕೊಳ್ಳಬೇಕೆಂದು ಹೇಳಿದನು. ಅವರು ಹೊರಗೆ ಹೋಗಿ, ಆಲೋಚನೆ ಮಾಡಿ ಸಹಿ ಹಾಕಿದರು. ಆಗ ಆತನು ೭೩ ಘಂಟೆಗಳ ಕಾಲ ನಡೆಸಿದ್ದ ಉಪವಾಸವನ್ನು ಮುಕ್ತಾಯಗೊಳಿಸಿದನು.

ಆ ದಿನದಿಂದ ಅನೇಕ ತಿಂಗಳು ಪಂಜಾಬು, ಇತರ ಪ್ರಾಂತ್ಯಗಳು ಮತೀಯ ಕೊಲೆಗಳಿಂದ ನಡುಗಿದರೂ ಕಲ್ಕತ್ತ ಮತ್ತು ವಿಭಕ್ತ ಬಂಗಾಳ ಶಾಂತವಾಗಿದ್ದವು. ಬಂಗಾಳ ಮಹಾತ್ಮನಿಗೆ ಕೊಟ್ಟ ಮಾತನ್ನುಳಿಸಿಕೊಂಡಿತು.

ಸೆಪ್ಟೆಂಬರ್ ೭ ನೇ ತಾರೀಖು ಗಾಂಧಿ ಕಲ್ಕತ್ತೆಯಿಂದ ಪಂಜಾಬಿಗೆ ಹೊರಟನು. ತೋಟದ ಬೇರೊಂದು ಕಡೆ ಅಗೆಯಬೇಕಾಗಿತ್ತು. ದಾರಿಯಲ್ಲಿ, ದೆಹಲಿಯಲ್ಲಿ ರೈಲು ನಿಂತಾಗ ಸರ್ದಾರ್ ಪಟೇಲ್, ಆರೋಗ್ಯ ಮಂತ್ರಿ ರಾಜಕುಮಾರಿ ಅಮೃತ ಕೌರ್ ಮುಂತಾದವರು ದೆಹಲಿಯಲ್ಲಿ ಗಲಭೆಯುಂಟಾಗಿತ್ತೆಂಬ ದುಃಖ ವಾರ್ತೆಯನ್ನು ಆತನಿಗೆ ತಿಳಿಸಿದರು. ಮಹಾತ್ಮ ರೈಲು ಬಿಟ್ಟಿಳಿದನು. ಹರಿಜನ ಕೇರಿಯಲ್ಲಿರುವುದು ಕ್ಷೇಮಕರವಲ್ಲವೆಂದು ಆತನ ಸ್ನೇಹಿತರು ತಿಳಿಸಿದರು. ಆದುದರಿಂದ ಆತನು, "ಬಿರ್ಲಾಭವನ" ದಲ್ಲಿಳಿದನು.

ಗಲಭೆಗಳಿಂದ ಹೊಸ, ಹಳೆಯ ದೆಹಲಿಗಳಲ್ಲಿ ಅವಶ್ಯ ಕಾರ್ಯಾಚರಣೆಗಳು ನಿಂತುಹೋಗಿದ್ದುವು ; ತರಕಾರಿ, ಹಾಲು, ಹಣ್ಣು ಯಾವುದೂ ಸಿಕ್ಕುತ್ತಿರಲಿಲ್ಲ. ಸತ್ತವರ ಕೇರಿಯಂತಿತ್ತು. ಪಂಜಾಬಿನಿಂದ ಸಾವಿರಗಟ್ಟಲೆಯಾಗಿ ಬರುತ್ತಿದ್ದ ಹಿಂದು, ಸಿಕ್ ನಿರಾಶ್ರಿತರು, ಮುಸಲ್ಮಾನರ

ಘೋರ ಕೃತ್ಯಗಳನ್ನು ವಿವರಿಸಿ ದೆಹಲಿಯ ಮುಸ್ಲಿಮರ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಹುರಿದುಂಬಿಸಿದರು. ಕೊಲೆಯಿಂದ ತಪ್ಪಿಸಿಕೊಳ್ಳ ಬಲ್ಲವರು ಯಾರು ಇರಲಿಲ್ಲ.

ಪಟ್ಟಣದಿಂದ ಹದಿನಾಲ್ಕು ಮೈಲಿ ದೂರದ ಒಕ್ಲ ಹಳ್ಳಿಯಲ್ಲಿ ಮುಸ್ಲಿಂ ಅವಶೇಷಗಳಿಂದ ಸಂಪದ್ಯುಕ್ತವಾದ ಸ್ಥಳದಲ್ಲಿ ಜೇಮಿಯಾ-ಮಿಲಿಯಾ - ಇಸ್ಲಾಮಿಯ ಎಂಬ ವಿದ್ಯಾ ಮಂದಿರವಿತ್ತು. ಅಲ್ಲಿ ಪ್ರಾಥಮಿಕ ಶಾಲೆಯಿಂದ ವಿಶ್ವವಿದ್ಯಾಲಯದ ತರಗತಿಯವರೆಗೂ ಬೋಧನೆ ಯಿತ್ತು. ಅಲ್ಲಿಯ ಅಧ್ಯಕ್ಷ ವಿದ್ಯಾವಂತನೂ, ಗಣ್ಯನೂ ಆದ ಡಾಕ್ಟರ್ ಜಕೀರ್ ಹುಸೇನ್ ಗಾಂಧಿಯ ಸ್ನೇಹಿತನಾಗಿದ್ದನು. ೧೯೪೭ ರ ಆಗಸ್ಟಿನಿಂದ ಆಕ್ರೋಶಗೊಂಡ ಹಿಂದೂ, ಸಿಕ್ ನಿರಾಶ್ರಿತರಿಂದ ಸುತ್ತುವರಿಯಲ್ಪಟ್ಟಿದ್ದಿತು. ಅಲ್ಲಿದ್ದ ರೈತರಿಗೆ ಇಸ್ಲಾಂ ಮತಕ್ಕೆ ಸೇರಿದ ಮನುಷ್ಯನೆಂದರೂ, ಕಟ್ಟಡವೆಂದರೂ ದ್ವೇಷವುಂಟಾಗಿತ್ತು. ರಾತ್ರಿ ವಿದ್ಯಾರ್ಥಿಗಳೂ, ಉಪಾಧ್ಯಾಯರೂ ಘಂಟೆ ಘಂಟೆಗೂ ತೊಂದರೆಯನ್ನೆದುರು ನೋಡುತ್ತಾ ಕಾದಿದ್ದರು. ಸುತ್ತಲೂ ಸುಡುತ್ತಿದ್ದ ಮುಸ್ಲಿಂ ಹಳ್ಳಿಗಳೂ, ಮನೆಗಳೂ ಕಾಣಿಸುತ್ತಿದ್ದುವು. ಹತ್ತಿರವೇ ಯಮುನಾ ನದಿ. ರಾತ್ರಿಯೆಲ್ಲಾ ಮುಸ್ಲಿಮರು ಕಿರಿಚುತ್ತಾ ನದಿಗೆ ಧುಮುಕುವುದು, ಅವರ ಹಿಂದೆ ಶತ್ರುಗಳು ಧುಮುಕಿ ನೀರಿನಲ್ಲೇ ಹೊಡೆದಾಡುವುದು, ಕಡೆಗೆ ಕುತ್ತಿಗೆಯನ್ನು ಚಾಕು ಸೀಳಿದಾಗ ಕಿರಿಚಿ ಸುಮ್ಮನಾಗುವುದು ಅವರಿಗೆ ಕೇಳಿಸುತ್ತಿತ್ತು. ಹಿಂಸಾಚಕ್ರ ಹತ್ತಿರ ಹತ್ತಿರ ಬರುತ್ತಿತ್ತು. ಒಂದು ರಾತ್ರಿ, ಒಂದು ಬಾಡಿಗೆಯ ಮೋಟಾರು ಬಂತು. ಅದರಿಂದ ಜವಹರ್‌ಲಾಲ್ ನೆಹ್ರು ಇಳಿದರು. ಎಂದಿನಂತೆ ಧೈರ್ಯದಿಂದ ಒಬ್ಬನೇ ಹುಚ್ಚೆದ್ದವರ ನಡುವೆ ಹಾದು ಮುಸ್ಲಿಂ ಸ್ಕೂಲಿಗೆ ರಕ್ಷಣೆಕೊಡಲು ಜಕೀರ್ ಹುಸೇನರಲ್ಲಿಗೆ ಬಂದಿದ್ದನು. ಗಾಂಧಿ ಮುಸ್ಲಿಂ ಸ್ಕೂಲಿನ ಅಪಾಯವನ್ನರಿತಾಗ ಅಲ್ಲಿಗೆ ಕಾರಿನಲ್ಲಿ ಹೋಗಿ ಹುಸೇನರೊಡನೆ ಒಂದು ಘಂಟೆಯಿದ್ದು, ವಿದ್ಯಾರ್ಥಿಗಳಿಗೆ ಭಾಷಣ ಮಾಡಿದನು. ಆತನ ಬರುವಿಗೆ ಆ ಸ್ಥಳವನ್ನು ಪವಿತ್ರಮಾಡಿ ಅದಕ್ಕೆ ಒದಗಿದ ಅಪಾಯದಿಂದ ಪಾರುಮಾಡಿತು.

ಬಿರ್ಲಾ ಭವನಕ್ಕೆ ಹಿಂದಿರುಗುತ್ತಾ ಗಾಂಧಿ ನಿರಾಶ್ರಿತರ ವಸತಿಗಳಿಗೆ

ಭೇಟಿಕೊಟ್ಟನು. ಜತೆಯಲ್ಲಿ ರಕ್ಷಕರನ್ನು ಕರೆದುಕೊಂಡು ಹೋಗಬೇಕೆಂದು ಒತ್ತಾಯಮಾಡಿದರು. ಬಂಧುಗಳ ಸಾವಿನಿಂದ, ವಿರಹದಿಂದ ಮತಿಗೆಟ್ಟ ಹಿಂದುಗಳು, ಸಿಕ್ಕರು ಆತನನ್ನು ಮುಸ್ಲಿಂ ಪಕ್ಷಪಾತಿಯೆಂದು ಆಕ್ರಮಣ ಮಾಡಬಹುದು. ಆದರೆ ಆತನು ಒಪ್ಪಲಿಲ್ಲ. ಅತ್ಯಂತ ಉತ್ಸಾಹದಿಂದ ಪಟ್ಟಣದ ಸಮೀಪದಲ್ಲಿದ್ದ ನಿರಾಶ್ರಿತರ ವಸತಿಗಳಿಗೆ ಪ್ರತಿದಿನವೂ ಹೋಗುತ್ತಾ ಗಲಭೆ ಪ್ರದೇಶಗಳನ್ನು ವೀಕ್ಷಿಸುತ್ತಾ ಇದ್ದನು. ಸೆಪ್ಟೆಂಬರ್ ೨೦ ನೇ ತಾರೀಕು ಮಳೆ ಬಂತು. ಪ್ರಾರ್ಥನಾ ಸಭೆಯಲ್ಲಿ, "ಈ ಮಳೆಯಲ್ಲಿ ನನಗೆ ದೆಹಲಿಯ, ಪೂರ್ವ, ಪಶ್ಚಿಮ ಪಂಜಾಬುಗಳ ನಿರಾಶ್ರಿತರು ನೆನಪಿಗೆ ಬರುತ್ತಿದ್ದಾರೆ. ಪಶ್ಚಿಮ ಪಂಜಾಬಿನಿಂದ ಇಂಡಿಯಾಕ್ಕೆ ೫೭ ಮೈಲಿ ಉದ್ದದ ನಿರಾಶ್ರಿತರ ತಂಡ ಬರುತ್ತಿರುವುದೆಂದು ಕೇಳಿದೆ. ಹೀಗಾಗುತ್ತಿರಬಹುದೆಂದು ನೆನೆಸಿಕೊಂಡರೆ ನನಗೆ ತಲೆ ತಿರುಗಿದಂತಾಗುವುದು. ಜಗತ್ತಿನ ಚರಿತ್ರೆಯಲ್ಲೆಲ್ಲೂ ಇಂತಹ ಘಟನೆ ನಡೆದಿಲ್ಲ. ಆದರಿಂದ ನನಗೂ, ನಿಮಗೂ ನಾಚಿಕೆಯಿಂದ ತಲೆ ತಗ್ಗಿಸುವಂತಾಗುತ್ತದೆ." ಆತನೇನೂ ಉತ್ಪ್ರೇಕ್ಷೆಮಾಡುತ್ತಿರಲಿಲ್ಲ. ಈ ೫೭ ಮೈಲಿಯ ತಂಡದಂತಹ ಅನೇಕ ತಂಡಗಳು ಗುಂಪುಗಳಾಗಿ, ೧೫,೦೦೦,೦೦೦ ದುರದೃಷ್ಟಶಾಲಿಗಳು ಮನೆಗಳಿಂದ ನೂರಾರು ಮೈಲಿದೂರದ ದುಃಖ, ರೋಗ ಮರಣಗಳ ಕಡೆ ಸಾಗುತ್ತಿದ್ದರು. ಪಾಕಿಸ್ತಾನಕ್ಕೆ ಸೇರಿದ ಪಂಜಾಬಿನ ಭಾಗದಿಂದ ದೆಹಲಿಯ ಕಡೆಗೆ ಲಕ್ಷಾಂತರ ಹಿಂದುಗಳು, ಸಿಕ್ಕರು, ಮುಸ್ಲಿಮರ ಚಾಕು, ದೊಣ್ಣೆಗಳಿಂದ ಪಾರಾಗಲು ಬರುತ್ತಿದ್ದರು. ಹಿಂದುಗಳ, ಸಿಕ್ಕರ ಲಾಠಿ, ಭರ್ಜಿಗಳನ್ನು ತಪ್ಪಿಸಿಕೊಳ್ಳಲು ಲಕ್ಷಾಂತರ ಮುಸ್ಲಿಮರು ಪಾಕಿಸ್ತಾನದ ಕಡೆಗೆ ಸಾಗುತ್ತಿದ್ದರು. ಹೆದರಿ ಓಡುತ್ತಿದ್ದ ಜನರಲ್ಲವೆನ್ನಲು ಅವರ ಜತೆಯಲ್ಲಿ ಆಯಾಸಗೊಂಡ ಕೆಲವು ಜನ ಪೋಲಿಸಿನವರು, ಸ್ವಯಂಸೇವಕರು ಇದ್ದರು. ಕೆಲವರು ಎತ್ತಿನ ಗಾಡಿಯಲ್ಲಿ, ಅದಿಲ್ಲದವರು ಅಥವಾ ಕಳೆದುಕೊಂಡವರು ಕಾಲ್ನಡಿಗೆಯಲ್ಲಿ; ಸಂಸಾರವೆಲ್ಲಾ ಅನೇಕ ವಾರಗಳು ಧೂಳಿನಲ್ಲಿ ನಡೆದರು; ಹಿರಿಯರು ಮಕ್ಕಳನ್ನೂ, ಕೈಲಾಗದವರನ್ನೂ, ಮುದುಕರನ್ನೂ ಭುಜದ ಮೇಲೆ ಬುಟ್ಟಿಗಳಲ್ಲಿ ಹೊತ್ತಿನಡೆದರು. ಅನೇಕ ಬಾರಿ ದುರ್ಬಲರನ್ನು ರಸ್ತೆಯ ಪಕ್ಕದಲ್ಲಿ ಸಾಯಲು ಬಿಟ್ಟು ನಡೆಯುತ್ತಿದ್ದರು. ಈ ಗುಂಪಿನಲ್ಲಿ

ಹಾಂತಿ, ಭೇದಿ, ಸಿಡುಬು ಮುಂತಾದುವು ಹರಡಿತ್ತು. ಹೆಣಗಳು, ಅವುಗಳ ಮೇಲೆ ಹಾರಾಡುತ್ತಿದ್ದ ಹದ್ದುಗಳು ಅವರು ಹೋದ ದಾರಿಯನ್ನು ತೋರಿಸುತ್ತಿದ್ದುವು. ಕೆಲವು ಬಾರಿ ವಿರೋಧ ಪಕ್ಷದ ಎರಡು ಗುಂಪು ಗಳನ್ನು ಸೇರಿ, ಆಯಾಸವಾಗದಿದ್ದರೂ, ಬೇಕಾದಷ್ಟು ತಾಪತ್ರಯವಿದ್ದರೂ, ಅಲ್ಲಿ ಹೊಲಗಳಲ್ಲಿ ಸೇಡಿನ ಭಯಂಕರ ವ್ಯಾಪಾರವನ್ನು ಮುಂದುವರಿಸು ತ್ತಿದ್ದರು. ಭಾರತದ ಕಣಜವಾದ ಪಂಜಾಬಿನ ಬೆಳೆ, ಸಾವಿರಾರು ಆಯಾಸಗೊಂಡ ಕಾಲುಗಳಿಂದ ತುಳಿಯಲ್ಪಟ್ಟು, ಅನ್ನಕ್ಕಿಲ್ಲದೆ ಪರಿತಪಿಸು ತ್ತಿತ್ತು. ಇಂಡಿಯಾದಲ್ಲೆಲ್ಲಾ ಕ್ಷಾಮ ಹರಡಿತು. ದೆಹಲಿ ಪಟ್ಟಣ ತುಂಬುವ ಮೊದಲು ನಿರಾಶ್ರಿತರನ್ನು ಹೊರಗೇ ನಿಲ್ಲಿಸಲು ನೆಹ್ರು ಸರ್ಕಾರ ಏರ್ಪಾಟು ಮಾಡಿತು. ಆದರೆ ಸಾವಿರಾರು ಜನ ತಪ್ಪಿಸಿಕೊಂಡು ಒಳಕ್ಕೆ ನುಗ್ಗಿ, ಅಂಗಡಿಗಳನ್ನು ಲೂಟಿಮಾಡಿ, ಮನೆಬಾಗಿಲುಗಳಲ್ಲಿ, ಬೀದಿಯಲ್ಲಿ, ಬಚ್ಚಲು ಗಳಲ್ಲಿ, ದೇವಸ್ಥಾನಗಳಲ್ಲಿ, ಖಾಲಿಮನೆಗಳಲ್ಲಿ ಮಲಗಿ ಸರ್ಕಾರವನ್ನು, ದೆಹಲಿಯ ಜೀವನವನ್ನು ಹದಗೆಡಿಸಿದಂತಾಯಿತು. ಕಾಡು ಮನುಷ್ಯರಂತೇ ಜೀವಿಸುತ್ತಿದ್ದ ನಿರಾಶ್ರಿತರು ಸಂಸ್ಕೃತ ಜೀವನಕ್ಕೇ ತಿಲಾಂಜಲಿ ಕೊಟ್ಟರು.

ಈ ಹುಚ್ಚರ, ಸತ್ತವರ ಪಟ್ಟಣದಲ್ಲಿ ಮಹಾತ್ಮ ಗಾಂಧಿ, ಪ್ರೇಮ, ಶಾಂತಿಗಳ ಸಂದೇಶ ಹರಡಲು ಪ್ರಯತ್ನಪಟ್ಟನು. ಕುದಿಯುವ ಕೋಪ, ರೋಷಗಳಿಗೆ ಅಡ್ಡವಾಗಿ ನಿಂತು ಶಾಂತವಾಗಿ, “ಮುಸ್ಲಿಮರು ಇರಬೇಕು; ಅವರನ್ನು ಹಿಂಸಿಸಿದ ಹಿಂದುಗಳು, ಸಿಕ್ಕರು ತಮ್ಮ ಜಾತಿಗೇ ಅವಮಾನ ಮಾಡಿ, ಇಂಡಿಯಾಕ್ಕೆ ತುಂಬಾ ತೊಂದರೆ ಮಾಡಿದರು. ಆಯುಧಪಾಣಿ ಗಳು ಅವುಗಳನ್ನು ಬಿಟ್ಟು ಕೊಡಬೇಕು. ಈಗಾಗಲೇ ಕೆಲವರು ಅವು ಗಳನ್ನು ತಂದು ಕೊಟ್ಟಿದ್ದಾರೆ. ಮುಸ್ಲಿಮರ ಅತಿ ದ್ವೇಷಿಗಳೂ, ಯುದ್ಧ ವಿದ್ಯೆಯಲ್ಲಿ ನುರಿತವರೂ, ಆದ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ೫೦೦ ಜನ ಸದಸ್ಯರು ಸೇರಿದ್ದ ಸಭೆಗೆ ಹೋಗಿ, “ನೀವು ಮತದ್ವೇಷದಿಂದ ಹಿಂದೂ ಧರ್ಮದ ಕೊಲೆ ಮಾಡುತ್ತಿದ್ದೀರಿ. ಪಾಕಿಸ್ತಾನದ ಕೊಲೆ, ಹಿಂದೂ ಸ್ಥಾನದ ಕೊಲೆಗೆ ಸಾಕಾದ ಕಾರಣವಲ್ಲ. ಹಿಂಸೆಗೆ ಪ್ರತಿಹಿಂಸೆಯಿಂದ ಪ್ರಯೋಜನವಿಲ್ಲ. ನಾನು ಮುಸಲ್ಮಾನರ, ಹಿಂದೂಗಳ, ಸಿಕ್ಕರ ಸ್ನೇಹಿತ. ಎಲ್ಲರಿಗೂ ಹುಚ್ಚು ಹಿಡಿದಿದೆ”, ಎಂದು ಹೇಳಿದನು.

ಭಾಷಣವಾದ ಮೇಲೆ ಪ್ರಶ್ನೆ ಕೇಳಬೇಕೆಂದು ಹೇಳಿದನು. ಒಬ್ಬಾತ, " ಹಿಂದೂಧರ್ಮ ದುಷ್ಟನ ಕೊಲೆಗೆ ಅವಕಾಶ ಕೊಡುವುದಿಲ್ಲವೆ ? " ಎಂದು ಕೇಳಿದನು.

ಗಾಂಧಿ, " ಒಬ್ಬ ದುಷ್ಟನಿಗೆ ಇನ್ನೊಬ್ಬ ದುಷ್ಟನನ್ನು ಕೊಲ್ಲುವ ಅಧಿಕಾರವಿಲ್ಲ", ಎಂದು ಉತ್ತರವಿತ್ತನು.

ದಿನವೆಲ್ಲಾ ಊರಲ್ಲಿ ತಿರುಗುತ್ತಿದ್ದು ಜನರ ಗುಂಪು ಸೇರುತ್ತಿದ್ದ ಪ್ರದೇಶಗಳಿಗೆಲ್ಲಾ ಓಡುತ್ತಿದ್ದನು. ಅವರ ನಡುವೆ ನಗುಮುಖದಿಂದ ಕೈ ಜೋಡಿಸಿ ನಮಸ್ಕರಿಸುತ್ತಾ ಆತನು ಬರಲು ಜನರು ದಾರಿ ಕೊಡುತ್ತಿದ್ದರು. ಕೋಪ ಜ್ವಾಲೆಯಡಗುತ್ತಿತ್ತು. ೧೦೦,೦೦೦ ಗಡ್ಡದ ಸಿಕ್ಕರೂ, ಅವರ ಸಂಸಾರಗಳೂ ಸಮಾರಂಭ ನಡೆಸುವ ಕಡೆ ಹೋಗಿ, ಅವರು ಮುಸ್ಲಿಮರಿಗೆ ಕೊಟ್ಟ ಹಿಂಸೆಯನ್ನು ಖಂಡಿಸಿದನು. ಸಿಕ್ಕರು ಕುಡಿದು ಗಲಭೆಯೆಬ್ಬಿಸಿದ ರೆಂದು ಹೇಳಿದನು. " ನಿಮ್ಮ ಹೃದಯ ಪರಿಶುದ್ಧವಾಗಿದ್ದರೆ ಎಲ್ಲಾ ಪಂಗಡದವರೂ ನಿಮ್ಮನ್ನು ಹಿಂಬಾಲಿಸುತ್ತಾರೆ". ಪ್ರಾರ್ಥನಾ ಸಭೆಗಳಲ್ಲಿ ನಿರಾಶ್ರಿತರಿಗಾಗಿ ಕಂಬಳಿಗಳನ್ನು ಕೊಡಿಸಿದ್ದನು. ನಿರಾಶ್ರಿತ ವಸತಿಗಳಲ್ಲಿ ಹೋಗಿ ಚೊಕ್ಕಟವಾಗಿರಬೇಕೆಂದೂ, ನೂಲಬೇಕೆಂದೂ, ಉಪದೇಶಿಸು ತ್ತಿದ್ದನು. ಹಿಂದುಗಳೇ ಹೆಚ್ಚಾಗಿ ಸೇರುತ್ತಿದ್ದ ಪ್ರಾರ್ಥನಾ ಸಭೆಗಳಲ್ಲಿ ಪ್ರತಿ ಸಾಯಂಕಾಲ, " ಕೊರಾನಿನಿಂದ ಕೆಲವು ಶ್ಲೋಕಗಳನ್ನು ಓದಿದರೆ ಯಾರದಾದರೂ ಆಕ್ಷೇಪಣೆಯಿದೆಯೇ ? " ಎಂದು ಕೇಳುತ್ತಿದ್ದನು. ಸಾಧಾರಣವಾಗಿ ಒಬ್ಬರಿಬ್ಬರು ಆಕ್ಷೇಪಿಸುತ್ತಿದ್ದರು. ಆಕ್ಷೇಪಣೆಯಿದ್ದರೂ ಓದುವಾಗ ಸುಮ್ಮನಿರುವರೇ ? ಇರುವರು. ಮಿಕ್ಕವರಿಗೆ ಅವರ ಮೇಲೆ ಅಸಮಾಧಾನವೇ ? ಇಲ್ಲ. ಅನಂತರ ಶ್ಲೋಕಗಳನ್ನೋದುತ್ತಿದ್ದನು. ಇದು ಸೌಹಾರ್ದ ಶಿಸ್ತುಗಳ ಜೀವಂತ ಪಾಠವಾಗುತ್ತಿತ್ತು. ಎಲ್ಲರೂ ಎಲ್ಲರ ಅಭಿಪ್ರಾಯವನ್ನು ಒಪ್ಪುವಂತಿಲ್ಲದಿದ್ದರೂ ಸಮಾಧಾನದಿಂದಿರ ಬಹುದು.

ಈ ನಡುವೆ ಆತನು ರಾಜಕೀಯ ಭವಿತವ್ಯದ ಕಡೆ ಗಮನ ಕೊಡದೆ ಇರಲಿಲ್ಲ. ೧೯೪೭ರ ಡಿಸೆಂಬರ್ ಮೊದಲ ಪಕ್ಷದಲ್ಲಿ ಸರ್ಕಾರಕ್ಕೆ ಸೇರದ, ಹರಿಜನೋದ್ಧಾರ, ನೂಲುವುದು, ಮೂಲ ಶಿಕ್ಷಣ, ಪ್ರಕೃತಿ ಚಿಕಿತ್ಸೆ

ಮುಂತಾದುವುಗಳಲ್ಲಿ ಸಹೋದ್ಯೋಗಿಗಳಾಗಿದ್ದವರನ್ನು ಕರೆದು ಎಲ್ಲರೂ ಸೇರಿ ರಚನಾತ್ಮಕ ಸಂಘವನ್ನು ವಿರಚಿಸಬೇಕೆಂದು ಹೇಳಿದನು. ಅಧಿಕಾರ ಲಾಲಸೆಯನ್ನು ಬಿಟ್ಟು ಮತದಾರರಿಗೆ ನಿಸ್ವಾರ್ಥ ಸೇವೆ ಸಲ್ಲಿಸಬೇಕು. ಕಾಂಗ್ರೆಸ್ಸಿನ ಮುಂದಾಳುತನ ಸಾಧ್ಯವಿಲ್ಲದೆ, ಸರ್ಕಾರವನ್ನು ಸರಿಯಾದ ದಾರಿಯಲ್ಲಿ ನಡೆಸುವ ಹೊಸ ರಥವನ್ನು ಕಟ್ಟಬೇಕೆಂದು ಉದ್ದೇಶಿಸಿದನು.

ಒಬ್ಬಾತ, "ಈ ರಚನಾತ್ಮಕ ಕಾರ್ಯವನ್ನು ಕಾಂಗ್ರೆಸ್ಸಾಗಲಿ, ಸರ್ಕಾರವಾಗಲಿ, ಏಕೆ ಮಾಡಕೂಡದು?" ಎಂದು ಕೇಳಿದನು.

"ಕಾಂಗ್ರೆಸ್ಸಿಗರಿಗೆ ರಚನಾತ್ಮಕ ಕಾರ್ಯದಲ್ಲಿ ಸಾಕಾದಷ್ಟು ಆಸಕ್ತಿಯಿಲ್ಲ. ನಮ್ಮ ಕನಸಿನ ಸಮಾಜ ಇಂದಿನ ಕಾಂಗ್ರೆಸ್ ಪಕ್ಷದ ಸಹಾಯದಿಂದ ಬರುವುದೆಂಬ ಆಸೆಯನ್ನು ನಾವು ಬಿಡಬೇಕು. ಈಗಿರುವ ನೀತಿಭ್ರಷ್ಟತೆ ನನ್ನ ಧೈರ್ಯಗೆಡಿಸಿದೆ. ಓಟುಗಳಿಂದ ಅಧಿಕಾರ ದೊರೆಯುವುದೆಂದು ಎಲ್ಲರೂ ಅವುಗಳಿಗಾಗಿ ಹಾತೊರೆಯುತ್ತಿದ್ದಾರೆ," ಎಂದು ಗಾಂಧಿ ಉತ್ತರವಿತ್ತನು. ಕೃಪಲಾನಿ ತೊಂದರೆಯನ್ನು, "ಅಧಿಕಾರ ಗರ್ವ, ನೀತಿಭ್ರಷ್ಟತೆ, ಲಂಚಕೋರತನ, ಕಾಳಸಂತೆ, ದುರ್ಲಾಭದಾಸೆ," ಎಂದು ವಿವರಿಸಿದ್ದಾರೆ.

ಗಾಂಧಿಗೆ ಕಾಂಗ್ರೆಸ್ ಮತ್ತು ಸರ್ಕಾರಗಳಲ್ಲಿ ಇಷ್ಟು ನಿರಾಸೆಯುಂಟಾಗಿದ್ದರೂ ಆತನಿನ್ನೂ ಇಂಡಿಯಾದ ರಾಜಕೀಯದ, ನೆಹ್ರು ಮುಂತಾದ ಮಂತ್ರಿಗಳ ಊರುಗೋಲಾಗಿದ್ದನು. ಆದರೆ ಆತನ ಕಾರ್ಯಕ್ರಮಕ್ಕೆ ವಿಸ್ತಾರ ಕ್ಷೇತ್ರ ಬೇಕಾಗಿತ್ತು. ಪಂಜಾಬು, ಪಾಕಿಸ್ತಾನಗಳನ್ನು ಸಮಾಧಾನಕ್ಕೆ ತರಬೇಕೆಂದಿದ್ದನು. ಪಾಕೀಸ್ತಾನದ ಪ್ರಯಾಣಕ್ಕೆ ಸಿದ್ಧತೆಗಳಾಗುತ್ತಿದ್ದುವು. ಆದರೆ ದೆಹಲಿಯನ್ನು ಬಿಟ್ಟು ಹೋಗಲು ಆತನು ಹಿಂಜರಿಯುತ್ತಿದ್ದನು. ಅಲ್ಲಲ್ಲಿ ಹಿಂಸಾಕೃತ್ಯಗಳು ನಡೆಯುತ್ತಲೇ ಇದ್ದವು. ಪರಿಸ್ಥಿತಿ ಉತ್ತಮವಾಯಿತೆಂದು ತಿಳಿದು ಒಬ್ಬ ಮುಸ್ಲಿಂ ವರ್ತಕ ಅಂಗಡಿಯ ಬಾಗಿಲನ್ನು ತೆಗೆದನು. ಗುಂಡಿನೇಟಿನಿಂದ ಸತ್ತನು. ಪಟ್ಟಣದ ಅನೇಕ ಪ್ರದೇಶಗಳಲ್ಲಿ ಮುಸ್ಲಿಮರು ಓಡಾಡುವುದೇ ಅಪಾಯಕರವಾಗಿತ್ತು. ಗಲಭೆಗಳು ಪುನಃ ಪ್ರಾರಂಭವಾಗಬಹುದೆಂದು ಗಾಂಧಿ ಹೆದರಿ, ಉಪವಾಸಕ್ಕಾರಂಭಿಸಲು ನಿಶ್ಚಯಿಸಿದರು. "ಮಿಂಚಿನಂತೆ ನನಗೆ ಹಾಗೆ ಹೊಳೆಯಿತು,"

ಎಂದು ಹೇಳಿ, ನೆಹ್ರು ಪಟೇಲ್, ವೈದ್ಯರು ಯಾರನ್ನೂ ಕೇಳದೆ ಉಪವಾಸ ಮಾಡುವುದಾಗಿ ಪ್ರಕಟಿಸಿದನು. ಇದೇ ಆತನ ಕಡೆಯ ಉಪವಾಸ; ಸೌಜನ್ಯದ ಅಳಿಸಲಾಗದ ಕುರುಹನ್ನು ಅದು ಇಂಡಿಯಾದ ಮೇಲೆ ಅಚ್ಚೊತ್ತಿತು.

### ೩೩. ಬಲಿದಾನ ಮಾಡಲು ಸಿದ್ಧನಾಗಿರುವವರಿಗೇ ವಿಜಯ

೧೯೪೮ರ ಜನವರಿ ೧೩ನೆಯ ತಾರೀಖು ಮಹಾತ್ಮ ಗಾಂಧಿ ತನ್ನ ಕಡೆಯ ಉಪವಾಸವನ್ನು ಪ್ರಾರಂಭಿಸಿದನು. ಎಲ್ಲರ ಅಂತರಾತ್ಮಗಳನ್ನು, ಇಂಡಿಯಾದ ಎರಡು ಭಾಗಗಳಲ್ಲಿದ್ದ ಎಲ್ಲಾ ಹಿಂದೂ ಮುಸ್ಲಿಮರನ್ನು, ಕುರಿತ ಆಮರಣಾಂತ ಉಪವಾಸವದು. ಎಲ್ಲರೂ ಮಾರ್ನುಡಿದರೆ ಸಂತೋಷ; ಒಂದು ಪಂಗಡದ ಸಿಕ್ಕರಾಗಿರಬಹುದು, ಮೇಲೆ ಪರಿಣಾಮ ವಾದರೆ ಅದೊಂದು ಪವಾಡವೆಂದು ತಿಳಿದು ಅವರೊಂದಿಗೆ ಜೀವಿಸಲು ಸಿದ್ಧನಾಗಿದ್ದನು. ತಾನು ಸಾಯಬೇಕೆಂದು ಆತನು ತಿಳಿದಿದ್ದನು. "ಇಂಡಿಯಾ, ಹಿಂದೂ, ಸಿಕ್, ಇಸ್ಲಾಂ ಮತಗಳ ನಾಶವನ್ನು ಅಸಹಾಯನಾಗಿ ನೋಡುತ್ತಿರುವುದಕ್ಕಿಂತ ಸಾವೇ ನನಗೆ ಮುಕ್ತಿ". ಸ್ನೇಹಿತರು ಪೇಚಾಡಬೇಕಾಗಿಲ್ಲ. ನಾನು ದೇವರ ರಕ್ಷಣೆಯಲ್ಲಿ ಇದ್ದೇನೆ".

ಮೊದಲ ದಿನ ಬಿರ್ಲಾ ಭವನದ ಹಿಂದೆ ಪ್ರಾರ್ಥನಾ ಸಭೆಗೆ ಎಂದಿನಂತೆ ನಡೆದು ಹೋದನು. "ಮುಸ್ಲಿಮರಿಗಾಗಿ ಉಪವಾಸ ಮಾಡುತ್ತೇನೆಂದು ಕೆಲವರು ಆಕ್ಷೇಪಿಸಿದರು. ಅದು ನಿಜ. ನನ್ನ ಜೀವಮಾನವೆಲ್ಲಾ ನಾನು ಎಲ್ಲರೂ ಇರಬೇಕಾದಂತೆ, ಅಲ್ಪಸಂಖ್ಯಾತರ, ಕಷ್ಟದಲ್ಲಿರುವವರ ಸಹಾಯಕ್ಕಾಗಿ ನಿಂತಿದ್ದೇನೆ. ಎಲ್ಲರ ಹೃದಯವೂ ಪರಿಶುದ್ಧವಾಗುವುದೆಂದು ನಂಬಿದ್ದೇನೆ". ಪಾಕೀಸ್ತಾನದ ಮುಸ್ಲಿಮರೇನುಮಾಡುವರೆಂಬುದು ಮುಖ್ಯವಲ್ಲ. ಹಿಂದುಗಳು, ಸಿಕ್ಕರು ಠಾಕೂರರ ಪ್ರಸಿದ್ಧ ಗೀತೆಯನ್ನು ನೆನಪಿನಲ್ಲಿಡಬೇಕು. "ಯಾರೊಬ್ಬರೂ ನಿನ್ನ ಕರೆಗೆ ಕಿವಿಗೊಡದಿದ್ದರೆ ಒಬ್ಬನೇ ನಡೆ, ಒಬ್ಬನೇ ನಡೆ".

ಎರಡನೆಯ ದಿನ ಪ್ರಾರ್ಥನೆಗೆ ಹೋಗಕೂಡದೆಂದು ವೈದ್ಯರು ಹೇಳಿದರು. ಆದುದರಿಂದ ಸಭೆಗೆ ಓದಿ ಹೇಳಲು ಒಂದು ಸಂದೇಶವನ್ನು ಬರೆಸಿದನು. ಆದರೆ ಆ ಹೊತ್ತಿಗೆ ತಡೆಯಲಾರದೆ ಎದ್ದು ಹೋದನು. "ಉಪ

ವಾಸ ನನ್ನ ಮತ್ತು ಎಲ್ಲರ ಶುದ್ಧಿಕರಣಕ್ಕಾಗಿ, ಇಂಡಿಯಾದ ಎರಡು ಭಾಗ-ಗಳಲ್ಲೂ ಆತ್ಮಶುದ್ಧಿಯ ಅಲೆಯೊಂದು ಹಾದು ಹೋದರೆ!", ಎಂದು ಆಸೆ-ಯಿಂದ ನುಡಿದನು. ಎರಡು ಮತಗಳಿಗೂ ನಿಜವಾದ ಸೌಹಾರ್ದವುಂಟಾದರೆ, "ಮಗುವಿನಂತೆ ಕುಣಿದೇನು". ಆಗ ೧೨೫ ವರ್ಷ ಬದುಕುವ ಆಸೆ ಪುನರುಜ್ಜೀವಿತವಾಗುವುದು.

ವೈದ್ಯರ ಮಾತನ್ನು ಕೇಳಲಿಲ್ಲ. ದೇಹಸ್ಥಿತಿಯ ಪರೀಕ್ಷೆಗೆ ಅವಕಾಶ ಕೊಡಲಿಲ್ಲ. ಉಪ್ಪುಹಾಕಿ, ಹಾಕದೆ, ನಿಂಬೆ ಹುಳಿಯೊಡನೆ ನೀರು ಕುಡಿಯಲು ನಿರಾಕರಿಸಿದನು. ಪ್ರತಿದಿನ ದೇಹದ ತೂಕ ಎರಡು ಪೌಂಡು ತಗ್ಗುತ್ತಿತ್ತು. ಮೂತ್ರಜನಕಾಂಗಗಳು ಸರಿಯಾಗಿ ಕೆಲಸಮಾಡದೆ ಶಕ್ತಿ ಕುಗ್ಗುತ್ತಿತ್ತು. ಆತನು ಲಕ್ಷ್ಯಮಾಡಲಿಲ್ಲ. "ನನ್ನನ್ನು ದೇವರ ಕೈಗೆ ಒಪ್ಪಿಸಿದ್ದೇನೆ."

ಮಾರನೆಯ ದಿನ ಕರುಳನ್ನು ತೊಳೆಯಲು ಅನುಮತಿ ಕೊಟ್ಟನು. ಬೆಳಗಿನ ಜಾವ ೨-೩೦ ಘಂಟೆಗೆದ್ದು, ಸ್ನಾನಮಾಡಿ, ಪಾಕೀಸ್ತಾನಕ್ಕೆ ಅವಿಭಕ್ತ ಇಂಡಿಯಾದಿಂದ ಸಲ್ಲಬೇಕಾದ ೫೫೦,೦೦೦,೦೦೦ ರೂಪಾಯಿಗಳನ್ನು ಕೊಡಬೇಕೆಂದು ನೆಹ್ರೂ ಸರ್ಕಾರಕ್ಕೆ ಪ್ಯಾರೀಲಾಲ್‌ರ ಕೈಯಲ್ಲಿ ಕಾಗದ ಬರೆದನು. ಸ್ವಲ್ಪ ಹೊತ್ತಾದ ಮೇಲೆ ಆರ್ಥಿಕ ಮಂತ್ರಿ ಡಾಕ್ಟರ್ ಜಾನ್ ಮತ್ತಾಯ್, ನೆಹ್ರೂ, ಸರ್ದಾರ್ ವಲ್ಲಭಾಯ್ ಪಟೇಲ್ ಗಾಂಧಿಯ ಬಳಿಗೆ ಬಂದು ಆ ಹಣ ಕೊಡಲು ಏಕೆ ಸಾಧ್ಯವಿಲ್ಲವೆಂಬುದನ್ನು ವಿವರಿಸಿದರು. ಮೊದಲು ಮತ್ತಾಯ್, ನೆಹ್ರೂ ಮಾತನಾಡಿದರು. ಅನಂತರ ಪಟೇಲ್ ಒಂದೂವರೆ ಘಂಟೆಹೊತ್ತು ಮಾತನಾಡಿ, ತಮ್ಮ ನಿಲುವನ್ನು ಸಮರ್ಥಿಸಿಕೊಂಡನು. ಪಟೇಲರ ಮಾತು ಮುಗಿಯುತ್ತಲೇ ಗಾಂಧಿ ಎದ್ದು ಕುಳಿತು ಸರ್ದಾರ್, "ನೀವು ನನಗೆ ಪರಿಚಿತರಾದ ಸರ್ದಾರರಲ್ಲ," ಎಂದು ಹೇಳಿ ಕಣ್ಣೀರಿಟ್ಟರು. ಮತ್ತಾಯ್, ನೆಹ್ರೂ, ಪಟೇಲರು ಪುನಃ ಮಂತ್ರಿಮಂಡಲದ ಸಭೆ ಸೇರಿದರು. ಅವರೆಲ್ಲಾ ಮಹಾತ್ಮರ ಮನಃಕ್ಲೇಶವನ್ನು ಅರಿಯುತ್ತಲೇ ಹಣ ಕೊಡಲೊಪ್ಪಿದರು. ಹಣ ಕೊಟ್ಟರು.

ಬಿರ್ಲಾ ಮಂದಿರದ ಮುಂದೆ ಗಾಂಧಿಯ ಮಂಚಕ್ಕೆ ಹತ್ತಡಿ ದೂರದಲ್ಲಿ ಸಾವಿರಾರು ಜನ ಇಂಡಿಯನ್ನರೂ, ಪರದೇಶೀಯರೂ ಸಾಲಾಗಿ

ನಡೆದು ಹೋದರು. ಮೊಣಕಾಲನ್ನು ಹೊಟ್ಟೆಯ ಕೆಳಗೆಳೆದುಕೊಂಡು ಗಾಂಧಿ ಮಲಗಿದ್ದರು. ತಲೆ, ದೇಹಗಳೆಲ್ಲಾ ಬಿಳೀ ಖಾದಿ ದುಪಟಿಯಿಂದ ಮುಚ್ಚಲ್ಪಟ್ಟು ಮುಖಮಾತ್ರ ಕಾಣುತ್ತಿತ್ತು. ಕಣ್ಣು ಮುಚ್ಚಿ, ಅರೆಜ್ಞಾನದಲ್ಲಿದ್ದಂತಿದ್ದನು. ಮುಖದಲ್ಲಿ ತೀವ್ರವಾದ ನೋವು ಕಾಣುತ್ತಿತ್ತು. ಆದರೂ ಹೇಗೋ ನಿದ್ದೆಯಲ್ಲಿ, ಅರೆಜ್ಞಾನದಲ್ಲಿ ನೋವು ಉದಾತ್ತವಾದಂತಿತ್ತು. ನಂಬಿಕೆಯ ಉನ್ಮತ್ತತೆಯಲ್ಲಿ, ಸೇವೆಯ ಅರಿವಿನಲ್ಲಿ ಮರೆಯಾದ ನೋವದು. ಶಾಂತಚಿತ್ತನಂತಿದ್ದು, ಎಚ್ಚರವಾದಾಗ ಮೃದುವಾಗಿ ನಕ್ಕನು. ಪ್ರಾರ್ಥನಾ ಸಭೆಗೆ ಹೋಗಲು ಏಳುವುದಕ್ಕೆ ಪ್ರಯತ್ನಿಸಿ, ನಿಂತುಕೊಳ್ಳಲಾರದೆ ಧ್ವನಿವರ್ಧಕದ ಯಂತ್ರದಿಂದ, ಆಲ್ ಇಂಡಿಯಾ ರೇಡಿಯೋದಲ್ಲಿ ದೇಶಕ್ಕೆಲ್ಲಾ ಕೇಳುವಂತೆ ಮಾತನಾಡಿದನು. "ಬೇರೆಯವರು ಏನು ಮಾಡುತ್ತಿರುವರೆಂದು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಪ್ರತಿಯೊಬ್ಬರೂ ಬೆಳಕನ್ನು ಮನಸ್ಸಿನ ಒಳಕ್ಕೆ ತಿರುಗಿಸಿ, ಸಾಧ್ಯವಾದಷ್ಟು ಮಟ್ಟಿಗೆ ಹೃದಯವನ್ನು ಪರಿಶುದ್ಧಮಾಡಿಕೊಳ್ಳಬೇಕು ಹಾಗೆ ನೀವು ಮಾಡಿಕೊಂಡರೆ ಇಂಡಿಯಾಕ್ಕೆ ನೀವು ಸಹಾಯ ಮಾಡಿದಂತಾಗಿ, ನನ್ನ ಉಪವಾಸದ ಅವಧಿಯನ್ನು ಕಡಿಮೆ ಮಾಡಿದಂತಾಗುತ್ತದೆ. ಆದರೆ ನನ್ನ ವಿಚಾರ ಮುಖ್ಯವಲ್ಲ. ಸಾವನ್ನು ತಪ್ಪಿಸಿಕೊಂಡವರು ಯಾರೂ ಇಲ್ಲ. ಹೆದರುವುದೇಕೆ? ಸಾವು, ಕಷ್ಟದಿಂದ ಪಾರುಗಾಣಿಸುವ ಸ್ನೇಹಿತ". ಇಷ್ಟು ಹೇಳುವ ವೇಳೆಗೆ ಆಯಾಸವಾಗಲು ಮಿಕ್ಕ ಸಂದೇಶವನ್ನು ಬೇರೆಯವರು ಓದಿದರು. ವೈದ್ಯರು ನಾಲ್ಕನೆಯ ದಿನ ಉಪವಾಸ ಮಾಡಿದರೆ ಬದುಕಿದರೂ ಏನಾದರೂ ಶಾಶ್ವತ ಹಾನಿಯಾಗುವುದೆಂದು ಹೇಳಿದರು. ನೀರು ಕುಡಿಯುತ್ತಿರಲಿಲ್ಲ; ಮೂತ್ರ ವಿಸರ್ಜನೆ ಮಾಡುತ್ತಿರಲಿಲ್ಲ. ಲಕ್ಷ್ಯಮಾಡದೆ ಎರಡು ನಿಮಿಷ ಪ್ರಾರ್ಥನಾ ಸಭೆಯನ್ನುದ್ದೇಶಿಸಿ, ಧ್ವನಿವರ್ಧಕ ಯಂತ್ರದ ಮೂಲಕ ಮಾತನಾಡಿ, "ಈ ನಾಲ್ಕನೆಯ ದಿನವಿರುವಷ್ಟು ಸುಖವಾಗಿ ನಾನೆಂದೂ ಇರಲಿಲ್ಲ," ಎಂದು ಜಂಭ ಕೊಚ್ಚಿದನು. ಧ್ವನಿಯೂ ಶಕ್ತಿಯುತವಾಯಿತು.

ಜನವರಿ ೧೭ ನೇ ತಾರೀಕು ಆತನ ತೂಕ ೧೦೭ ಪೌಂಡುಗಳಿತ್ತು. ಮುಸ್ಲಿಮರು ಧೈರ್ಯವಾಗಿ ಹಿಂದಿರುಗಬಹುದೇನೋ ನೋಡಲು ಪ್ಯಾರಿಲಾಲರನ್ನು ಪಟ್ಟಣದೊಳಕ್ಕೆ ಕಳುಹಿಸಿದರು. ಮಹಾರಾಜರುಗಳಿಂದ,

ಪಾಕಿಸ್ತಾನದ ಮುಸ್ಲಿಮರಿಂದ, ಇಂಡಿಯಾದ ಎಲ್ಲಾ ಕಡೆಗಳಿಂದ ನೂರಾರು ತಂತಿ ವರ್ತಮಾನಗಳು ಬಂದವು. ಆತನಿಗೆ ತೃಪ್ತಿಯಾದರೂ, "ರಾಜ ಮಹಾರಾಜರುಗಳಾಗಲಿ, ಹಿಂದೂ ಸಿಕ್ಕರಾಗಲಿ, ಬೇರೆ ಯಾರಾಗಲಿ, ನನ್ನ ಜೀವನದ ಈ ಪವಿತ್ರ ಸಮಯದಲ್ಲಿ, ಉಪವಾಸ ನಿಲ್ಲಿಸಲು ಮೋಸ ಮಾಡಿದರೆ ಅವರಿಗಾಗಲಿ, ಇಂಡಿಯಾಗಾಗಲೀ, ಒಳ್ಳೆಯದಲ್ಲ. ಆತ್ಮ ಶಾಂತಿಗೋಸ್ಕರ ಉಪವಾಸ ಮಾಡುವ ಸಮಯಕ್ಕಿಂತ ಹಿತಕರವಾದ ಸಮಯ ನನಗಿಲ್ಲ. ಎಂದಿಗಿಂತ ಹೆಚ್ಚಾದ ಸಂತೋಷವನ್ನು ಈ ಉಪವಾಸ ನನಗೆ ಕೊಟ್ಟಿದೆ. ಸೈತಾನನಿಂದ ದೇವರ ಕಡೆ ಮನಃಪೂರ್ವಕವಾಗಿ ಪ್ರಯಾಣ ಬದಲಿಸಿರುವೆನೆಂಬ ಧೈರ್ಯವಿಲ್ಲದ ಯಾರೂ ನನ್ನನ್ನು ಈ ಸುಖಮಯವಾದ ಸ್ಥಿತಿಯಲ್ಲಿ ಹಿಂಸೆಪಡಿಸಬೇಡಿ", ಎಂದು ಎಚ್ಚರಿಸಿದನು. ಜನವರಿ ೧೮ ನೇ ತಾರೀಖು ಸ್ವಲ್ಪ ಸುಖವಾಗಿ ಮೈಯನ್ನು ಕೊಂಚ ಒತ್ತಿಸಿಕೊಂಡನು. ತೂಕ ೧೦೭ ಪೌಂಡೇ ಇತ್ತು.

ಜನವರಿ ೧೩ ನೇ ತಾರೀಖು ಮಧ್ಯಾಹ್ನ ೧೧ ಘಂಟೆಗೆ ಉಪವಾಸ ಪ್ರಾರಂಭವಾದಾಗಿನಿಂದ ಹೊಸ ಕಾಂಗ್ರೆಸ್ ಅಧ್ಯಕ್ಷರಾದ ಡಾಕ್ಟರ್ ರಾಜೇಂದ್ರ ಪ್ರಸಾದರ ಮನೆಯಲ್ಲಿ ಶತ್ರುಗಳ ನಡುವೆ ತಾತ್ಕಾಲಿಕವಾಗಿ ಜಗಳ ನಿಲ್ಲಿಸುವುದೇ ಅಲ್ಲದೆ, ಶಾಶ್ವತ ಶಾಂತಿತರಲು ಸಮ್ಮೇಳನಗಳು ನಡೆಯುತ್ತಿದ್ದುವು. ಕಾಗದದ ಪ್ರಮಾಣಗಳು ಆಮರಣಾಂತ ಉಪವಾಸ ಮಾಡಬೇಕೆನ್ನುವ ತನ್ನ ನಿಶ್ಚಯವನ್ನು ಕದಲಿಸುವುದಿಲ್ಲವೆಂದು ಗಾಂಧಿ ಹೇಳಿದರು. ಪ್ರಮಾಣಗಳ ಜತೆಗೆ ಅವುಗಳನ್ನು ಕಾರ್ಯ ರೂಪಕ್ಕೆ ತರಲು ಮಾಡಿರುವ ಏರ್ಪಾಟುಗಳೇನೆಂದು ಕೇಳಿದನು. ಹಿಂಬಾಲಕರು ನಡೆಸಲು ಸಾಧ್ಯವಿರುವುದಕ್ಕಿಂತ ಹೆಚ್ಚು ಪ್ರಮಾಣಗಳನ್ನು ಪ್ರತಿನಿಧಿಗಳು ಮಾಡ ಕೂಡದು. ಐದು ದಿನ ಮಾತನಾಡಿ, ವಾದಿಸಿ, ಬರೆದು, ಸಹೋದ್ಯೋಗಿ ಗಳೊಡನೆ ಕಲೆತು, ಮಾತನಾಡಿ, ಆತ್ಮ ಪರೀಕ್ಷೆ ಮಾಡಿಕೊಂಡರು. ಕಡೆಗೆ, ಜನವರಿ ೧೮ರ ಬೆಳಿಗ್ಗೆ ೧೦೦ ಜನ ಹಿಂದೂ, ಮುಸ್ಲಿಂ, ಸಿಕ್, ಕ್ರೈಸ್ತ, ಜ್ಯೂಗಳು ಮತ್ತು ಯುದ್ಧ ಮನೋಭಾವವಿದ್ದ ರಾಷ್ಟ್ರೀಯ ಸೇವಕ ಸಂಘ ಮತ್ತು ಹಿಂದೂ ಮಹಾ ಸಭೆಯ ಪ್ರತಿನಿಧಿಗಳು, ಪಾಕೀಸ್ತಾನದ ರಾಯಭಾರಿ, ಪ್ರಸಾದ್, ನೆಹ್ರು, ಅಜಾದ್ ಗಾಂಧಿಯ ಬಳಿಗೆ ಬಂದರು. ಮುಸ್ಲಿ

ಮರ ಜೀವ, ಆಸ್ತಿ, ಮತಗಳನ್ನು ಕಾಪಾಡುವುದಾಗಿಯೂ, ಕಾಣಿಸಿಕೊಳ್ಳಲು ಅವರು ಹೆದರುತ್ತಿದ್ದ ಪ್ರದೇಶಗಳಲ್ಲಿ ಓಡಾಟಕ್ಕೆ ಅನುಕೂಲತೆ ಕಲ್ಪಿಸಿಕೊಡುವುದಾಗಿಯೂ ಬರೆದುಕೊಟ್ಟರು. ಹಿಂದೂ ನಿರಾಶ್ರಿತರು ಮಸೀದಿಗಳನ್ನು ಬಿಟ್ಟುಕೊಡುವುದಾಗಿಯೂ, ಓಡಿಹೋಗಿದ್ದ, ಅವಿತುಕೊಂಡಿದ್ದ ಮುಸ್ಲಿಂ ವರ್ತಕರು ತಮ್ಮ ಕೆಲಸ ಕಾರ್ಯಗಳನ್ನು ಧೈರ್ಯವಾಗಿ ಮಾಡಲು ಅವಕಾಶ ಕೊಡುವುದಾಗಿಯೂ ಹೇಳಿದರು. ಈ ಎಲ್ಲಾ ಕೆಲಸಗಳೂ ಪೋಲೀಸು, ಸೈನ್ಯದ ಸಹಾಯವಿಲ್ಲದೆ ನಡೆಯುವುದು. ಜನರೇ ಅವುಗಳನ್ನು ಆಗ ಮಾಡುವರು. ಬದಲಾವಣೆಯ ಸೂಚನೆಯಾಗಿ ಹಿಂದೂ, ಮುಸ್ಲಿಮರು ಜತೆಗೂಡಿ, ಸೋದರಭಾವ ತೋರಿದ ಘಟನೆಗಳನ್ನು ಉಪವಾಸದಿಂದ ಸೋತ ಮಹಾತ್ಮರಿಗೆ ವರ್ಣಿಸಿದರು.

ಆತನು ಮಂಚದ ಮೇಲೆ ಆಯಾಸವಾಗಿದ್ದರೂ ಉತ್ಸಾಹದಿಂದ ಎದ್ದು ಕುಳಿತು ಪ್ರತಿನಿಧಿಗಳೊಡನೆ ಮಾತನಾಡಿದನು. ಅಲಹಾಬಾದಿನಲ್ಲಿ ಗಲಭೆಯಾಯಿತೆಂದು ಪತ್ರಿಕೆಗಳಲ್ಲಿ ಬಂದಿದೆಯೆಂದು ಹೇಳಿದನು. ಆ ಹೊಣೆ ರಾಷ್ಟ್ರೀಯ ಸೇವಕ ಸಂಘ ಮತ್ತು ಹಿಂದೂ ಮಹಾ ಸಭೆಗಳಿಗೆ ಸೇರಿದ್ದೆಂದು ಹೇಳಿದನು. "ಇಂಡಿಯಾ ದೇಶಕ್ಕೆ ಹಿಂದೂಗಳು, ಸಿಕ್ಕರು, ಮುಸ್ಲಿಮರು ಸೋದರರೆಂಬ ಅರಿವುಂಟಾಗದಿದ್ದರೆ ಎರಡು ರಾಷ್ಟ್ರಗಳಿಗೂ ಒಳ್ಳೆಯದಲ್ಲ. ಅವೆರಡಕ್ಕೂ ವ್ಯಾಜ್ಯವುಂಟಾದರೆ ಇಂಡಿಯಾ ಗತಿಯೇನು?" ಈ ಆಲೋಚನೆ ಮನಸ್ಸನ್ನು ಕದಡಿ ಕಣ್ಣೀರು ಗುಳಿಬಿದ್ದ ಕೆನ್ನೆಗಳ ಮೇಲೆ ಹರಿಯಿತು. ನೋಡುತ್ತಿದ್ದವರೆಲ್ಲಾ ಬಿಕ್ಕಿ ಬಿಕ್ಕಿ ಅತ್ತರು. ಧ್ವನಿ ಅಂಕೆಗೆ ಬಂದಮೇಲೆ ಕೇಳಿಸಲಾಗದಷ್ಟು ಕ್ಷೀಣವಾಗಿತ್ತು. ಆತನು ಪಿಸುಗುಟ್ಟಿದ ಮಾತನ್ನು ಡಾಕ್ಟರ್ ಸುಶೀಲಾ ನಯ್ಯರ್ ಗಟ್ಟಿಯಾಗಿ ಹೇಳಿದಳು. ಅವರೆಲ್ಲಾ ಆತನಿಗೆ ಮೋಸಮಾಡುತ್ತಿದ್ದರೆ? ಆತನ ಜೀವ ಉಳಿಸಲು ಪ್ರಯತ್ನ ಮಾಡುತ್ತಿದ್ದರೆ? ಆತನು ಪಾಕೀಸ್ತಾನಕ್ಕೆ ಹೋಗಬೇಕು. ಶಾಂತಿಯನ್ನು ಕಾಪಾಡಿ, ಆತನನ್ನು ಬಿಡುಗಡೆ ಮಾಡುವರೆ? ಕಾಂಗ್ರೆಸ್ ಮುಸ್ಲಿಂ ನಾಯಕ ಮೌಲಾನಾ ಆಜಾದ್, ರಾಷ್ಟ್ರೀಯ ಸೇವಕ ಸಂಘದ ಪ್ರತಿನಿಧಿ, ಪಾಕೀಸ್ತಾನದ ರಾಯಭಾರಿ ಮತ್ತು ಒಬ್ಬ ಸಿಕ್, ಸಮಾಧಾನದ ಮಾತುಗಳನ್ನಾಡಿದರು. ಗಾಂಧಿ ಮಂಚದ ಮೇಲೆ ಮೌನವಾಗಿ ಆಲೋ

ಚಿಸುತ್ತಾ ಕುಳಿತಿದ್ದನು. ಆಕ್ಷಣದಲ್ಲಿ ತಾನು ಸಾಯಬೇಕೋ, ಉಳಿಯ ಬೇಕೋ ನಿರ್ಧರಿಸುತ್ತಿದ್ದನು. ಕಡೆಗೆ ಉಪವಾಸ ಮುಕ್ತಾಯಮಾಡು ವುದಾಗಿ ಹೇಳಿದನು. ಪಾರ್ಸಿ, ಮುಸ್ಲಿಂ, ಜಪಾನೀ ಪವಿತ್ರ ಗ್ರಂಥಗಳ ನ್ನೋದಿದ ಮೇಲೆ ಹಿಂದೂ ಶ್ಲೋಕವನ್ನೊಂದು ಹೇಳಿದರು.

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ

ಅಸತ್ಯದಿಂದ ಸತ್ಯಕ್ಕೆ
ಕತ್ತಲಿನಿಂದ ಬೆಳಕಿಗೆ
ಸಾವಿನಿಂದ ಮುಕ್ತಿಗೆ ನನ್ನನ್ನು ಕರೆದೊಯ್ಯಿ.

ಆಶ್ರಮದ ಹುಡುಗಿಯರು ಒಂದು ಹಿಂದೂ ಪ್ರಾರ್ಥನೆಯನ್ನು, ಗಾಂಧಿಗೆ ಇಷ್ಟವಾದ ಕ್ರೈಸ್ತರ, "ನಾನು ಅಚ್ಚರಿಯ ಶಿಲುಬೆಯನ್ನು ನೋಡುವಾಗ,"ಎಂಬ ಸ್ತುತಿಯನ್ನೂ ಹಾಡಿದರು. ಕಡೆಗೆ ಮಹಾತ್ಮ ಎಂಟು ಔನ್ಸ್ ಕಿತ್ತಳೆ ರಸವನ್ನು ನಿಧಾನವಾಗಿ ಕುಡಿದರು. ಶಾಂತಿ ಪ್ರಮಾಣಗಳಿಗೆ ಅವರು ಯಾರೂ ತಪ್ಪದಿದ್ದರೆ ನೂರಿಪ್ಪತ್ತೈದು ಏಕೆ ನೂರಮೂವತ್ತು ಮೂರು ವರ್ಷ ಕೂಡ ಬದುಕಬೇಕೆಂಬ ಆಸೆ ಪುನಃ ತನ್ನಲ್ಲಿ ಹುಟ್ಟುವು ದೆಂದು ಹೇಳಿದರು. ಆ ಮಧ್ಯಾಹ್ನ ಆತನು ಸ್ಟೇಟ್ಸ್‌ಮನ್ ಪತ್ರಿಕೆಯ ಮಾಜಿ ಸಂಪಾದಕ ಆರ್ಥರ್ ಮೂರ್ ರೊಡನೆ ಮಾತನಾಡಿದರು. ಆತನು, "ಗಾಂಧಿ ಸಂತೋಷವಾಗಿದ್ದನು. ಮಾತನಾಡುವಾಗ ಆತನ ಆಸಕ್ತಿ ನನ್ನ ಕಡೆಗೇ ಇತ್ತು. ಅನೇಕ ಪ್ರಶ್ನೆ ಕೇಳಿದನು," ಎಂದು ಬರೆದನು.

ಆ ಸಾಯಂಕಾಲ ಪ್ರಾರ್ಥನಾ ಸಭೆಯಲ್ಲಿ ಗಾಂಧಿ ಆ ಪ್ರಮಾಣಗಳಿಗೆ, "ಏನು ಸಂಭವಿಸಿದರೂ ಹಿಂದು, ಮುಸ್ಲಿಂ, ಸಿಕ್, ಕ್ರೈಸ್ತ, ಜ್ಯೂಗಗಳಲ್ಲಿ ಮುರಿಯಲಾಗದ ಸ್ನೇಹವಿರುವುದು," ಎಂದು ಅರ್ಥಮಾಡಿ ಹೇಳಿದನು ಇದು ಅಂಜನ ಬಯಸುವ ಮನುಷ್ಯನ ಮನಸ್ಸಿನ ಕಾವಳವಲ್ಲವೆಂಬುದಕ್ಕೆ ಪಾಕಿಸ್ತಾನದ ವಿದೇಶ ಮಂತ್ರಿ ಸರ್. ಮಹಮ್ಮದ್ ಜಫರುಲ್ಲಾ ಖಾನ್, ಲೇಕ್ ಸಸೆಕ್ಸಿನ ಸಂಯುಕ್ತ ರಾಷ್ಟ್ರಗಳ ಭದ್ರತಾ ಸಭೆಯಲ್ಲಿ ಕೊಟ್ಟ ಹೇಳಿ ಕೆಯೇ ಸಾಕ್ಷ್ಯ. "ಉಪವಾಸದ ಫಲವಾಗಿ ಹೊಸ ಪ್ರಚಂಡ ಭಾವನೆ,

ಎರಡು ರಾಷ್ಟ್ರಗಳಿಗೂ ಸ್ನೇಹವಿರಬೇಕೆಂಬ ಅಭಿಲಾಷೆಯ ಅಲೆ ಖಂಡವನ್ನೆಲ್ಲಾ ಆವರಿಸಿದೆ." ಖಂಡಿತವಾಗಿ ಆತ ಐಂದ್ರ ಜಾಲಿಕ. ರಾಜಕೀಯ ತಜ್ಞರು ತಲೆ ಹಾಕದೆ ಇದ್ದಿದ್ದರೆ! ಉಪವಾಸದ ಮುಕ್ತಾಯ ಆತನ ಸಂತೋಷ ಸ್ವಭಾವವನ್ನು ಅರಳಿಸಲು, ಉತ್ಸಾಹದಿಂದ ಕೆಲಸಕ್ಕೆ ಹಿಂದಿರುಗಿದನು. ಧೈರ್ಯವಾಗಿ ಸಾವನ್ನೆದುರಿಸಿದ್ದುದರಿಂದ ಹೊಸ ಜೀವನ ಪ್ರಾರಂಭವಾಯಿತು.

**೩೪. ಪ್ರಾರ್ಥನೆಗೆ ಮೊದಲೇ ಸಾವು.**

ಉಪವಾಸ ಮುಗಿದ ಮೊದಲನೆಯ ದಿನ ಗಾಂಧಿಯನ್ನು ಕುರ್ಚಿಯ ಮೇಲೆ ಪ್ರಾರ್ಥನೆಗೆ ಎತ್ತಿಕೊಂಡು ಹೋದರು. ಕ್ಷೀಣ ಧ್ವನಿಯಲ್ಲಿ ಭಾಷಣ ಮಾಡುತ್ತಾ, ಹಿಂದೂ ಪ್ರಾಬಲ್ಯದಲ್ಲಿ ವಿಶ್ವಾಸವಿದ್ದ, ಯುದ್ಧ ಮನೋಭಾವದ, ರಾಷ್ಟ್ರೀಯ ಸೇವಕ ಸಂಘದ ಮೂಲ ಕರ್ತೃವಾದ ಹಿಂದೂ ಮಹಾ ಸಭೆ ದೆಹಲಿಯ ಶಾಂತಿ ಪ್ರಮಾಣವನ್ನು ತಿರಸ್ಕರಿಸಿತೆಂದು ಹೇಳಿ ದುಃಖ ಸೂಚಿಸಿದನು.

ಮರುಸಂಜೆ ಮಹಾತ್ಮ ಪ್ರಾರ್ಥನಾ ಸಭೆಯಲ್ಲಿ ಮಾತನಾಡುತ್ತಿದ್ದಾಗ ಸಿಡಿತದ ಸದ್ದಾಯಿತು. ಸಭಿಕರಿಗೆ ಗಾಬರಿಯಾಯಿತು. "ಗಾಬರಿಪಡಬೇಡಿ. ನನ್ನ ಮಾತು ಕೇಳಿ," ಎಂದು ಗಾಂಧಿ ಹೇಳಿದರು. ಹತ್ತಿರದ ತೋಟದ ಗೋಡೆಯ ಮೇಲಿಂದ ನಾಡ ಬಾಂಬೊಂದು ಎಸೆಯಲ್ಪಟ್ಟಿತ್ತು.

ಮಾರನೆಯ ದಿನ ಉಪವಾಸ ಮುಗಿದ ಮೇಲೆ ಮೊದಲನೆಯ ಬಾರಿ ಗಾಂಧಿ ಪ್ರಾರ್ಥನೆಗೆ ನಡೆದು ಬಂದರು. ಬಾಂಬು ಸಿಡಿದಾಗಲೂ ಸಮಾಧಾನದಿಂದಿದ್ದುದಕ್ಕಾಗಿ ಎಲ್ಲರೂ ಆತನನ್ನು ಅಭಿನಂದಿಸಿದ್ದರು. ಆತನು ಅದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಲಿಲ್ಲ. "ಆ ಸಿಡಿತದಿಂದ ಬಿದ್ದರೂ ನಗುತ್ತಿದ್ದು, ಹೊಡೆದವನ ವಿಚಾರದಲ್ಲಿ ಕ್ರೋಧವಿಲ್ಲದಿದ್ದರೆ ಆಗ ಅಭಿನಂದಿಸಬೇಕು. ಹಾಗೆ ಹೊಡೆದ ಯುವಕನನ್ನು ಯಾರೂ ಅಲ್ಲಗಳೆಯಬಾರದು. ನಾನು ಹಿಂದೂ ಮತದ ಶತ್ರುವೆಂದು ಆತನ ಅಭಿಪ್ರಾಯವಿರಬಹುದು. ಆ ಯುವಕನ ಅಭಿಪ್ರಾಯ ನನ್ನ ಅಭಿಪ್ರಾಯಕ್ಕೆ ವಿರುದ್ಧವಾದುದರಿಂದ ಆತನು ಕೆಟ್ಟವನಲ್ಲ. ಇಲ್ಲಿ ಸೇರಿದ್ದವರು ಆತನ ಮನಸ್ಸನ್ನು ಪರಿವರ್ತಿಸಲು ಪ್ರಯತ್ನಿಸಬೇಕು," ಎಂದು ಬೇಡಿದನು.

ಆ ಯುವಕ ಮದನಲಾಲನೆಂಬ ಪಂಜಾಬಿನ ನಿರಾಶ್ರಿತ. ಗಾಂಧಿಗೆ ಕೊಟ್ಟ ಪ್ರಮಾಣಕ್ಕನುಸಾರವಾಗಿ ಮಸೀತಿಗಳನ್ನು ಬಿಡುವು ಮಾಡಿಸುವ ವರೆಗೂ ದೆಹಲಿಯ ಒಂದು ಮಸೀದಿಯಲ್ಲಿ ವಾಸವಾಗಿದ್ದನು. ವಿಚಾರಣೆ ಯಾದಾಗ "ಪಾಕೀಸ್ತಾನದಲ್ಲಿ ಆದ ಭಯಂಕರ ಘಟನೆಗಳನ್ನು ಕಣ್ಣಾರೆ ಕಂಡಿದ್ದೇನೆ. ಪಂಜಾಬಿನ ಪಟ್ಟಣಗಳಲ್ಲಿ ಹಿಂದುಗಳನ್ನು ಗುಂಡಿನಿಂದ ಹೊಡೆದುದನ್ನು ಕಂಡಿದ್ದೇನೆ," ಎಂದು ಹೇಳಿದನು. ರೋಷದಿಂದ ಗಾಂಧಿ ಯನ್ನು ಕೊಲ್ಲಬೇಕೆಂದು ರಾಷ್ಟ್ರೀಯ ಸೇವಕ ಸಂಘದ ಒಂದು ಸಂಸ್ಥೆಗೆ ಸೇರಿದ್ದನು. ಆತನ ಪ್ರಯತ್ನ ವಿಫಲವಾಗಿ ಸೆರೆಸಿಕ್ಕಲು ಆತನ ಸಹೋ ದ್ಯೋಗಿ ನಾಥುರಾಂ ವಿನಾಯಕ ಗೋಡ್ಸೆ, ಬೊಂಬಾಯಿಯಿಂದ ದೆಹಲಿಗೆ ಬಂದನು. ೩೫ ವರ್ಷದ ಗೋಡ್ಸೆ ಪೂನಾದಲ್ಲಿ ಒಂದು ಹಿಂದೂ ಮಹಾ ಸಭೆಯ ವಾರ ಪತ್ರಿಕೆಯ ಸಂಪಾದಕನೂ, ಪ್ರಕಟನಕಾರನೂ ಆಗಿದ್ದನು. ದೊಡ್ಡ ಬ್ರಾಹ್ಮಣ ವಂಶಕ್ಕೆ ಸೇರಿದವನು. ಅವನನ್ನೂ ಮದನಲಾಲ್ ಮತ್ತು ಇತರ ಬೇರೆ ಏಳು ಜನರನ್ನೂ ವಿಚಾರಣೆಗೆ ಗುರಿಮಾಡಿದರು. ಆರು ತಿಂಗಳ ವರೆಗೆ ಮೊಕದ್ದಮೆ ನಡೆಯಿತು. ಗೋಡ್ಸೆ ಸಾಕ್ಷ್ಯ ಕೊಡುತ್ತಾ "ಹಿಂದೂ ಧರ್ಮದ ಮೇಲೆ ನಡೆಯುತ್ತಿದ್ದ ಅತ್ಯಾಚಾರ, ಹೊರಗೆ ಇಸ್ಲಾಂ ಒಳಗೆ ಗಾಂಧಿಯನ್ನು ಎದುರಿಸಬೇಕಾಗಿದ್ದ ಅದರ ಕರಾಳ ಭವಿಷ್ಯದ ವಿಚಾರವಾಗಿ ನಾನು ತೀವ್ರವಾಗಿ ಆಲೋಚಿಸಿದೆ. ಇದ್ದಕ್ಕಿದ್ದಂತೆ ಗಾಂಧಿ ಯನ್ನು ಕೊಲ್ಲಬೇಕೆಂದು ನಿರ್ಧರಿಸಿದೆ" ಎಂದು ಹೇಳಿದನು. ಗಾಂಧಿಯ ಉಪವಾಸದ ವಿಜಯದಿಂದ ಗೋಡ್ಸೆ, ಮದನಲಾಲರಿಗೆ ಆಕ್ರೋಶವುಂಟಾ ಯಿತು. ಮಹಾತ್ಮನ ಅಧಿಕಾರದಿಂದ ಸೋತು ಅದನ್ನು ಜಯಿಸುವ ಅಸ್ತ್ರ ಕಾಣದಿದ್ದರು. ೫೫೦,೦೦೦,೦೦೦ ರೂಪಾಯಿಗಳನ್ನು ಪಾಕೀಸ್ತಾನಕ್ಕೆ ಕೊಟ್ಟುದರಿಂದ ತನಗೆ ರೇಗಿ ಹೋಯಿತೆಂದು ಮದನಲಾಲ್ ಹೇಳಿದನು.

ಅನಕ್ಷರಸ್ಥಳಾದ ಒಬ್ಬ ಮುದುಕಿ ಮದನಲಾಲನನ್ನು ಪೋಲೀಸಿ ನವರು ಬರುವವರೆಗೂ ಹಿಡಿದಿದ್ದಳು. ಆತ ಸೆರೆ ಸಿಕ್ಕಿದ ಮೇಲೆ ಗೋಡ್ಸೆ ಬಿರ್ಲಾ ಮಂದಿರದ ಸುತ್ತಲೂ ತಿರುಗಲಾರಂಭಿಸಿದನು. ಕಾಕಿ ಅಂಗಿಯ ಜೇಬಿನಲ್ಲಿ ಒಂದು ಪಿಸ್ತೂಲಿದ್ದಿತು.

೧೯೪೮ ರ ಜನವರಿ ೩೫ ರ ಭಾನುವಾರದ ದಿನ ಪ್ರಾರ್ಥನಾ ಸಭೆಗೆ

ಎಂದಿಗಿಂತ ಹೆಚ್ಚು ಜನ ಬಂದಿದ್ದರು. ಗಾಂಧಿಗೆ ಸಂತೋಷವಾಯಿತು. ಛಳಿಗಾಳಿ, ನೆಲ ತಣ್ಣಗಿದ್ದುದರಿಂದ ಕುಳಿತುಕೊಳ್ಳಲು ಚಾಪೆಗಳನ್ನಾಗಲಿ, ದಪ್ಪ ಖಾದಿ ಬಟ್ಟೆಯನ್ನಾಗಲಿ, ತರಬೇಕೆಂದು ಭಕ್ತರಿಗೆ ಹೇಳಿದನು. ಹಿಂದೂ, ಮುಸ್ಲಿಮರ ಹೃದಯದ ಐಕ್ಯತೆ ತನ್ನ ಹೃದಯಕ್ಕಾನಂದ ಕೊಟ್ಟಿತೆಂದು ಹೇಳಿದನು. ಪ್ರಾರ್ಥನೆಗೆ ಬರುವ ಪ್ರತಿಯೊಬ್ಬ ಹಿಂದು, ಸಿಕ್ ಸೋದರ ಭಾವ ತೋರಲು ಒಬ್ಬ ಮುಸ್ಲಿಮನನ್ನಾದರೂ ಕರೆ ತರುವರೆ? ಆ ಗುಂಪಿನಲ್ಲಿದ್ದ ಗೋಡ್ಸೆ ಒಪ್ಪಿರಲಾರ. ಮುಸಲ್ಮಾನರು ಹಿಂದೂ ಪ್ರಾರ್ಥನೆಗೇಕೆ ಬರಬೇಕು ಎಂದು ಅವರ ವಾದ. ಹಿಂದೂ ಮಹಾತ್ಮ ಕೊರಾನನ್ನೇಕೆ ಓದಬೇಕು? ಗಾಂಧಿ ಇಲ್ಲದಿದ್ದರೆ ಮುಸ್ಲಿಮರಿಗೆ ರಕ್ಷಣೆ ಇರುವುದಿಲ್ಲ. ಹಿಂದುಗಳು ಪಾಕಿಸ್ತಾನವನ್ನು ಆಕ್ರಮಿಸಿ ಸಂಯುಕ್ತ ಹಿಂದೂಸ್ಥಾನ ಪಡೆಯುಬಹುದು. ಗೋಡ್ಸೆ ರೇಗುತ್ತಾ ಸಮಯ ಕಾಯುತ್ತಿದ್ದನು. ರಕ್ಷಕರನ್ನು ಕರೆದೊಯ್ಯಬೇಕೆಂದೂ, ಪ್ರಾರ್ಥನೆಗೆ ಬರುವವರನ್ನು ಹುಡುಕಿನೋಡಬೇಕೆಂದೂ ಮಂತ್ರಿಗಳು ಗಾಂಧಿಗೆ ಹೇಳಿದರು. ಆತನಿಗೆ ಆ ಅಭಿಪ್ರಾಯ ಒಪ್ಪಿಗೆಯಾಗಲಿಲ್ಲ.

ಪ್ರಧಾನ ಮಂತ್ರಿ ನೆಹ್ರೂ, ಡೆಪ್ಯುಟಿ ಪ್ರಧಾನಿ ಸರ್ದಾರ ಪಟೇಲರಿಗೆ ಎಷ್ಟೋ ಭಿನ್ನಾಭಿಪ್ರಾಯಗಳಿದ್ದುವು. ಅವರಿಬ್ಬರದೂ ಭಿನ್ನಮನೋಭಾವ. ಅವರ ಅಸಮಾಧಾನಗಳಿಂದ ಗಾಂಧಿಗೆ ಕ್ಲೇಶವುಂಟಾಗಿತ್ತು. ಒಂದೇ ಮಂತ್ರಿಮಂಡಲದಲ್ಲಿ ಇಬ್ಬರೂ ಇರಲು ಸಾಧ್ಯವೇ ಎಂದು ಆಲೋಚಿಸಿದನು. ಒಬ್ಬರನ್ನು ಆರಿಸಿ, ಮತ್ತೊಬ್ಬರ ರಾಜೀನಾಮೆ ಕೊಡಿಸಬೇಕಾಗಬಹುದು. ನಿರ್ಧಾರವನ್ನು ಅವರು ಆತನಿಗೇ ಒಪ್ಪಿಸಿದರು. ಆತನಿಗೆ ನೆಹ್ರೂವಿನಲ್ಲಿ ಪ್ರೀತಿಯಿತ್ತು. ಆತನು ಹಿಂದೂ, ಸಿಕ್, ಮುಸ್ಲಿಮರಲ್ಲಿ ನಿಷ್ಪಕ್ಷಪಾತ ವಿಶ್ವಾಸ ತೋರುವನೆಂಬ ಧೈರ್ಯವಿತ್ತು. ಪಟೇಲರು ರಾಜಕೀಯದಲ್ಲಿ ನಿಷ್ಣಾತ ಪಂಡಿತರು; ಆತನು ಬಿಟ್ಟುಹೋದರೆ ಸರ್ಕಾರ ಬಲಹೀನವಾಗುವುದು. ಕಡೆಗೆ ಗಾಂಧಿ ಇಬ್ಬರನ್ನೂ ಬಿಡಬಾರದೆಂದು ನಿರ್ಧರಿಸಿದನು. ಒಬ್ಬರು ಇನ್ನೊಬ್ಬರಿಗೆ ಆವಶ್ಯಕವಾಗಿದ್ದರು. ಇಂಗ್ಲಿಷಿನಲ್ಲಿ ಮಹಾತ್ಮ ನೆಹ್ರೂವಿಗೆ, "ನೀವಿಬ್ಬರೂ ಐಕಮತ್ಯದಿಂದಿರಬೇಕು", ಎಂದು ಬರೆದು ಕಳುಹಿಸಿದನು. ಜನವರಿ ೩೦ನೇ ತಾರೀಖು ಸಂಜೆ ನಾಲ್ಕು ಘಂಟೆಗೆ

ಪಟೇಲರು ಬಂದು ಗಾಂಧಿಯ ಬಾಯಿಂದ ಅದೇ ಸಂದೇಶವನ್ನು ಕೇಳಿದರು. ನಾಲ್ಕುವರೆ ಘಂಟೆಗೆ ಗಾಂಧಿಯ ಕಡೆಯ ಊಟ, ಮೇಕೆ ಹಾಲು, ಬೇಯಿಸದ, ಹಸಿಯ ತರಕಾರಿ, ಕಿತ್ತಲೆಹಣ್ಣು, ಶುಂಠಿ, ನಿಂಬೆಹಣ್ಣು, ಮಜ್ಜಿಗೆ ಹಾಕಿದ ಕಷಾಯ ತರಲ್ಪಟ್ಟಿತು. ಊಟ ಮಾಡುತ್ತಾ ಮಾತನಾಡಿದನು. ಐದು ಘಂಟೆಯ ಸಮಯವಾಗಲು ಗಾಂಧಿಗೆ ಹೊತ್ತುಮೀರಿ ಹೋಗುವುದು ಇಷ್ಟವಿಲ್ಲವೆಂದರಿತ ಆಭಾ ಆತನ ಗಡಿಯಾರವನ್ನೆತ್ತಿ ತೋರಿಸಿದಳು. ಪಟೇಲರೊಡನೆ, "ನಾನು ಓಡಬೇಕು", ಎಂದು ಹೇಳಿ ಪ್ರಾರ್ಥನಾ ಸಭೆಗೆ ಬೇಗ ಬೇಗ ನಡೆದು ಹೋದನು. ೫೦೦ ಜನ ಹೆಂಗಸರೂ, ಗಂಡಸರೂ ಆತನಿಗಾಗಿ ಕಾದಿದ್ದರು. ಆಭಾ, ಮನುಗಳ ಭುಜವನ್ನೂರಿ ನಡೆಯುತ್ತಾ, "ಹತ್ತು ನಿಮಿಷ ನಿಧಾನವಾಯಿತು. ಹೊತ್ತುಮಾಡುವುದು ನನಗಿಷ್ಟವಿಲ್ಲ. ೫ ಘಂಟೆ ಹೊಡೆಯುವ ವೇಳೆಗೆ ನಾನಿಲ್ಲಿರಬೇಕಾಗಿತ್ತು", ಹೀಗೆ ಹೇಳುತ್ತಾ ಐದು ಮೆಟ್ಟಲನ್ನು ಬೇಗ ಹತ್ತಿದನು. ತಾನು ಕುಳಿತುಕೊಳ್ಳುತ್ತಿದ್ದ ಮರದ ಅಟ್ಟಣಿಗೆಯಿಂದ ಕೆಲವು ಗಜ ದೂರವಿದ್ದನು. ಅನೇಕ ಜನ ಎದ್ದು ನಿಂತರು. ಅನೇಕರು ಆತನ ಹತ್ತಿರಕ್ಕೆ ಸರಿದರು. ಬಹಳ ಹತ್ತಿರವಿದ್ದವರು ಅಡ್ಡಬಿದ್ದರು. ಗಾಂಧಿ ನಗುತ್ತಾ ಕೈಯೆತ್ತಿ ನಮಸ್ಕರಿಸಿದನು.

ಗೋಡ್ಸೆ ಮುಂದಿನ ಸಾಲಿಗೆ ಜರುಗಿ ಕೈಯ್ಯನ್ನು ಜೇಬಿನಲ್ಲಿದ್ದ ಪಿಸ್ತೂಲಿನ ಮೇಲಿಟ್ಟನು. ಆತನಿಗೆ ಗಾಂಧಿಯಮೇಲೆ ವೈಯಕ್ತಿಕ ದ್ವೇಷವೇನೂ ಇರಲಿಲ್ಲ. ವಿಚಾರಣೆ ಮಾಡಿ ಆತನನ್ನು ಮರಣದಂಡನೆಗೆ ಗುರಿಪಡಿಸಿದಾಗ, "ಗುಂಡು ಹಾರಿಸುವ ಮೊದಲು ಆತನಿಗೆ ಒಳ್ಳೆಯದಾಗಲೆಂದು ನಾನು ಭಕ್ತಿಯಿಂದ ನಮಸ್ಕರಿಸಿದೆ," ಎಂದು ಹೇಳಿದನು.

ಮಹಾತ್ಮನಿಗೆ ಅಡ್ಡಲಾಗಿ ನಿಂತು ನಮಸ್ಕರಿಸಿದನು. ಪ್ರಾರ್ಥನೆಗೆ ಹೊತ್ತಾಗಬಾರದೆಂದು ಮನು ಆತನನ್ನು ತಳ್ಳಲು ಪ್ರಯತ್ನಿಸಿದಳು. ಗೋಡ್ಸೆ ಆಕೆಯನ್ನು ನೂಕಿ ಮಹಾತ್ಮನ ಮುಂದೆ ಎರಡು ಅಡಿಗಳ ದೂರದಲ್ಲಿ ನಿಂತು ಮೂರುಸಲ ಗುಂಡು ಹಾರಿಸಿದನು. ಗಾಂಧಿಯ ಮುಖದ ಮಂದಹಾಸ ಮಾಯವಾಗಿ ಕೈಗಳು ಕೆಳಕ್ಕೆ ಜಾರಿದುವು. "ಹೇ ರಾಮ್", ಎಂದು ಮೃತಪಟ್ಟರು. ಆತನು ಬಿಟ್ಟುಹೋದ ಆಸ್ತಿ ಧೈರ್ಯ; ಪಾಠ ಸತ್ಯ; ಆಯುಧ ಪ್ರೀತಿ. ಆತನ ಜೀವನವೇ ಆತನ ಸ್ಮಾರಕ.

ಇಂದು ಆತನು ಮಾನವ ವರ್ಗಕ್ಕೇ ಸೇರಿದ ನಿಧಿ.

# ಕಾವ್ಯಾಲಯದ ಪ್ರಕಟನೆಗಳು

## ವಿಷಯ ಸೂಚಿ

### ಕವಿತೆ

| | ಸಾದಾಪ್ರತಿ | ಉತ್ತಮ ಪ್ರತಿ |
|---|---|---|
| ಅನ್ತಃಪುರಗೀತೆ—ಡಿ. ವಿ. ಜಿ. .... .... | ೩.೫೦ | ೫.೦೦ |
| ಇರುವಂತಿಗೆ—ಕೆ. ಎಸ್. ನರಸಿಂಹಸ್ವಾಮಿ .... | ೧.೨೫ | ೨.೫೦ |
| ಉಮರನ ಒಸಗೆ—ಡಿ. ವಿ. ಜಿ. .... .... | ೩.೦೦ | ೫.೦೦ |
| ಉಂಗುರ—ಕೆ. ಎಸ್. ನರಸಿಂಹಸ್ವಾಮಿ .... | ೧.೫೦ | ೩.೦೦ |
| ಐರಾವತ—ಕೆ. ಎಸ್. ನರಸಿಂಹಸ್ವಾಮಿ .... | ೧.೨೫ | ೨.೫೦ |
| ಕನ್ನಡ ಮೇಘಸಂದೇಶ—ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿ.... | ೦.೬೪ | .... |
| ಕಾವ್ಯಕಾವೇರಿ—ಎಲ್. ಜಿ. ಸುಮಿತ್ರ .... | ೧.೫೦ | ೩.೦೦ |
| ಗೀತಶಾಕುನ್ತಲ—ಡಿ. ವಿ. ಜಿ. .... | ೨.೨೫ | ೪.೦೦ |
| ದೀಪದಮಲ್ಲಿ—ಕೆ. ಎಸ್. ನರಸಿಂಹಸ್ವಾಮಿ .... | ೧.೬೫ | .... |
| ಭಾವತರಂಗ—ಎಂ. ಗೋಪಾಲಕೃಷ್ಣ ಅಡಿಗ | ೧.೨೫ | .... |
| ಭಾನುಮತಿ ಕಲ್ಯಾಣ(ಯಕ್ಷಗಾನ)—ಹಿರಿಯಣ್ಣ ಹೆಬ್ಬಾರ್ | ೧.೫೦ | ೩.೦೦ |
| ಭಾರತಿಯವರ ಕವಿತೆಗಳು—ಅನು : ಎಲ್. ಗುಂಡಪ್ಪ | | ೫.೦೦ |
| ಮನೆಯಿಂದ ಮನೆಗೆ—ಕೆ. ಎಸ್. ನರಸಿಂಹಸ್ವಾಮಿ | ೧.೫೦ | ೩.೦೦ |
| ಮಲೆದೇಗುಲ—ಪು. ತಿ. ನರಸಿಂಹಾಚಾರ್ .... | ೧.೦೦ | .... |
| ಮಹಾಚುನಾವಣೆ—ಡಿ. ವಿ. ಜಿ. .... | ೦.೨೫ | .... |
| ಮಂಕುತಿಮ್ಮನ ಕಗ್ಗ—ಡಿ. ವಿ. ಜಿ. .... | ೧.೬೫ | ೫.೦೦ |
| ವಸಂತಕುಸುಮಾಂಜಲಿ—ಡಿ. ವಿ. ಜಿ. .... | ೦.೬೫ | .... |
| ಶಾರದಯಾಮಿನಿ—ಪು. ತಿ. ನರಸಿಂಹಾಚಾರ್ .... | ೧.೦೦ | .... |
| ಶಿಲಾಲತೆ—ಕೆ. ಎಸ್. ನರಸಿಂಹಸ್ವಾಮಿ .... | ೧.೫೦ | ೩.೦೦ |
| ಷೋಡಶಿ—ಕುವೆಂಪು .... .... | ೧.೫೦ | .... |
| ಸಿರಿಬಾಯಿನುಡಿ—ಪು. ತಿ. ನರಸಿಂಹಾಚಾರ್ .... | ೦.೫೦ | .... |
| ಸೊಹ್ರಾಬ್ ಮತ್ತು ರುಸ್ತುಂ—ಕೆ. ನರಸಿಂಹಶಾಸ್ತ್ರಿ.... | ೦.೬೪ | .... |
| ಸೊಹ್ರಾಬ್ ಮತ್ತು ರುಸ್ತುಂ—ಕೆ. ನರಸಿಂಹಶಾಸ್ತ್ರಿ.... | ೦.೬೫ | ... |
| ಹಳ್ಳಿಯಹಾಡುಗಳು—ಸ. ಚ. ಮಹದೇವನಾಯಕ್.... | ೧.೫೦ | ೩.೦೦ |

## ಕಥೆ, ಚಿತ್ರಕಥೆ, ಸಣ್ಣಕಥೆ

| | ಸಾದಾಪ್ರತಿ | ಉತ್ತಮ ಪ್ರತಿ |
|---|---|---|
| ಇದ್ದರೂ ಇರಬಹುದು—ಎಸ್. ಜಿ. ಶಾಸ್ತ್ರಿ | ೨.೨೫ | .... |
| ದಮಯಂತಿ—ಕೆ. ಎಸ್. ನರಸಿಂಹಸ್ವಾಮಿ .... | ೧.೨೫ | ೨.೨೫ |
| ಧ್ವಜರಕ್ಷಣೆ—ಪು. ತಿ ನರಸಿಂಹಾಚಾರ್ | ೨.೨೫ | .... |
| ನಿರಾಶ್ರಿತೆ—ಎಚ್. ವಿ. ಸಾವಿತ್ರಮ್ಮ .... | ೧.೫೦ | .... |
| ಬೆಳದಿಂಗಳ ರಾತ್ರಿ—ರಾಜೇಶ್ವರಿ ನರಸಿಂಹಮೂರ್ತಿ.... | ೧.೫೦ | .... |
| ಮದುವಣಗಿತ್ತಿ—ಅಂಟನ್ ಚೆಕಾವರ ಕಥೆಗಳು ಕಿರು ಕಾದಂಬರಿಗಳು. ಅನು : ಎಚ್. ವಿ. ಸಾವಿತ್ರಮ್ಮ .. | ೩.೨೫ | ೫.೫೦ |
| ಮೂಕಪ್ರೇಮ—ವಿಶಾಲಾಕ್ಷಿ | ೧.೨೫ | .... |
| ರಥಸಪ್ತಮಿ—ಪು. ತಿ. ನರಸಿಂಹಾಚಾರ್ .... | ೧.೨೫ | |
| ಸ್ಮರಭಸ್ಮ—ಎಚ್. ವಿ. ಸಾವಿತ್ರಮ್ಮ .... | ೧.೫೦ | ೩.೦೦ |
| ಗೌರಿಯ ಮದುವೆ—ಸಿ. ಕೃಷ್ಣ .... | ೧.೨೫ | ೨.೨೫ |
| ಚಿನ್ನದ ದೋಣಿ—ರವೀಂದ್ರನಾಥ ಠಾಕೂರ್ .... | ೧.೫೦ | .... |

## ಕಾದಂಬರಿ

| | | |
|---|---|---|
| ಅವರಿಲ್ಲದೂಟ—ಎಂ. ಎಸ್. ಪುಟ್ಟಣ್ಣ .... | ೧.೭೫ | ೪.೦೦ |
| ಕಾಂತೆಯರ ಕನಸು—ಜನಾರ್ದನ ಗುರ್ಕಾರ್ .... | ೧ ೭೫ | ೪.೦೦ |
| ಗೋರಾ—ರವೀಂದ್ರನಾಥ ಠಾಕೂರ್ .... | ೩.೫೦ | ೬.೦೦ |
| ಗಂಗಾವತಾರ—ಜನಾರ್ದನ ಗುರ್ಕಾರ್ .... | ೧.೨೫ | .... |
| ಚಾಲುಕ್ಯ ವಿಕ್ರಮ—ಕೊರಟಿ ಶ್ರೀನಿವಾಸರಾವ್ .... | ೩.೦೦ | ೬.೫೦ |
| ಝಾನ್ಸಿಯರಾಣಿ ಲಕ್ಷ್ಮೀಬಾಯಿ—ವೃಂದಾವನ ಲಾಲ್‌ವರ್ಮ .... | ೩.೭೫ | .... |
| ನೌಕಾಘಾತ—ರವೀಂದ್ರನಾಥ ಠಾಕೂರ್ .... | ೨ ೦೦ | ೪.೦೦ |
| ಪ್ರೇಮಪ್ರಕರಣ—ಕೆ. ಶಂಕರ .... | ೧.೫೦ | .... |
| ಬದುಕು ಜಟಕಾಬಂಡಿ—ರಂಗ .... | ೧ ೫೦ | .... |
| ಬಲಿಪೀಠ—ಕುಲಕರ್ಣಿ ಬಿಂದುಮಾಧವ .... | ೧.೭೫ | ೪.೦೦ |
| ಭೂಗರ್ಭಯಾತ್ರೆ—ಅನು : ಅಡಿಗ .... | ೧.೭೫ | .... |
| ಭ್ರಮಾಧೀನ—ಸೇವ ನಮಿರಾಜಮಲ್ಲ .... | ೧.೫೦ | ೫.೦೦ |

| | | ಸಾದಾಪ್ರತಿ | ಉತ್ತಮಪ್ರತಿ |
|---|---|---|---|
| ಮನೆ–ಜಗತ್ತು—ರವೀಂದ್ರನಾಥ ಠಾಕೂರ್ | .... | ೨.೦೦ | ೪.೦೦ |
| ಮಮತೆಯ ಸುಳಿ—ಕೊರಟ ಶ್ರೀನಿವಾಸರಾವ್ | .... | ೧.೨೫ | .... |
| ಮಾಡಿದ್ದುಣ್ಣೋ ಮಹಾರಾಯ—ಎಂ.ಎಸ್. ಪುಟ್ಟಣ್ಣ | | ೩.೦೦ | .... |
| ಮುಸುಗತೆಗೆಯೋ ಮಾಯಾಂಗನೆ—ಎಂ. ಎಸ್. ಪುಟ್ಟಣ್ಣ | .... | ೧.೫೦ | ೪.೦೦ |
| ಮೂಲಾನಕ್ಷತ್ರ—ಶೇಷನಾರಾಯಣ | .... | ೧.೨೫ | .... |
| ಯೋಗಾಯೋಗ—ರವೀಂದ್ರನಾಥ ಠಾಕೂರ್ | .... | ೨.೫೦ | .... |
| ರಂಗಭೂಮಿ—ಕ. ಶಂಕರ | .... | ೧.೫೦ | .... |
| ವಿನೋದಿನಿ—ರವೀಂದ್ರನಾಥ ಠಾಕೂರ್ | .... | ೨.೫೦ | .... |
| ವಿವಾಹವಿಚ್ಛೇದ—ಕ. ಶಂಕರ | .... | ೧.೫೦ | .... |
| ಶುಭದಾ—ಶರಚ್ಚಂದ್ರ | .... | ೧.೫೦ | .... |
| ಸುಮತಿ ಮದನಕುಮಾರರ ಚರಿತ್ರೆ—ಎಂ.ಎಸ್. ಪುಟ್ಟಣ್ಣ | .... | ೩.೨೫ | |
| ಹವಳದ ದ್ವೀಪ—ಅನು : ಎ.ಎನ್. ಮೂರ್ತಿರಾವ್ | .... | ೧.೨೫ | |
| ಹುಲಿಯ ಬೆನ್ನೇರಿದಾಗ—ಭವಾನಿ ಭಟ್ಟಚಾರ್ಯ | .... | ೨.೫೦ | ೪.೦೦ |

## ಚರಿತ್ರೆ, ಜೀವನ ಚರಿತ್ರೆ, ಆತ್ಮಕಥೆ

| | | | |
|---|---|---|---|
| ಇವರು ಬಾಪು—ಆರ್. ಕೆ. ಪ್ರಭು | .... | ೧.೫೦ | .... |
| ಆರ‍್ಯಕೀರ್ತಿ—ಚ. ವಾಸುದೇವಯ್ಯ | .... | ೨.೨೫ | .... |
| ಎವರೆಸ್ಟ್ ವೀರ—ತೆನ್‌ಸಿಂಗ್ ಮತ್ತು ಅಲ್ಮನ್ | .... | ೫.೦೦ | .... |
| ಕರ್ಣಾಟಕಸಂಗೀತರತ್ನಗಳು—ಪ್ರೊ॥ಪಿ. ಸಾಂಬಮೂರ್ತಿ | | ೧.೬೦ | .... |
| ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ—ಎಂ.ಎಸ್. ಪುಟ್ಟಣ್ಣ | .... | ೨.೨೫ | ೩.೫೦ |
| ಗೋಖಲೆ : ನನ್ನ ರಾಜಕೀಯ ಗುರು—ಗಾಂಧೀಜಿ | | ೧.೨೫ | ೨.೫೦ |
| ಚ. ವಾಸುದೇವಯ್ಯನವರು—ಚ.ವಾ. ರಾಘವೇಂದ್ರಯ್ಯ | | ೧.೫೦ | ೩.೦೦ |
| ಛತ್ರಪತಿ ಶಿವಾಜಿ—ಚ. ವಾಸುದೇವಯ್ಯ | .... | ೨.೫೦ | .... |
| ಟಿಬೆಟ್ಟಿನ ಯೋಗಿ ಮಿಲರೇಪ—ಎಸ್. ಕೆ. ರಾಮಚಂದ್ರರಾವ್ | .... | ೧.೭೫ | ೩.೨೫ |

| | | ಸಾದಾಪ್ರತಿ | ಉತ್ತಮ ಪ್ರತಿ |
|---|---|---|---|
| ತೆನ್‌ಸಿಂಗನ ಕಥೆ—ತೆನ್‌ಸಿಂಗ್ ಮತ್ತು ಅಲ್ಮನ್ | .... | ೩·೦೦ | ೫.೦೦ |
| ದಾದಾಭಾಯಿ ನವರೋಜಿ—ಆರ್. ಪಿ. ಮಸಾನಿ | .... | ೨·೫೦ | .... |
| ನನ್ನ ಬಾಲ್ಯದ ದಿನಗಳು—ರವೀಂದ್ರನಾಥ ಠಾಕೂರ್ | | ೦·೭೫ | .... |
| ಬಾಲಗಂಗಾಧರ ತಿಲಕ್—ಟಿ. ವಿ. ಪರ್ವತೆ | .... | ೧೦·೦೦ | ೧೫·೦೦ |
| ಬೆಂಜಮಿನ್ ಫ್ರಾಂಕ್ಲಿನ್—ಆತ್ಮಕಥೆ— | .... | ೨·೭೫ | .... |
| ಬೋಧಿಯ ಬೆಳಕಿನಲ್ಲಿ—ಎಸ್. ಕೆ. ರಾಮಚಂದ್ರರಾವ್ | | ೨·೦೦ | ೩·೫೦ |
| ಭಾರತದರ್ಶನ—ಜವಾಹರಲಾಲ್ ನೆಹರು | .... | ೧೧·೦೦ | ... |
| ಭಾರತದರ್ಶನ—೨ ಜವಾಹರಲಾಲ್ ನೆಹರು | .... | ೫·೦೦ | .... |
| ಭೀಷ್ಮಚರಿತೆ—ಚ. ವಾಸುದೇವಯ್ಯ | .... | ೩·೨೫ | ೫·೦೦ |
| ಮಹಾತ್ಮಗಾಂಧಿ ಅವರ ಜೀವನಚರಿತೆ—ಲೂಯಿಫಿಷರ್ | | ೫·೫೦ | .... |
| ಮಹಾದೇವ ಗೋವಿಂದ ರಾನಡೆ—(ಅನು : ಕೂಡಲಿ ಚಿದಂಬರಂ | .... | ೧·೭೫ | ೩·೨೫ |
| ರೈಟ್ ಸಹೋದರರು—ಅನು : ಹೊಯಿಸಳ | | ೧·೨೫ | .... |
| ಶ್ರೀಮಧ್ವಾಚಾರ್ಯರು—ಎಸ್. ಕೆ. ರಾಮಚಂದ್ರರಾವ್ | | ೦·೫೦ | |
| ಹೆಲನ್ ಕೆಲರ್—ಅನು : ಚಿ. ನ. ಮಂಗಳ | .... | ೩·೦೦ | |

## ಧರ್ಮ-ವೇದಾಂತ—ಗ್ರಂಥ

| | | | |
|---|---|---|---|
| ಈಶೋಪನಿಷತ್ತು—ಡಿ. ವಿ. ಜಿ. | .... | ೦.೭೫ | .... |
| ಪುರುಷಸೂಕ್ತ—ಡಿ. ವಿ. ಜಿ. | | ಪ್ರತಿಗಳು ಮುಗಿದಿವೆ | |
| ಸತ್ಯವೇ ದೇವರು—ಗಾಂಧೀಜಿ | .... | ೨.೨೫ | ೩.೫೦ |

## ನಾಟಕ

| | | | |
|---|---|---|---|
| ಅಹಲ್ಯೆ—ಪು. ತಿ. ನರಸಿಂಹಾಚಾರ್ | .... | ೨·೫೦ | .... |
| ಅಂಚೆಯ ಮನೆ—ರವೀಂದ್ರನಾಥ ಠಾಕೂರ್ | .... | ೦·೭೫ | |
| ಆಷಾಢ ಭೂತಿ—ಎ. ಎನ್. ಮೂರ್ತಿರಾವ್ | .... | ೧·೨೫ | ೨.೫೦ |
| ಗೋಕುಲನಿರ್ಗಮನ—ಪು. ತಿ. ನರಸಿಂಹಾಚಾರ್ | .... | ೧·೨೫ | ೨·೫೦ |
| ಯಮನಸೋಲು, ವಾಲ್ಮೀಕಿಯ ಭಾಗ್ಯ—ಕುವೆಂಪು | | ೧·೦೦ | .... |
| ಬಲಿದಾನ—ರವೀಂದ್ರನಾಥ ಠಾಕೂರ್ | .... | ೧·೨೫ | ೨·೫೦ |

ಇವೇ ಮೊದಲಾದವು